# ಕಸ್ತೂರಿ

ಆಗಸ್ಟ್, ೧೯೮೩

ಬೆಲೆ: ರೂ. ೨-೫೦



# 'ಕಸ್ತೂರಿ'ಯ ಅರ್ಧವಾರ್ಷಿಕ ಪರಿವಿಡಿ

## ಮಾರ್ಚ್ ೧೯೬೩ ರಿಂದ ಅಗಸ್ಟ್ ೧೯೬೩ ರ ವರೆಗೆ

**ಕ್ರಮ: ಲೇಖನದ ಹೆಸರು, ತಿಂಗಳು, ಪುಟಸಂಖ್ಯೆ**

**ಮಾ = ಮಾರ್ಚ್, ಎ = ಏಪ್ರಿಲ್, ಮೆ = ಮೇ, ಜೂ = ಜೂನ್,**
**ಜು = ಜುಲೈ, ಅ = ಅಗಸ್ಟ್**

## ಚರ್ಚೆ-ಚಿಂತನ



## ಜೀವನ ಚರಿತ್ರೆ-ವ್ಯಕ್ತಿಚಿತ್ರ

**ಸಾಮಾನ್ಯ**



**ಹರಟೆ- ನಗೆಬರಹ**





# ಕಸ್ತೂರಿ

ಕನ್ನಡ ಡೈಜೆಸ್ಟ್



ಸಹಾಯಕ ಸಂಪಾದಕ :

ಮಾಧವ ನಾ. ಮಹಿಷಿ

◆◆

ಕಲೆ :

ಕೆ. ಬಿ. ಕುಲಕರ್ಣಿ

◆◆

ಮುಖಪುಟ :

ಮಂದಸ್ಮಿತೆ

ಚಂದಾ ದರಗಳು :

| | | |
|---|---|---|
| ಬಿಡಿ ಸಂಚಿಕೆ | ... | ೨-೫೦ |
| ೧ ವರ್ಷಕ್ಕೆ | ಅಂಚೆ ಸೇರಿ | ೨೯-೦೦ |
| ೨ ವರ್ಷಕ್ಕೆ | ,, | ೫೫-೦೦ |
| ೩ ವರ್ಷಕ್ಕೆ | ,, | ೮೨-೦೦ |

**KASTURI August 1983**


# ಬೆಳಕಿಂಡಿ

ಒಬ್ಬನನ್ನು ತಿದ್ದಬೇಕೆಂಬ ಯೋಚನೆಯೆ? ಹಾಗಾದರೆ ಅವನ ಅಜ್ಜಿಯನ್ನು ಭೇಟಿಮಾಡಿ. ಅಲ್ಲಿಂದಲೇ ತಿದ್ದುವಿಕೆ ಪ್ರಾರಂಭವಾಗಲಿ. -ವಿಕ್ಟರ್ ಹ್ಯೂಗೋ

*

ಇಪ್ಪತ್ತನೆ ವರ್ಷದಲ್ಲಿ ಎಲ್ಲರೂ ಪ್ರಜಾಪ್ರಭುತ್ವವಾದಿಗಳಾಗುತ್ತಾರಂತೆ.
-ಅಲ್ಫಾನ್ಸೊ ದಿ ಲ್ಯಾಮರಟೈನ್

*

ಶ್ರೀಮಂತ ಸಾಯುತ್ತಾನೆ. ಬ್ಯಾಂಕು ಚಿರಂಜೀವಿ. -ವೆಂಡಲ್ ಫಿಲಿಪ್ಸ್

*

ಮೂವರು ಸೇರಿ ಗುಟ್ಟನ್ನು ಗಟ್ಟಿಯಾಗಿಡಬಹುದು - ಅವರಲ್ಲಿಬ್ಬರು ಸತ್ತಿದ್ದರೆ ಮಾತ್ರ. -ಬೆಂಜಮಿನ್ ಫ್ರಾಂಕ್ಲಿನ್

*

ಆತನಿಗೆ ಜಗತ್ತೆಲ್ಲ ಗೊತ್ತು - ಜೀವಿಸುವುದನ್ನು ಬಿಟ್ಟು. -ಜೀನ್ ಫಾಂಟೇನ್

*

"ನಿಮಗೆ ಯಾವುದರಲ್ಲಿ ಆಸಕ್ತಿ?"
"ವಿಷಯದಲ್ಲಿ." -ಸ್ನೇಹಶೀಲ

---

## ಚಂದಾದಾರರಿಗೆ ಸೂಚನೆ

'ಕಸ್ತೂರಿ' ತಿಂಗಳ ಒಂದನೇ ದಿನಾಂಕದೊಳಗೇ ಪ್ರಕಟವಾಗುವುದು. ತಿಂಗಳ ೫ ನೇ ದಿನಾಂಕದೊಳಗೆ ತಲುಪದೇ ಹೋದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಪತ್ರವ್ಯವಹಾರ ಮಾಡುವಾಗ ಚಂದಾ ನಂಬರು ಹಾಕಿರಬೇಕು.

# ಈ ಸಂಚಿಕೆಯಲ್ಲಿ



**ಪುಸ್ತಕ ವಿಭಾಗ**

# ಸಹಚಿಂತನ

## ಬಿತ್ತಿ ಬೆಳೆದವರು

ಶ್ರೀ ರಾವ್‌ಬಹಾದ್ದೂರ್ ಅವರ ಪ್ರಖ್ಯಾತ ಕಾದಂಬರಿ 'ಬಿತ್ತಿ ಬೆಳೆದವರು' ಕಸ್ತೂರಿಯ (ಜುಲೈ ೮೩) ಪುಸ್ತಕ ವಿಭಾಗದಲ್ಲಿ ಕಂಡು ಸಂತೋಷವಾಯಿತು. ಮನುಷ್ಯ ಸ್ವಭಾವದ ಒಂದು ಮಾದರಿ ಇಲ್ಲಿ ಸ್ಫುಟವಾಗಿ ಮೂಡಿದೆ.

ಶ್ರೀವಿ.ಎ.ಜೋಶಿ ಅವರು ಈ ಕಾದಂಬರಿಯ ತಿರುಳನ್ನು ರಮ್ಯವಾಗಿ ಸಂಗ್ರಹಿಸಿರುವರು.

ಬೆಳಗಾವಿ —ಆರ್.ಪಿ. ಪಾಟೀಲ

ಖ್ಯಾತ ಕಾದಂಬರಿಕಾರ 'ರಾವ್‌ಬಹಾದ್ದೂರ್' ಅವರ "ಬಿತ್ತಿ ಬೆಳೆದವರು" ಉತ್ತರ ಕರ್ನಾಟಕದ ಆಡು ಭಾಷೆಯಲ್ಲಿ ಅತ್ಯಂತ ನೈಜವಾಗಿ ಮೂಡಿ ಬಂದಿದೆ. ಇದು ಕೇವಲ ಕಟ್ಟು ಕಥೆಯಲ್ಲ, ಕಲ್ಪನೆಯ ಮಾತಲ್ಲ; ನಡೆದ ಘಟನೆ ಎಂದರಿತಾಗ ಓದುಗನ ಮನದ ಮೇಲೆ ಅನೇಕ ಅಲೆಗಳು ಮೂಡಿ ಮಾಯವಾಗುತ್ತವೆ.

ಬಾಗಲಕೋಟೆ -ಬಸವರಾಜ ಭಗವತಿ

## ಅನ್ನ

ಜುಲೈ ೮೩ರ ಸಂಚಿಕೆಯಲ್ಲಿ ಮೂಡಿ ಬಂದ ಸಮತೀಂದ್ರ ನಾಡಿಗರ ಕವನ 'ಅನ್ನ' ನನಗೆ ತುಂಬಾ ಮೆಚ್ಚಿಗೆಯಾಯಿತು. ಇಂಥ ಒಳ್ಳೆಯ ಕವನಗಳನ್ನು 'ಕಸ್ತೂರಿ' ಹೆಚ್ಚು ಹೆಚ್ಚಾಗಿ ಒಳಗೊಂಡಿರಲಿ.

ಪಿರಿಯಾಪಟ್ಟಣ —ಮಲ್ಲೇಶ್‌ಕುಮಾರ್

## ಪ್ರೊ. ಕೆನ್ ವಿಲ್ಸನ್

ಭೌತವಿಜ್ಞಾನದಲ್ಲಿ ಮರು ಸಮಾನೀಕರಣದಂಥ ಮಹತ್ತರ ಸಿದ್ಧಾಂತ ನೀಡಿದ ಯುವ ವಿಜ್ಞಾನಿ ಪ್ರೊ. ಕೆನ್ ವಿಲ್ಸನ್ನರ ಸಾಧನೆಯನ್ನು ಡಾ. ವಿಜಯ ಶ್ರೀಧರರು ಪರಿಣಾಮಕಾರಿಯಾಗಿ ಮಾಡಿಕೊಟ್ಟಿದ್ದಾರೆ.

## ಸದಾಶಿವನ ಕೈಚೀಲ

'ಸದಾಶಿವನ ಕೈಚೀಲ' ಓದಿಸಿಕೊಂಡು ಹೋಗುವ ಕತೆಯಾದರೂ ಇಂಥದೇ ಕಥೆಯನ್ನು ಕೆಲ ವರ್ಷಗಳ ಹಿಂದೆ 'ಕಸ್ತೂರಿ'ಯಲ್ಲೋ 'ಪ್ರಜಾವಾಣಿ'ಯಲ್ಲೋ ಓದಿದ ನೆನಪು.

ಆಗಲೆ ಧಾರವಾಡ ಆಕಾಶವಾಣಿಯಲ್ಲಿ ಬಿತ್ತರಗೊಂಡಿರುವಾಗಲೂ ಅದನ್ನು ಸ್ಮರಿಸುವ ಸೌಜನ್ಯ ಲೇಖಕರಿಗೆ ಬೇಡವೆ?

ಭೀಮರಾಯನಗುಡಿ —ಸಿ. ಎಫ್. ಪಾಟೀಲ

[ಒಂದೇ ಬಗೆಯ ವಸ್ತುವುಳ್ಳ ಕಥೆಗಳು ಭಿನ್ನ ಭಿನ್ನ ಕಥೆಗಾರರಿಂದ ಬರುವುದು ಅಸಂಭವವೇನಲ್ಲ.

ಇದು 'ಆಕಾಶವಾಣಿ'ಯಲ್ಲಿ ಮೊದಲು ಪ್ರಸಾರಗೊಂಡ ವಿಷಯವನ್ನು ಲೇಖಕರು ಮುಂಚಿತವಾಗಿಯೇ ನಮಗೆ ತಿಳಿಸಿದ್ದರಾದರೂ ನಮ್ಮ ಕಣ್ತಪ್ಪಿನಿಂದ ಅದು ಉಳಿದುಹೋದುದಕ್ಕಾಗಿ ವಿಷಾದಿಸುತ್ತೇವೆ. —ಸಂ.]

## ಗಣಿತ

'ಪ್ರಾಚೀನ ಭಾರತದಲ್ಲಿ ಗಣಿತ' ತುಂಬ ಉಪಯುಕ್ತವಾದ ಲೇಖನ. ಇದರಿಂದ ಮದ್ದಲ್ಲದ ಕೆಲ'ಹಿತ್ತಲ ಗಿಡ'ಗಳ ಪರಿಚಯ ಸ್ಥೂಲವಾಗಿ ದೊರೆಯುವಂತಾಯಿತು 'ಮಹಾವೀರ'ನೆಂದೊಬ್ಬ ಕರ್ನಾಟಕದ ಪ್ರಸಿದ್ಧ ಗಣಿತಜ್ಞ ನಿದ್ದನೆಂಬುದು ಈ ಲೇಖನದಿಂದಲೇ ತಿಳಿದಂತಾಯಿತು.

ಇನ್ನೊಂದು ಮಾತು 'ಪರಿವರ್ತನೆ' ಮುಂತಾದವುಗಳಿಂದ 'ಶಬ್ದ ಭಾಂಡಾರ' ಬೆಳೆಯದು. ಯಾಕೆಂದರೆ ಇದೊಂದು ತೀರ ಸುಲಭದ ಶಬ್ದ. 'ಸೇರಿಳಿಸು' ಶಗಬ್ದದ ಅರ್ಥವನ್ನು ಇದೇ ಸಂಚಿಕೆಯ 'ಪದಾರ್ಥ ಚಿಂತಾಮಣಿ' (ಪುಟ-೬೯) ಯಲ್ಲಿ ಹೇಳಿಯಾಗಿದೆ. ಇಂತಹ ಅಂಶಗಳ ಬಗ್ಗೆ ದಯವಿಟ್ಟು ಜಾಗರೂಕತೆ ವಹಿಸಿ.

ಬೆಂಗಳೂರು —ಜನಾರ್ದನ ದೇವದಕೇರಿ

ಜುಲೈ 'ಕಸ್ತೂರಿ'ಯಲ್ಲಿ ಪ್ರಕಟವಾದ ಶ್ರೀ ಎಸ್. ಬಾಲಚಂದ್ರರಾಯರ 'ಪ್ರಾಚೀನ

ಸಾರ್ಥವಾಗಿದೆ. ಪಶ್ಚಿಮ ಕನ್ನಡಿಗರಿಗೆ ಪರಿಚಯ ವಿರದ ಕರ್ನಾಟಕದವನೇ ಆದ ಜೈನ ಗಣಿತಜ್ಞ ಮಹಾವೀರಾಚಾರ್ಯನ ಪರಿಚಯವನ್ನು ಮಾಡಿ ಕೊಟ್ಟಿದ್ದಾರೆ. ಅಷ್ಟೇ ಅಲ್ಲದೇ ಮಹಾವೀರಾ ಚಾರ್ಯನ 'ಗಣಿತಸಾರ ಸಂಗ್ರಹ'ದ ಕನ್ನಡ ಅನು ವಾದ ಕನ್ನಡಿಗರಿಗೆ ಸಿಗಬೇಕೆಂದು ಹಾರೈಸಿ ಅದರ ಅನುವಾದದ ಹೊಣೆಯನ್ನು ಹೊರಲು ಸಿದ್ಧರಿ ರುವ ಸಂಗತಿ ತಿಳಿದು ಸಂತೋಷವಾಯಿತು.

ಪಾಮ್ ಅವರ ಅಂಕಣ 'ಪದಾರ್ಥ ಚಿಂತಾ ಮಣಿ'ಯನ್ನು ಈ ಸಲ ಓದಿದಾಗ ಜೀವನದ ಪ್ರತಿಯೊಂದು ವ್ಯಾಪಾರದ ಮೂಲವೂ ಲೈಂಗಿಕ ಸಂಕೇತದಲ್ಲೇ ಅಡಗಿದೆಯೇನೋ ಎಂದನಿಸುತ್ತದೆ. ಕಾಮವೇ ಸೃಷ್ಟಿಗೆ ಮೂಲವೆಂದಾಗ ಅದನ್ನು ಗಮನಿಸದಿದ್ದರೆ ತಪ್ಪಾದೀತಲ್ಲ.

ಭದ್ರಾವತಿ —ಜೀವಂಧರಕುಮಾರ ಹೋತಪೇಟಿ

**ಕಲಬೆರಕೆ**

ತಮ್ಮ ಪತ್ರಿಕೆಯ ಜುಲೈ ೮೩ರ ಸಂಚಿಕೆಯಲ್ಲಿ ಪ್ರಕಟವಾಗಿರುವ 'ರೇಪ್ ಎಣ್ಣೆ ನಿರಪಾಯಕಾ ರವೇ ?' ಎಂಬ ಶ್ರೀ ವಿ. ಪ್ರಾಣೇಶರಾಯರ ಲೇಖನ ಓದಿದೆ.

ನಿಜಕ್ಕೂ ಈ ರೀತಿಯ ಶೋಷಣೆಗಳು ಹಲ ವಾರು. ವ್ಯಾಪಾರ ಮಾಡಲು ಮನಸ್ಸಿಲ್ಲದಿದ್ದರೂ ವ್ಯಾಪಾರದಿಂದಲೇ ಜೀವನ ನಿರ್ವಹಿಸಬೇಕಾದ ಅನಿವಾರ್ಯ ಪರಿಸ್ಥಿತಿಗಳಲ್ಲಿ ಖಾದ್ಯ ತೈಲಗಳ ವ್ಯಾಪಾರ ಪ್ರಾರಂಭಿಸಿದೆ. ಒಳ್ಳೆಯ ಮನಸ್ಸು ಧ್ಯೇಯ ಭಾವನೆ ಇರುವವನು ವ್ಯಾಪಾರಮಾಡು ವುದು ಎಷ್ಟು ಕಷ್ಟ ಎಂಬುದೀಗ ಸ್ಪಷ್ಟವಾಗು ತ್ತದೆ.

ನಾನು ೧೦೦% ಶುದ್ಧವಾದ ಕಡಲೆಕಾಯಿ ಎಣ್ಣೆಯನ್ನು ಮಾರುತ್ತಿದ್ದೇನೆ. ಲಾಭಾಂಶ ಬಲು ಕಮ್ಮಿ. ಇತರ ಎಲ್ಲಾ ವ್ಯಾಪಾರಿಗಳಂತೆ ಪಾಮೋ ಲಿನ್ ಎಣ್ಣೆ. (ಸರ್ಕಾರ ಇದನ್ನು ಯೋಗ್ಯ ದರದ ಅಂಗಡಿಗಳ ಮೂಲಕ ವಿತರಣೆ ಮಾಡುತ್ತಿ ದ್ದರೂ ಕಲಬೆರಕೆಕೋರರ ಕೈಗೆ ಕಾಳ ಸಂತೆಯಲ್ಲಿ ಕಲಬೆರಕೆ ಮಾಡಿದರೆ ಅಧಿಕ ಲಾಭಾಂತವನ್ನು ಸುಲಭವಾಗಿ ಪಡೆಯಬಹುದು. ಗ್ರಾಹಕರನ್ನು ಹಾಗೂ ನನ್ನನ್ನು ನಾನೇ ದ್ರೋಹ ಮಾಡಿ ಕೊಂಡು ಹಾಗೆ ಮಾಡಲಾಗದೇ ಸುಮ್ಮನಿದ್ದೇನೆ.

ನಮ್ಮ ಎಣ್ಣೆ ೧೦೦% ಶುದ್ಧವಾಗಿದ್ದರೂ ನಮ್ಮ ವ್ಯಾಪಾರವೇನೂ ಅಧಿಕವಾಗಿಲ್ಲ.

ಅದಕ್ಕಾಗಿ ಗ್ರಾಹಕರಿಗೆ ಕಲಬೆರಕೆಯ ಬಗ್ಗೆ ತಿಳುವಳಿಕೆ ನೀಡಿ ನಮ್ಮ ವ್ಯಾಪಾರ ಹೆಚ್ಚಿಸಿಕೊ ಳ್ಳುವ ಯೋಜನೆ ಹಾಕಿದೆ.

ನನ್ನ ಯೋಜನೆ ಇದು: ಕಡಲೆಕಾಯಿ ಎಣ್ಣೆ ಯಲ್ಲಿನ ಕಲಬೆರಕೆಯನ್ನು ಮನೆಯಲ್ಲಿ ಗೃಹಿಣಿ ಯರೇ ಕಂಡುಹಿಡಿಯುವ ಸುಲಭೋಪಾಯಗ ಳಿದ್ದರೆ ಅವುಗಳನ್ನು ಅಚ್ಚು ಹಾಕಿಸಿ ಗ್ರಾಹಕರಿಗೆ ಹಂಚಬೇಕೆನ್ನುವುದು. ಅದಕ್ಕಾಗಿ ನಾನು,

ಅ) ಸೆಂಟ್ರಲ್ ಫುಡ್ ಅಂಡ್ ಟೆಕ್ನಾಲಜಿಕಲ್ ರೀಸರ್ಚ್ ಇನ್‌ಸ್ಟಿಟ್ಯೂಟ್, ಮೈಸೂರು,

ಆ) ರೀಜನಲ್ ರೀಸರ್ಚ್ ಇನ್‌ಸ್ಟಿಟ್ಯೂಟ್, ಹೈದರಾಬಾದ್,

ಇ) ಸ್ಮಾಲ್ ಇಂಡಸ್ಟ್ರಿಯಲ್ ರಿಸರ್ಚ್ ಇನ್‌ಸ್ಟಿಟ್ಯೂಟ್, ದಿಲ್ಲಿ,

ಹೀಗೆ ಹಲವಾರು ಸಂಸ್ಥೆಗಳೊಡನೆ ಪತ್ರ ವ್ಯವಹಾರ ನಡೆಸಿದ್ದಕ್ಕೆ ಸಿಕ್ಕ ಫಲ – ಕಲಬೆರಕೆ ಯನ್ನು ಕಂಡುಹಿಡಿಯಲು ಸಾಧಿಸಲಾಗುವಂಥ ಸುಲಭೋಪಾಯಗಳಿಲ್ಲವೆಂದು.

ವಿಜ್ಞಾನ ಇಷ್ಟು ಮುಂದುವರಿದಿದ್ದರೂ, ನಿಜಕ್ಕೂ ಇದು ಅಷ್ಟೊಂದು ಕಷ್ಟಸಾಧ್ಯವಾದ ಕೆಲಸವೇ? ಎಂದು ಯೋಚಿಸುವಂತಾಗಿದೆ.

ಇನ್ನು ಈ ಕಾಗದ ಬರೆಯುವ ಉದ್ದೇಶ. ಶ್ರೀ ವಿ. ಪ್ರಾಣೇಶರಾಯರ ವಿಳಾಸವನ್ನು ದಯವಿಟ್ಟು, ನನಗೆ ಕಳಿಸಿಕೊಡಿ. ನನ್ನ ಪ್ರಯತ್ನ ದಲ್ಲಿ ಅವರ ನೆರವು ಸಿಗಬಹುದೆಂಬ ಆಶೆ.

ಬೆಂಗಳೂರು —ಎಂ. ಆರ್. ಶಿವಶಂಕರ್

[ ಶ್ರೀ ವಿ. ಪ್ರಾಣೇಶರಾವ್ ಶಿಕ್ಷಕರು, ಪಿ.ವಿ.ಎಸ್.ಬಿ.ಸಿ. ಹೈಸ್ಕೂಲ್, ಹಂಪಿ ರೋಡ್,

# ವಿಜಯ - ವಿಮೋಚನೆ

ಶಿವಾನಂದ ಜೋಶಿ

ನಮಗೆ ಅದು ನಡುರಾತ್ರಿಯ ಘಟನೆಯೇ. ನಮ್ಮ ಸ್ವಾತಂತ್ರ್ಯಸೂರ್ಯ ಉದಿಸಿದ ಹಾಗೆ. ಕಪಿಲ ದೇವ ಮತ್ತು ಅವರ ಪರಿವಾರ ವಿಶ್ವ-ಕ್ರಿಕೆಟ್ ಕಪ್ ಗೆದ್ದಾಗ ಇಂಗ್ಲೆಂಡಿನಲ್ಲಿ ಸಂಜೆ ೬-೩೦ ಆಗಿರಬಹುದು. ಆದರೆ ನಾವು ಅದನ್ನು ಕೇಳಿ ಆನಂದಿಸಿದಾಗ ಇಲ್ಲಿ, ನಮ್ಮ ದೇಶದಲ್ಲಿ, ರಾತ್ರಿ ಹನ್ನೊಂದು ಗಂಟೆ ಐವತ್ತೈದು ನಿಮಿಷ. ಈ ವಿಜಯ ಕೂಡ ಒಂದು ರೀತಿಯಲ್ಲಿ ವಿಮೋಚನೆಯೇ ಹೌದು. ಒಂದು ದಿನದ ದಿಢೀರ್ ಕ್ರಿಕೆಟ್‌ನಲ್ಲಿ ಬ್ರಿಟಿಶ್ ಪತ್ರಿಕೆಗಳು ನಮಗೆ "ಕುನ್ನಿ"ಗಳೆಂದು ಹಣೆಪಟ್ಟಿ ಹಚ್ಚಿಬಿಟ್ಟಿದ್ದವು. ಟೀಕೆ ಸ್ವಲ್ಪ ಖಾರವಾದರೂ ವಾಸ್ತವ ಸ್ಥಿತಿಯಿಂದ ನಾವೇನೂ ದೂರವಿರಲಿಲ್ಲ. ೧೯೭೫ರ ವಿಶ್ವ ಕಪ್ ಟೂರ್ನಿಯಲ್ಲಿ ಕೇವಲ ಒಂದೇ ಒಂದು ಗೆಲುವು. ಅದು ಕೂಡ ಕೆಳ ತರಗತಿಯ ಪೂರ್ವ ಆಫ್ರಿಕದ ವಿರುದ್ಧ. ೧೯೭೯ರಲ್ಲಿ ಅದೂ ಇಲ್ಲ. ಈ ಹಿನ್ನೆಲೆಯಲ್ಲಿ ವಿಚಾರ ಮಾಡಿದಾಗ, ಬಹುಶಃ ನಮಗಾಗಲೀ ಬ್ರಿಟಿಶ್ ಕ್ರಿಕೆಟ್ ಲೇಖಕರು ಆಗಲೀ [illegible]

ಗೆಲ್ಲುವ ತನಕ ನಾವು ಚಾಂಪಿಯನ್ ಆದೇವು ಎಂದು ನಮ್ಮಲ್ಲಿ ಯಾರೂ ಹೇಳಲು ಸಾಧ್ಯವಿಲ್ಲ. ನಿಜ ಹೇಳಬೇಕೆಂದರೆ ವೆಸ್ಟ್ ಇಂಡೀಜ್ ವಿರುದ್ಧ ಮೊದಲ ಪಂದ್ಯದಲ್ಲಿ ಗೆದ್ದಾಗಲೇ ಭಾರತ ಮಾನಸಿಕವಾಗಿ ಪ್ರುಡೆನ್ಷಿಯಲ್ ವಿಶ್ವ ಕಪ್ ಗೆದ್ದುಕೊಂಡಿತ್ತು. ಭಾರತ, ವೆಸ್ಟ್ ಇಂಡೀಜಿಗೆ ಅವರ ಮೊಟ್ಟಮೊದಲ ವಿಶ್ವ ಕಪ್ ಸೋಲನ್ನು ಒದಗಿಸದೇ ಹೋಗಿದ್ದರೆ ಬಹುಶಃ ಈ ಟೂರ್ನಿ ಕೊರೆವ ನೆರೆಗಳ ಗುಂಟ ನಡೆದುಹೋಗಬಹುದಾಗಿತ್ತು. ಆಸ್ಟ್ರೇಲಿಯದ ಮೇಲೆ ಜಿಂಬಾಬ್ವೆ ಸಾಧಿಸಿದ ಜಯ ಕ್ರಿಕೆಟ್ಟಿನ ಅಸಂಖ್ಯಾತ ಅಕಸ್ಮಿಕಗಳಲ್ಲಿ ಒಂದಾಗಿ ಹೋಗಬಹುದಿತ್ತು. ಅಂಥ ಹಾಸ್ಯಗಳಲ್ಲೇ ಕ್ರಿಕೆಟ್ಟಿನ ದೈತ್ಯ ಟೀಮುಗಳ ಸೋಲು ಟೂರ್ನಿಯ ಹಣೆಬರೆಹವನ್ನೇ ಬದಲಿಸಿತು.

ಮೊದಲ ಪಂದ್ಯದಲ್ಲಿ ವೆಸ್ಟ್ ಇಂಡೀಜನ್ನು ಸೋಲಿಸಿದಾಗಲೂ ಭಾರತದ ಬಗೆಗೆ ಬ್ರಿಟಿಶ್ ಪತ್ರಿಕೆಗಳು ಮತ್ತು [illegible]

ಲೆಕ್ಕಾಚಾರವನ್ನು ಯಾರಾದರೂ ಹಾಕಿದ್ದರೆ ಅವರು ವೆಸ್ಟ್ ಇಂಡೀಜಿನ ನಾಯಕ ಕ್ಲೈವ್ ಲಾಯ್ಡ್ ಒಬ್ಬರೇ. ಟೂರ್ನಿಗೆ ಬಹು ಮುಂಚೆಯೇ ಭಾರತದ ಚಕಿತಗೊಳಿಸುವ ಶಕ್ತಿಯ ಬಗ್ಗೆ ಎಚ್ಚರ ನೀಡಿದ್ದ ಆಸ್ಟ್ರೇಲಿಯದ ನಾಯಕ ಕಿಮ್ ಹ್ಯೂಜ್ ಅವರಿಗೆ ಸಹ ಜಾಣ ತಮಗೇ ಪಟ್ಟೀತೆನ್ನುವ ಕಲ್ಪನೆ ಇರಲಿಲ್ಲ.

ಆಸ್ಟ್ರೇಲಿಯವನ್ನು ಅನುಮಾನಾತೀತ ರೀತಿಯಲ್ಲಿ ಹಣಿದ ಜಿಂಬಾಬ್ವೆಯನ್ನು ಭಾರತ, ತೀರ ಸುಲಭವಾಗಿ ಸೋಲಿಸಿದಾಗಲೂ, ಭಾರತೀಯರ ಗೆಲ್ಲುವ ಅವಕಾಶವನ್ನು ಬ್ರಿಟಿಶ್ ಪರಿಣಿತರು ೪೦-೧ಕ್ಕಿಂತ ಮೇಲೇರಿಸಲಿಲ್ಲ. ಭಾರತೀಯರೆಂದರೆ ಗೆಲ್ಲುವವರೇ ಅಲ್ಲವೆನ್ನುವ ಈ ನಿಲುವು. ಭಾರತದ ಬಗ್ಗೆ ಪ್ರೇಮ-ದ್ವೇಷಗಳ ತೂಗುಯ್ಯಾಲೆಯಲ್ಲಿ ಸದಾ ತುಯ್ದಾಡುವ ಬ್ರಿಟಿಶ್ ಮನೋಭೂಮಿಕೆಗೆ ತಕ್ಕದೇ ಆಗಿತ್ತು. ಬ್ರಿಟಿಶ್ ಬುದ್ಧಿ ಬದಲಾಗಲು ಅದಕ್ಕೆ ಆಘಾತವೇ ಆಗಬೇಕು. ಉಪಾಂತ್ಯಕ್ಕೆ ನಡೆದ ಶರ್ಯತ್ತಿನಲ್ಲಿ ಆಸ್ಟ್ರೇಲಿಯಾ ಮಣ್ಣು ಮುಕ್ಕಿದಾಗ, ಇಂಗ್ಲೆಂಡಿಗೆ ಭಾರತ ಎದುರಾಳಿಯಂತೆ ಎಂದು ಅವರು ಗೊಣಗಿದರು. ಓಲ್ಡ್ ಟ್ರಾಫರ್ಡಿನ ಕೆಂಪು ಮಣ್ಣಿನಲ್ಲಿ ಭಾರತದ ಮಹತ್ವಾಕಾಂಕ್ಷೆಯನ್ನು ಹುಗಿದು ಬಿಡುವ ಅವರ ಹಂಬಲ ದಳ್ಳುರಿಯಾಗಿ ಕಾಣಿಸಿತ್ತು. ಉಪಾಂತ್ಯ ತಲುಪಿದರೆ ಸಾಕೆಂಬ ಸಮಾಧಾನದಿಂದ ಇದ್ದ ಭಾರತೀಯರಿಗೆ ಬ್ರಿಟಿಶ್ ಪತ್ರಿಕೆಗಳ ಅಸಡ್ಡೆ ಒಂದು ಆಹ್ವಾನವಾಯಿತು. ಇಂಗ್ಲೆಂಡನ್ನು ಹಣಿಯಬೇಕೆಂಬ ನಿರ್ಧಾರ, ಹಣಿಯಲು ಸಾಧ್ಯವೆಂಬ ಆತ್ಮವಿಶ್ವಾಸ ಅವರ ಧಮನಿಗಳಲ್ಲಿ ಹರಿದುವು. ಭಾರತ ಕಳೆದುಕೊಳ್ಳುವುದೇನೂ ಇರಲಿಲ್ಲ. ಗೆದ್ದರೆ, ಗೌರವ, ಸೋತರೆ ವೀರಸ್ವರ್ಗ ಎನ್ನುವ ಮನೋಧರ್ಮ ಅವರನ್ನು ಹೋರಾಟಕ್ಕೆ ಹಚ್ಚಿದುವು. ಚರ್ಚಿಲ್ಲರ ಕೈಯಿಂದ ನಮ್ಮ ಸ್ವಾತಂತ್ರ್ಯವನ್ನು ಕಿತ್ತುಕೊಳ್ಳಲು ನಡೆದ ಹೋರಾಟದ ಮಿನಿ ಪ್ರತಿರೂಪ ಓಲ್ಡ್ ಟ್ರಾಫರ್ಡಿನಲ್ಲಿ ಮರುಕಳಿಸಿತ್ತು. "ನಮ್ಮ ಸವಾಲು ಸ್ವೀಕರಿಸಿ" ಎಂದು ಕಪಿಲ ಇಂಗ್ಲೆಂಡಿಗೆ

ಈ ಪಂದ್ಯವನ್ನು ಭಾರತ ಗೆಲ್ಲುತ್ತದೆಂದು ಯಾರೂ ನಿರೀಕ್ಷಿಸಿರಲಿಲ್ಲ. ನಮ್ಮ ಬ್ಯಾಟ್ಸ್‌ಮನ್‌ರು, ಬೌಲರರು ಮತ್ತು ಕ್ಷೇತ್ರರಕ್ಷಕರು ಚೆನ್ನಾಗಿ ಎಣ್ಣೆಯುಂಡ ಯಂತ್ರದಂತೆ ಚಲಿಸಿದರು.

ಪತ್ರಿಕೆಗಳು ಇಂಗ್ಲೆಂಡಿನ ಗುಣ ವೈಶಿಷ್ಟ್ಯ ಎಂದು ಹಾಡಿಹೊಗಳಿದ್ದ ದಕ್ಷತೆ ಮತ್ತು ಯೋಜಿತ ರೀತಿಯಲ್ಲಿ ಭಾರತೀಯರು ಎದುರಾಳಿಗಳನ್ನು ಪಕ್ಷಪಾತಿ ಪ್ರೇಕ್ಷಕ ಸಮೂಹದೆದುರು ಚಚ್ಚಿ ಹಾಕಿದರು. ಇಂಗ್ಲೆಂಡ್ ಎಷ್ಟೇ ಪ್ರಬಲವಾಗಿರಲಿ— ಆಘಾತಗಳನ್ನು ಸಹಿಸುವ ಶಕ್ತಿ ಅದಕ್ಕಿಲ್ಲ ಎಂದು ನಾನು ಮೊದಲೇ ಬರೆದಿದ್ದೆ. ಇಂಗ್ಲೆಂಡ್ ದಾಳಿಯೆಂದರೆ—ಶಾಲಾ ಟೀಮಿನ ಬೌಲಿಂಗ್ ಎಂಬಂತೆ ಪಾಟೀಲ ಹಾಗೂ ಶರ್ಮಾ ಅವರನ್ನು ಹಣಿದರು. ಆರು ವಿಕೆಟ್‌ಗಳ ಅಂತರ. ಇಂಗ್ಲೆಂಡಿಗೆ ಚೇತರಿಸಿಕೊಳ್ಳಲಾಗದ ಪೆಟ್ಟು.

"ಇದು ಅತ್ಯುನ್ನತ ಸಾಂಘಿಕ ಪ್ರದರ್ಶನ. ಭಾರತೀಯರು ಬಹಳ ಚೆನ್ನಾಗಿ ಆಡಿದರು. ಅವರನ್ನು ಸಂಪೂರ್ಣ ತಪ್ಪಾಗಿ ಅಂದಾಜು ಮಾಡಲಾಗಿದೆ. ಅವರು ಸೋಲುತ್ತಾರೆಂದೇ ಜನ ಏಕೆ ಯಾವಾಗಲೂ ನಿರೀಕ್ಷಿಸುತ್ತಾರೆ ಎಂಬುದೇ ನನಗೆ ಅರ್ಥವಾಗಿಲ್ಲ" ಎಂದು ಪಂದ್ಯದ ಕೊನೆಗೆ ಇಂಗ್ಲೆಂಡಿನ ನಾಯಕ ಬಾಬ್ ವಿಲ್ಲಿಸ್ ಹೇಳಬೇಕಾಯಿತು. ಈ ಔದಾರ್ಯವೇ ನಮ್ಮ ನಿಜವಾದ ಗೆಲುವು.

ಡೆನಿಸ್ ಲಿಲಿ ಹೇಳಿದರು. "ಕೊನೆಯಲ್ಲಿ ಗೆಲ್ಲುವವರು ವೆಸ್ಟ್ ಇಂಡಿಯನ್ನರೇ" ಲಾಯ್ಡ್ ಮಾತ್ರ ವಾಸ್ತವತೆಯಿಂದ ದೂರ ಸರಿಯಲಿಲ್ಲ. "ಭಾರತ ಬಹಳ ಸುಧಾರಿಸಿದ ತಂಡ. ಲಘುವಾಗಿ ಪರಿಗಣಿಸುವಂತಿಲ್ಲ."

ಅಂತಿಮ ಪಂದ್ಯದ ಫಲಿತಾಂಶ ಈಗ ಕ್ರಿಕೆಟ್ ಇತಿಹಾಸದ ಒಂದು ಭಾಗ. ನಮ್ಮ ಮಟ್ಟಿಗೆ ಒಂದು ಸುವರ್ಣ ಅಧ್ಯಾಯ. ವೆಸ್ಟ್ ಇಂಡೀಜನ್ನು ಸೋಲಿಸಲು ಭಾರತ ಬಹಳ ಕಷ್ಟ ಪಡಲಿಲ್ಲ. ಬಹುಶಃ ಭಾರತದ ಕೈ ಮೇಲಾದ ನಂತರ ಅವರಿಗೆ ಆಸೆ ಉಳಿದಿರಲಿಲ್ಲ. ಸಭ್ಯ ಗೃಹಸ್ಥರಂತೆ ಅವರು ವಿಧಿಲಿಖಿತವನ್ನು ಒಪ್ಪಿಕೊಂಡರು.



ಇಂಗ್ಲೆಂಡಿಗೆ ಹೋದ ಭಾರತೀಯರು, ಜಗತ್ತಿನ ನಿರೀಕ್ಷೆ ಮೀರಿ, ಅಷ್ಟೇ ಚೆನ್ನಾಗಿ ಆಡಿ ಬೃಹತ್ ಬೆಳ್ಳಿಯ ಕಪ್ಪನ್ನು ಗೆದ್ದು ತಂದರು. ಯಾವ ದೇಶಾಭಿಮಾನಿ ಭಾರತೀಯನೂ ತಾನು ಆಗ ಲಾರ್ಡ್ಸ್‌ನಲ್ಲಿ ಇರಲಿಲ್ಲವಲ್ಲ ಎಂದು ಹಳಹಳಿಸದಿರಲಾರ. ಈ ಪ್ರಸಂಗ ರಾಷ್ಟ್ರೀಯ ವಿಜಯೋತ್ಸವದ ಪ್ರಸಂಗ. ಅದು ರಾಷ್ಟ್ರೀಯ ಹೆಮ್ಮೆ. ಅಷ್ಟೇ ದೊಡ್ಡ ಹೊಣೆ, ದೊಡ್ಡ ಭಾರ. ವಿಜಯೋತ್ಸವ ಕೂಡ ಈ ಭಾರವನ್ನು ಕಡೆಗಣಿಸಲಾಗದು. ಗೆದ್ದವರಿಗೇ ಸವಾಲು ದೊಡ್ಡದು.

೧೯೭೫ರಲ್ಲಿ ಕೌಲಾಲಂಪುರದಲ್ಲಿ ಭಾರತ ಹಾಕಿ ವಿಶ್ವ ಕಪ್ ಗೆದ್ದ ನಂತರ ಇದೇ ನಮ್ಮ ದೊಡ್ಡ ಸಾಧನೆ. ಹಾಕಿ ವಿಶ್ವ ಕಪ್ ಪಾಕಿಸ್ತಾನದಲ್ಲಿದೆ. ಕ್ರಿಕೆಟ್ ವಿಶ್ವ ಕಪ್ ಭಾರತದಲ್ಲಿದೆ. ಅವು ಸ್ಥಳ ಬದಲಾಯಿಸುವುದಾದರೆ ಹಾಕಿ ಕಪ್ ಇಲ್ಲಿಗೆ ಬರಲಿ, ಕ್ರಿಕೆಟ್ ಕಪ್ ಅಲ್ಲಿಗೆ ಹೋಗಲಿ:

# ಬಿರ್ಲಾರೊಂದಿಗೆ ಕಳೆದ ಕ್ಷಣಗಳು

**ಶಿಲಜೋ**

ಹೃಷಿಕೇಶದ ಗಂಗಾತಟದಲ್ಲಿ ಭವ್ಯ ವಿಶಾಲ ವಿಠ್ಠಲ ಮಂದಿರವೊಂದು ನಿಂತಿದೆ. ಹಿಮಾಲಯದ ಚಂದ್ರಭಾಗಾ ಮತ್ತು ಗಂಗಾ ನದಿಗಳು ಕೂಡುವ ಈ ಪವಿತ್ರ ಸಂಗಮ ಕ್ಷೇತ್ರದಲ್ಲಿ ಶ್ರೀ ವಿಠ್ಠಲ ಮಂದಿರವನ್ನು ನಿರ್ಮಿಸಿದವರು ನಮ್ಮ ದೇಶದ ಅತ್ಯಂತ ಶ್ರೇಷ್ಠ ದಾನಿ ಶ್ರೀ ಘನಶ್ಯಾಮದಾಸ ಬಿರ್ಲಾ ಅವರು. ಭಾರತದ ಶ್ರೇಷ್ಠ ಉದ್ಯಮದಾರ, ಮಹಾತ್ಮಾ ಗಾಂಧಿಯವರ ನಿಕಟವರ್ತಿ ಶ್ರೀ ಬಿರ್ಲಾ ರವರಿಗೆ ನಮ್ಮ ಸರಕಾರವು ಪದ್ಮಭೂಷಣ ಪ್ರಶಸ್ತಿಯನ್ನಿತ್ತು ಗೌರವಿಸಿದೆ. ಅವರು ಮೂವತ್ತೆರಡು ವರ್ಷದವರಿರುವಾಗಲೇ ಆಗಿನ ಬ್ರಿಟಿಶ್ ಸರಕಾರವು ಅವರಿಗೆ ನೈಟ್‌ಹುಡ್ ಕೊಡಮಾಡಿತ್ತು. ಆದರೆ ಸ್ವಾತಂತ್ರ್ಯಪ್ರೇಮಿಯಾದ ಅವರು ಈ ಗೌರವವನ್ನು ಸ್ವೀಕರಿಸದೇ ನಿರ್ಲಿಪ್ತತೆಯಿಂದ ನಿರಾಕರಿಸಿದರು. ಇತ್ತೀಚೆ ರಾಜಸ್ಥಾನ ವಿಶ್ವವಿದ್ಯಾಲಯದವರು ಈ ಶ್ರೀಮಂತ ವಿದ್ಯಾಪ್ರೇಮಿ ಉದ್ಯಮದಾರನಿಗೆ ಡಿ. ಲಿಟ್. ಪದವಿಯನ್ನು ಕೊಟ್ಟು ಸತ್ಕರಿಸಿದ್ದುಂಟು. ಶ್ರೀ ಘನಶ್ಯಾಮದಾಸ ಬಿರ್ಲಾ ಅವರು ಹೆಸರಿಗೆ ತಕ್ಕಂತೆ ಒಬ್ಬ ಘನ ವ್ಯಕ್ತಿ. ಜಗತ್ತಿನ ಅತ್ಯಂತ ಪ್ರಸಿದ್ಧ ಶ್ರೀಮಂತರಲ್ಲಿ ಅವರೊಬ್ಬರು. ಆದರೆ ಅವರಂತಹ ಉದಾರ ಇರಲಿಕ್ಕಿಲ್ಲ. ಅವರ ನಿಕಟವರ್ತಿಗಳಿಗಷ್ಟೇ ಅವರ ಮಾನವೀಯ ದಯಾಳುತನ, ಔದಾರ್ಯಗಳು ಅರಿವಾಗಲು ಸಾಧ್ಯ. ಹೃಷಿಕೇಶದ ನೂರಾರು ಆಶ್ರಮಗಳಿಗೆ ಅವರ ದೇಣಿಗೆ ದಾನಗಳು ಒಂದಿಲ್ಲೊಂದು ಬಗೆಯಲ್ಲಿ ದೊರೆತು ಹಿಮಾಲಯದ ಯಾತ್ರಿಕರಿಗೆ, ಭಕ್ತ, ವೇದಾಂತ, ಆಧ್ಯಾತ್ಮ ಸಾಧಕರಿಗೆ ಅವಿಸ್ಮರಣೀಯ ಸಹಾಯವಾಗಿದೆ.

ಶ್ರೀ ಬಿರ್ಲಾ ಒಬ್ಬ ದೊಡ್ಡ ದಾನಿ, ದೊಡ್ಡ ಉದ್ಯಮದಾರ. ದೇಶ ವಿದೇಶಗಳಲ್ಲಿ ಅವರ ನವನವೀನ ಉದ್ಯಮಗಳು ಅಭಿವೃದ್ಧಿಗೊಂಡಿರುತ್ತವೆ. ಅರಿವೆ, ಕಾಗದ, ಸಕ್ಕರೆ, ಚಹ, ಸಿಮೆಂಟು, ಬೈಸಿಕಲ್, ಯಂತ್ರೋಪಕರಣಗಳು, ಮೋಟಾರ್ ಯಂತ್ರಭಾಗಗಳು, ಬ್ಯಾಂಕಿಂಗ್, ವಿಮೆ ಹೀಗೆ ಅನೇಕ ಕ್ಷೇತ್ರದಲ್ಲಿ ಅವರ ಉದ್ಯಮಗಳು ವಿಸ್ತಾರಗೊಂಡಿವೆ. ಭಾರತದ ಆರ್ಥಿಕ ನೆಲೆಗಟ್ಟಿಗೆ ಶ್ರೀ ಬಿರ್ಲಾರ ಔದ್ಯಮಿಕ ದೇಣಿಗೆ ಬಹು ದೊಡ್ಡದು. ಸ್ವತಂತ್ರ ಭಾರತದ ಆರ್ಥಿಕ ಬೆಳವಣಿಗೆಗಾಗಿ ಭಾರತ ಸರಕಾರವು ಒಂದು ಯೋಜನೆಯನ್ನು ಪ್ರಾರಂಭಿಸುವ ಮೊದಲೇ ಶ್ರೀ ಬಿರ್ಲಾ ಅವರು ಇತರ ಶ್ರೀಮಂತ ಉದ್ಯಮದಾರರ ಸಹಕಾರದೊಂದಿಗೆ 'Bombay Plan' ಎಂಬ ಒಂದು ಪ್ರಯೋಜನೀಯ ಆರ್ಥಿಕ ಬೆಳವಣಿಗೆಯ ಕಾರ್ಯಕ್ರಮವನ್ನು ದೇಶಕ್ಕೆ ಒದಗಿಸಿದ್ದುಂಟು. ಶ್ರೀ ಬಿರ್ಲಾ ಮತ್ತು ಅವರ ಮನೆತನ ದೇಶದ ಇತಿಹಾಸದಲ್ಲಿ ಔದ್ಯಮಿಕವಾಗಿಯಂತೂ ಸರಿಯೇ, ದಾನ, ದತ್ತಿ, ದೇಣಿಗೆಗಳಿಗೂ ಪ್ರಸಿದ್ಧವಿರುತ್ತದೆ. ಎಲ್ಲಿ ದೇವಾಲಯ, ಮಠಮಂದಿರ, ವಿದ್ಯಾಲಯ, ದವಾಖಾನೆ, ಛತ್ರ ಇತ್ಯಾದಿ ನಿರ್ಮಾಣವಿದ್ದರೆ ಅಲ್ಲಿ ಶ್ರೀ ಬಿರ್ಲಾರ ಉದಾರ ಹಸ್ತವಿದ್ದೇ ಇರುತ್ತದೆ. ಅಸಹಾಯಕರು, ಅನಾಥರಿಗಂತೂ ಅವರೊಬ್ಬ ವರದಾನ. ಸಾರ್ವಜನಿಕ ಸೇವೆಯಲ್ಲಿ ಅವರು ಒಬ್ಬ ನಿಷ್ಠಾವಂತ ಕಾರ್ಯಕರ್ತ.

ನಾನು ಹೃಷಿಕೇಶದಲ್ಲಿ ಶ್ರೀ ವಿಠ್ಠಲ ಮಂದಿರದಲ್ಲಿ ಪಾಂಡುರಂಗನ ಪೂಜಾ ಸೇವೆಯಲ್ಲಿದ್ದಾಗ ಒಂದು ಬಾರಿ ಶ್ರೀ ಬಿರ್ಲಾ ಅವರು

ರಂಗನ ದರ್ಶನಕ್ಕೆ ಬಂದರು. ಯಾವಾಗ ಹೃಷಿಕೇಶಕ್ಕೆ ಅವರು ಬಂದರೂ ಶ್ರೀ ವಿಠ್ಠಲಾಶ್ರಮಕ್ಕೆ ಭೇಟಿ ಕೊಡುತ್ತಿದ್ದರು. ನಾನು ಅಲ್ಲಿರುವಾಗ ಕೂಡ ಒಂದೆರಡು ಸಲ ಅವರು ಬಂದುದುಂಟು. ಮೊದಲನೆಯ ಬಾರಿಗೆ ಅವರು ಬರುತ್ತಾರೆಂಬ ಸುದ್ದಿ ಆಶ್ರಮಕ್ಕೆ ತಲುಪುತ್ತಲೇ ಆಶ್ರಮದ ಮ್ಯಾನೇಜರ್ ಶ್ರೀ ಪೇಠ ನನಗೆ ಬೆಳಗ್ಗೆಯೇ ಹೇಳಿದರು, "ಜೋಶೀ ಬುವಾ, ಆಜ ಬಿರ್ಲಾಜಿ ದರ್ಶನಾಲಾ ಯೇಣಾರ ಆಹೆ. ಲೌಕರಚ ಪೂಜಾ ಕರಾ..." ನಾನು ಯಾವ ಉದ್ವಿಗ್ನತೆಯಿಲ್ಲದೆ ದೈನಂದಿನ ಸ್ವಾಭಾವಿಕತೆಯಿಂದಲೇ ಶ್ರೀ ವಿಠ್ಠಲನ ಪೂಜೆ ಅರ್ಚನೆ ಸೇವೆ ಮುಗಿಸಿದೆ. ಶ್ರೀಗಂಧ ಹಚ್ಚಿ ಕಸ್ತೂರಿ ತಿಲಕವಿಡುವ ಕೊನೆಯ ಅಂಕ. ಪೇಠ ಓಡಿ ಬಂದು, "ಬಿರ್ಲಾಜಿ ಆಲೇ" ಎಂದು ಆರತಿಗೆ ಅಣಿ ಮಾಡಿದರು. ಪೇಠ ತುಂಬ ಒಳ್ಳೆಯ ಮನುಷ್ಯ. ತುಪ್ಪದ ಪಂಚಾರತಿ ಹಚ್ಚಿ ನನಗೆ ಹೆದರದಿರಲು ಪ್ರೋತ್ಸಾಹ ನೀಡಿದರು. ಶ್ರೀ ವಿಠ್ಠಲನಿಗೆ ನಿತ್ಯ ತಾಯಿಜೀ ಭಕ್ತಿಯಿಂದ ತಯಾರಿಸುತ್ತಿದ್ದ ಅಂದಿನ ಸುಂದರ ಪುಷ್ಪಗಳ ಹಾರವನ್ನು ಶ್ರೀ ವಿಠ್ಠಲನ ಕೊರಳಿಗೆ ತುದಿಗಾಲಿನಿಂದ ನಿಂತು ಅಲಂಕರಿಸಿದೆ. ಅಲ್ಲಿಗೆ ನನ್ನ ಸೇವೆ ಮುಗಿಯಿತು. ನನ್ನ ಎಲ್ಲ ಸೇವೆ ನಿಮಿತ್ತ ಮಾತ್ರ. ಅದು ವಿಠ್ಠಲನಿಗೇ ಗೊತ್ತು.

ಶ್ರೀ ಬಿರ್ಲಾ ಬಂದರು. ಹಿಮಾಲಯದ ಬೆಟ್ಟದ ತಪ್ಪಲಲ್ಲಿ ಸುಂದರವಾಗಿ ಮುಕುಟಮಣಿಯಂತೆ ನಿಂತಿರುವ ಶ್ರೀ ಬಿರ್ಲಾ ಅವರೇ ನಿರ್ಮಾಣ ಕಾರ್ಯಕ್ಕೆ ನೆರವಾದ ಮಂದಿರದ ವಿಶಾಲವಾದ ಎತ್ತರದ ಪಾವಟಿಗೆಗಳನ್ನೇರಿ ಪರಿವಾರದೊಂದಿಗೆ ಮಂದಿರ ಪ್ರವೇಶಿಸಿದರು. ವಿಶಾಲ ಮಂದಿರದ ಆಲಯದ ನೆಲದ ಸಿಮೆಂಟು ಇನ್ನೂ ಆಗಬೇಕಿತ್ತು. ಆಲಯದ ಆವರಣ ತುಂಬೆಲ್ಲ ಮೊನಚಾದ ಕಲ್ಲು ಹರಳುಗಳನ್ನು ಹಾಕಲಾಗಿತ್ತು. ಶ್ರೀ ಪಾಂಡುರಂಗನ ಭಕ್ತ ಶ್ರೀ ಬಿರ್ಲಾ ಪ್ರವೇಶ ದ್ವಾರದ ಬಳಿಯೇ ತಮ್ಮ ಪಾದಕವಚಗಳನ್ನು ಕಳಚಿ ಬರಿಗಾಲಿನಿಂದ ಆಲಯದ ಉದ್ದಕ್ಕೂ ನೇರವಾಗಿ ಗರ್ಭಗುಡಿ ಪ್ರವೇಶಿಸಿದರು. ಅದನ್ನು ನೋಡಿದ ನಮಗೆಲ್ಲರಿಗೂ ದಿಗ್ಭ್ರಮೆಯಾಯಿತು. ಅವರ ಜೊತೆ ಆಶ್ರಮದ ಸಂಸ್ಥಾಪಕ ಅಧ್ಯಕ್ಷ ಶ್ರೀ ವಸಂತ ಚಿಟನೀಸ್, ಸೆಕ್ರೆಟರಿ ಶ್ರೀ ತೆಂಡೂಲಕರ, ಶ್ರೀಮತಿ ತಾಯೀಜಿ ಅವರೆಲ್ಲ ಇದ್ದರು. ಆಶ್ರಮದ ಅತಿ ಹಳೆಯ ಬಂಧು ನಾವು 'ಸಾಂತಾಕ್ಲಾಜ್' ಎಂದು ಕರೆಯುತ್ತಿದ್ದ ಋಷಿ ಸದೃಶ ಬಿಳಿ ಗಡ್ಡದ ರತನ್ ಕಾಕಾ ಇದ್ದರು. ಬಿರ್ಲಾರೊಂದಿಗೆ ಅವರ ಬಂಧು ಶ್ರೀ ದುರ್ಗಾದಾಸ ಮೂಂಡೆಲಿಯಾ, ಶ್ರೀ ಬಸಂತಕುಮಾರ ಬಿರ್ಲಾ, ಶ್ರೀಮತಿ ಸರಳಾ ಜೇನ್ ಬಿರ್ಲಾ ಅವರೆಲ್ಲ ಇದ್ದರು. ಎಲ್ಲರೂ ಭಕ್ತಿ ಪುನೀತರಾಗಿದ್ದರು.

ಶ್ರೀ ಘನಶ್ಯಾಮದಾಸ ಬಿರ್ಲಾ ನೇರವಾಗಿ ಭಕ್ತನ ದೀನ ಭಂಗಿಯಲ್ಲಿ ಬಾಗಿ ನಡೆಯುತ್ತ ಪರಮಾತ್ಮನ ಪಾದಾರವಿಂದಗಳಿಗೆ ತಮ್ಮ ಹಣೆ ಇಟ್ಟು ವಂದಿಸಿದರು. ಈ ಘನಶ್ಯಾಮ ಈಗಿಲ್ಲ. ಮೊನ್ನೆ ತಾನೇ ಲಂಡನ್ನಿನಲ್ಲಿ ಭೌತಿಕ ದೇಹ ತ್ಯಜಿಸಿದರೆಂದು ಸುದ್ದಿ ಬಂತು. ಅವರ ನೆನಪು ನನಗೆ ಮರುಕಳಿಸಿತು. ಅವರ ಸ್ಮೃತಿ ಅವಿಸ್ಮರಣೀಯವಾಗಿ



ಲೆಂದು ಈ ಬರಹ.

ಅಂದು... ಪರಮಾತ್ಮನ ಪಾದಾರವಿಂದಗಳಿಂದ ತಲೆ ಎತ್ತಿ ಹಿಂದೆ ಸರಿದು ಮತ್ತೆ ಕೈ ಜೋಡಿಸಿ ವಂದಿಸಿ ನಿಂತರು. ಶ್ರೀ ಬೀರ ಪಂಚಾರತಿ ಹಚ್ಚಿದ. 'ಯುಗೇ ಅಠ್ಠಾವೀಸ್ ವಿಟೇವರೀ ಉಭಾ...' ಮಂಗಳ ಹಾಡಿನೊಂದಿಗೆ ಆರತಿಯು ಶ್ರೀ ವಿಠ್ಠಲನಿಗೆ ಪ್ರಿಯವಾದ ವಿಶಿಷ್ಟ ಶೈಲಿಯಲ್ಲಿ ಆಯಿತು. ಬಿರ್ಲಾ ತೀರ್ಥ, ಪ್ರಸಾದ ಸ್ವೀಕರಿಸಿ ಮಂದಿರದ ಯೋಗಕ್ಷೇಮ ಸಮಾಚಾರ ವಿಚಾರಿಸಿದರು. ಆಯಿತು. ನವಕೋಟಿ ನಾರಾಯಣನೊಂದಿಗೆ ಶ್ರೀ ವಿಠ್ಠಲ ನಾಲ್ಕೆಂಟು ಕ್ಷಣ ಕಳೆದ. ಆದರೆ ಆ ವಿಠ್ಠಲನಿಗೆ ಅದೆಷ್ಟು ಯುಗಗಳೋ. ಶಂಖ ಪದ್ಮಪಾಣಿಯಾಗಿ ನಿಂತ ಅವನಿಗೇ ಗೊತ್ತು ಈ ಬ್ರಹ್ಮಾಂಡ ಸೃಷ್ಟಿಯ ನಿಯಮ. ನಾವೆಲ್ಲ ಆ ಭವ್ಯ ಪುನೀತಕ್ಷಣಗಳನ್ನು ಜಗತ್ತಿನ ಒಬ್ಬ ಶ್ರೇಷ್ಠ ಪುರುಷನೊಂದಿಗೆ ಕಳೆದೆವು. ಅದು ಒಬ್ಬ ಮಹಾನ್ ಭಕ್ತನ ಸಾನ್ನಿಧ್ಯದಲ್ಲಿ. ಹಿಂದೆ ವಿಠ್ಠಲನು ನವಕೋಟಿ ನಾರಾಯಣನೆನಿಸಿದ್ದ ಶ್ರೀನಿವಾಸನಾಯಕನನ್ನು ಪರೀಕ್ಷೆ ಮಾಡಿ ಅವನನ್ನು ಒಬ್ಬ ದಾಸನನ್ನಾಗಿ ಮಾಡಿದ. ಅವನ ಸಂಪತ್ತನೆಲ್ಲ ದೂರ ಮಾಡಿದ. ಈಗ ವಿಠ್ಠಲ ಸುಮ್ಮನೆ ಏಕಿದ್ದಾನೆಂದು ನನಗೆ ವಿಚಾರವಾಯಿತು. ಈ ನವಕೋಟಿ ನಾರಾಯಣನನ್ನು ದಾಸನನ್ನಾಗಿ ಮಾಡಿ ಪುರಂದರದಾಸನನ್ನಾಗಿಸಬಾರದೇ? ಆಗಿಸಲಾರನೇ? ಅದು ಅವನಿಗೇ ಗೊತ್ತು. ಈ ನವಕೋಟಿ ನಾರಾಯಣ ಉದಾರಿ, ಅವನೋ ಮಹಾ ಜಿಪುಣ. ದೇವರಿಗೆ ತಾರತಮ್ಯವಿಲ್ಲವೆಂದು ಹೇಗೆ ಹೇಳುವುದು?

ಬಿರ್ಲಾ ಭಕ್ತಪರಿವಾರ ವಿಠಲನಿಂದಾಚೆ ಶ್ರೀ ರುಕ್ಮಿಣಿಯ ದರ್ಶನ ಪಡೆದರು. ಶ್ರೀ ಅವಿನಾಶೇಶ್ವರನ ದರ್ಶನ ಪಡೆದರು. ರತನಕಾಕಾ ಶ್ರೀ ಅವಿನಾಶೇಶ್ವರನಿಗೆ ಮಾಡಿದ ಆರತಿ ನನಗೆ ಅಬ್ಬಾ ಅನಿಸಿತು. ನಿಂತು ಆರತಿ ಮಾಡಮಾಡುತ್ತಲೇ ಒಮ್ಮೆಗೇ ಮೊಣಕಾಲೂರಿ ಒಳ್ಳೇ ಧೀರತನದಿಂದ ಆರತಿ ಬೆಳಗಿದರು. ಅದೊಂದು ಧೀಮಂತ ಆರತಿ. 'ಶಿವ'ನೆಂದರೇ ಹಾಗೆ. ಶಿವನ ಭಕ್ತರ ಆಟಾಟೋಪ ಎಲ್ಲಿ, ಹೇಗೆ ತೋರಿಯುತ್ತದೆ ಹೇಳಲಾಗುವುದಿಲ್ಲ.

ಭಕ್ತಪರಿವಾರ ಮರಳಿತು. ಬೆಟ್ಟದ ಕೆಳಗೆ ಆಶ್ರಮದಲ್ಲಿ ಬಿರ್ಲಾ ಸ್ವಲ್ಪ ಹೊತ್ತು ತಂಗಿ ನಿರ್ಗಮಿಸಿದರು. ನಾನಿನ್ನೂ ದೇವಾಲಯದಲ್ಲಿದ್ದು ಪೂಜಾ ಕಾರ್ಯಕ್ರಮ ಮುಗಿಸಿ ವಿಠ್ಠಲನಿಗೆ 'ಭೋಗ' ತೆಗೆದುಕೊಂಡು ಹೋಗಲು ಆಶ್ರಮಕ್ಕೆ ಬಂದೆ. ಎಂದಿನಂತೆ ಮತ್ತೇ ಅದೇ ದೈನಂದಿನ ಚಟುವಟಿಕೆಯ ಕಳೆ.

"ಯಾ ಜೋಶೀ ಬುವಾ ಚಹಾ ಘ್ಯಾ." ಬೀರ ನನಗೆ ಉಪಚರಿಸಿದರು. ಇದು ನನಗೆ ಶ್ರೀ ಬೀರರ ನಿತ್ಯ ಆತ್ಮೀಯ ಸಲಿಗೆ.

ಆನಂತರ ಬೀರ ಹೇಳಿದರು, "ನೋಡು ಜೋಶಿ ಬುವಾ, ಶ್ರೀ ಬಿರ್ಲಾಜಿ ಆಶ್ರಮದ ಸಾಹಸ ಮೆಚ್ಚಿ ಅಣ್ಣಾಜಿ(ಶ್ರೀ ವಸಂತ ಚಿಟಣೀಸ್)ಗೆ ಸ್ವತಃ ಪ್ರೋತ್ಸಾಹ ಕೊಟ್ಟು ಈ ಎಲ್ಲ ಸಹಾಯ ಮಾಡಿದ್ದಾರೆ. ಅವರದೇ ಔದಾರ್ಯದ ಕಾಣಿಕೆ ಈ ಮಂದಿರ," ಅಂದರು.

ಸಂದರ್ಶಕರು, ಪ್ರವಾಸಿಕರು, ಯಾತ್ರಿಕರು, ಭಕ್ತರು, ಸಾಧಕರು ಎಲ್ಲರಿಗೂ ಬಿರ್ಲಾ ಕಟ್ಟಿಸಿರುವ ಹಿಮಾಲಯದ ಪರಿಸರದ ವಿಠ್ಠಲ ಮಂದಿರವು ಒಂದು ಪ್ರೇಕ್ಷಣೀಯ ಸ್ಮಾರಕದಂತಿದೆ. ಅಣ್ಣಾಜಿ ಅನ್ನುವಂತೆ ವಿಠ್ಠಲನ ಪ್ರೇರಣೆಯಿಂದಲೆ ಇದೆಲ್ಲ ಸಾಧ್ಯ.

ನಾವಿಂದು ಶ್ರೀ ಬಿರ್ಲಾರವರನ್ನು ನೆನೆಯಬೇಕಾಗಿದೆ. ಸ್ವಾತಂತ್ರ್ಯ ಹೋರಾಟ ಕಾಲದಲ್ಲಿ ಅವರು ಮಹಾತ್ಮಾಜಿಯ ಆಪ್ತ ಶಿಷ್ಯರಾಗಿ ಮಹತ್ವದ ಪಾತ್ರವಹಿಸಿದ್ದಾರೆ. ಗಾಂಧೀಜಿಯ ರಾಜಕೀಯ ಪ್ರಜ್ಞೆಯ ಪಾಲಕರಾಗಿದ್ದ ಇವರು ದೇಶ ವಿದೇಶಗಳಲ್ಲಿಯ ಅನೇಕ ಮಹತ್ವದ ವ್ಯಕ್ತಿಗಳ ವಿಶ್ವಾಸಕ್ಕೆ ಪಾತ್ರರಾಗಿದ್ದರು. ಶ್ರೀ ಬಿರ್ಲಾ 'Shadow of the Mahatma' ಎಂಬ ಒಂದು ಪುಸ್ತಕವನ್ನೂ ಬರೆದಿದ್ದಾರೆ. ಅವರೊಬ್ಬ ಬರಹಗಾರರು ಮಾತ್ರವಲ್ಲ, ಸಂಗೀತಗಾರರೂ ಹೌದು. ಭಾರತವನ್ನು ಜಗತ್ತಿನ ಔದ್ಯಮಿಕ ನಕ್ಷೆಯಲ್ಲಿ ನಿಲ್ಲಿಸಿದ ಶ್ರೇಯಸ್ಸಿನಲ್ಲಿ [illegible] ಪಾಲು ಅವರಿಗೆ ಸಲ್ಲಬೇಕು.



# ಬಿಳಿ ಮುಟ್ಟು

ಸ್ತ್ರೀಯರ ಆಸ್ಪತ್ರೆಗಳ ಹೊರರೋಗಿಗಳ ವಿಭಾಗದಲ್ಲಿ ಸಾಮಾನ್ಯವಾಗಿ ಗರ್ಭಿಣಿಯರು ಮತ್ತು ಹೆರಿಗೆಗಾಗಿ ಬರುವವರನ್ನು ಬಿಟ್ಟರೆ ಹೆಚ್ಚಾಗಿ ಬರುವವರು ಮುಟ್ಟಿನ ತೊಂದರೆ ಅನುಭವಿಸುವವರು. ಅವರಲ್ಲೂ ಬಿಳಿ ಮುಟ್ಟು ಹೋಗುವವರೇ ಹೆಚ್ಚು.

ಬಿಳಿ ಮುಟ್ಟು ಹೋಗುವುದನ್ನು ಬಿಳಿ ಸೆರಗು ಎಂದೂ ಬಿಳುಪು ಹೋಗುವುದು ಎಂದೂ ರೂಢಿಯಲ್ಲಿ ಹೇಳುತ್ತಾರೆ.

ಇದರ ಬಗ್ಗೆ ಸರಿಯಾಗಿ ತಿಳುವಳಿಕೆ ಇಲ್ಲದ ಸ್ತ್ರೀಯರು ಸಹಜವಾಗಿ ಸ್ರವಿಸುವ ಬಿಳಿ ಮುಟ್ಟಿನ ಪ್ರಮಾಣ ಸ್ವಲ್ಪ ಜಾಸ್ತಿಯಾದರೂ ಇದೇನೋ ಕಾಯಿಲೆ ಎಂದು ಶಂಕಿಸಿ ಭಯಪಡುತ್ತಾರೆ. ಇನ್ನು ಕೆಲವರು ವಿವಿಧ ಸೋಂಕಿನಿಂದಾಗಿ ಹೆಚ್ಚು ಬಿಳುಪು ಸ್ರವಿಸಿದರೂ ಎಲ್ಲರಿಗೂ ಹೀಗೆಯೇ ಆಗುವುದೇನೋ ಎಂದು ನಿರ್ಲಕ್ಷಿಸುವವರೂ ಉಂಟು. ಹೀಗಾಗಿ ಇದರ ಬಗ್ಗೆ ಸ್ತ್ರೀಯರಿಗೆಲ್ಲ ತಿಳುವಳಿಕೆ ಅಗತ್ಯ.

ಈ ಬಿಳಿ ಮುಟ್ಟು ಯೋನಿಯಲ್ಲಿ ಸಹಜವಾಗಿ ಸ್ವಲ್ಪ ಪ್ರಮಾಣದಲ್ಲಿ ಉತ್ಪತ್ತಿಯಾಗಿ ಅದನ್ನು ತೇವವಾಗಿಟ್ಟಿರುತ್ತದೆ. ಗರ್ಭಕೋಶದ ತುದಿಯಲ್ಲಿರುವ ಗ್ರಂಥಿಗಳಿಂದ ಒಸರುವ ದ್ರವ ಯೋನಿಯ ಮೇಲ್ಪದರಿನ ಜೀವಕಣಗಳಿಂದ ಒಸರುವ ದ್ರವ ಸೇರಿ ಈ ಬಿಳುಪು ಉಂಟಾಗುತ್ತಿದ್ದು ಅದಕ್ಕೆ ವಾಸನೆಯಾಗಲಿ ಬಣ್ಣವಾಗಲಿ ಇರುವುದಿಲ್ಲ. ಅದರಲ್ಲಿ ದುಗ್ಧಾಮ್ಲ

ಅದನ್ನು ರಕ್ಷಿಸುತ್ತದೆ. ಈ ಆಮ್ಲತೆ ಕಡಿಮೆ ಇರುವ ಮಕ್ಕಳ ಮತ್ತು ವೃದ್ಧೆಯರ ಯೋನಿಗಳ ಸಹಜ ರಕ್ಷಣೆ ಕಮ್ಮಿಯಾಗಿ ರೋಗಾಣುಗಳು ಬೆಳೆಯುತ್ತವೆ.

ಕೆಲವು ಸಂದರ್ಭಗಳಲ್ಲಿ ಈ ಬಿಳಿ ದ್ರವವು ಸಹಜಕ್ಕಿಂತ ಹೆಚ್ಚು ಪ್ರಮಾಣದಲ್ಲಿ ಸ್ರವಿಸುವುದು:-

ಅ) ಅಂಡಾಣು ಫಲಿಸಿದಾಗ, ಅಂದರೆ ಋತು ಮಧ್ಯ ಕಾಲದಲ್ಲಿ,

ಆ) ಲೈಂಗಿಕ ಪ್ರಚೋದನೆಯಾದಾಗ,

ಇ) ಋತುವಾಗುವುದಕ್ಕೆ ಮುಂಚಿನ ಎರಡು ಮೂರು ದಿನಗಳಲ್ಲಿ,

ಈ) ಗರ್ಭ ಧರಿಸಿದ್ದಾಗ.

ಆದರೆ ಇದು ಆರೋಗ್ಯಕರವಾಗಿದ್ದು ಭಯಕ್ಕೆ ಕಾರಣವಿಲ್ಲ. ಇನ್ನು ರೋಗಕಾರಕ ಬಿಳಿ ಮುಟ್ಟು ಲೋಳೆ ಲೋಳೆಯಾಗಿದ್ದು ಕೀವಿನಂತೆಯೂ ರಕ್ತಮಿಶ್ರಿತ ಕೀವಿನಂತೆಯೂ ಇದ್ದು ದುರ್ವಾಸನೆ

ಡಾ. ಎಲ್. ಟಿ. ಜಯಮ್ಮ

ಯಿಂದ ಕೂಡಿರುತ್ತದೆ. ಉರಿ, ನವೆ ಉಂಟು ಮಾಡುತ್ತದೆ. ಅಲ್ಲದೆ ಹೆಚ್ಚಿನ ಪ್ರಮಾಣದಲ್ಲಿ ಒಸರಿ ಒಳ ಬಟ್ಟೆಗಳು ನೆನೆಯುವುದಲ್ಲದೆ ತುಂಬಾ ಮುಜುಗರವಾಗುತ್ತದೆ.

ಮುಖ್ಯವಾಗಿ ಈ ಬಿಳಿ ಮುಟ್ಟಿನ ಉತ್ಪತ್ತಿಗೆ ಅನೇಕ ಸೋಂಕುಗಳು ಕಾರಣವಾಗಿವೆ. ಅವುಗಳಲ್ಲಿ ಮುಖ್ಯ ಲೈಂಗಿಕ ರೋಗಗಳಾದ ಶುಕ್ಲಮೇಹ (Gonorrhoea), ಲೋಮಕೋಂಟಿ ಬೇನೆ (Trichomoniasis), ಉಪದಂಶ ಅಥವಾ ಫರಂಗಿ ರೋಗ (Syphilis) ಸೇರಿವೆ. ಇವುಗಳಲ್ಲದೆ ಗರ್ಭಕೋಶದ ಸೋಂಕು (Endometritis ) ಗರ್ಭಪಾತದ ಸೋಂಕು (Septic abortion), ಯೋನಿಯುರಿತಗಳೂ (Vaginitis) ಈ ಬಿಳಿ ಮುಟ್ಟಿಗೆ ಕಾರಣಗಳು. ಇವುಗಳಲ್ಲಿ ಕೆಲವು ಸೋಂಕುಗಳ ಬಗ್ಗೆ ಒಂದೆರಡು ವಿಷಯಗಳನ್ನು ಸ್ವಲ್ಪ ವಿವರವಾಗಿ ತಿಳಿದುಕೊಂಡರೆ ಒಳ್ಳೆಯದು.

**ಶುಕ್ಲಮೇಹ :** ಈ ರೋಗಕ್ಕೆ ಗೋನೋಕಾಕ್ಕೈ ಎನ್ನುವ ಬ್ಯಾಕ್ಟೀರಿಯ ಕಾರಣವಾಗಿದೆ. ಈ ರೋಗಾಣುಗಳ ಸೋಂಕು ತಗುಲಿದರೂ ಶೇಕಡಾ ೫೦ ಜನರಲ್ಲಿ ಇದರ ವಿಶಿಷ್ಟ ಲಕ್ಷಣಗಳು ಕಾಣ ಬಾರದೆ ವಾಡಿಕೆಯಾಗಿ ಪರೀಕ್ಷಿಸಿದಾಗ ಮಾತ್ರ ಯೋನಿಯೊಳಗಿನ ಗ್ರಂಥಿಗಳಲ್ಲಿನ ವ್ಯತ್ಯಾಸಗಳಿಂದ ಈ ರೋಗ ಬಂದಿರುವುದು ಕಂಡುಬರುತ್ತದೆ. ಈ ರೋಗದ ಲಕ್ಷಣಗಳೆಂದರೆ ಗಟ್ಟಿಯಾದ ಕೀವಿನಂತಹ ದ್ರವ ಒಸರುವುದು, ಯೋನಿಯಲ್ಲಿ ಉರಿ, ನವೆ ಮೂತ್ರ ವಿಸರ್ಜನೆಯಲ್ಲಿ ಉರಿ, ಯೋನಿಯ ಹೊರಭಾಗದಲ್ಲೂ ನವೆ ಕಾಣಿಸಿಕೊಳ್ಳುವುದು. ಒಂದು ತೊಟ್ಟು ದ್ರವವನ್ನು ಬಣ್ಣಗಟ್ಟಿ (staining) ಸೂಕ್ಷ್ಮದರ್ಶಕ ಯಂತ್ರದಲ್ಲಿ ನೋಡಿದಾಗ ವಿಶಿಷ್ಟ ರೋಗಾಣುಗಳು ಕಂಡುಬರುತ್ತವೆ.

ಈ ರೋಗಕ್ಕೆ ಪೆನಿಸಿಲಿನ್ ರಾಮ ಬಾಣ. ಈ ಸೋಂಕನ್ನು ನಿವಾರಿಸಲು ಪೆನಿಸಿಲಿನ್ ಒಂದು ಚುಚ್ಚುಮದ್ದು, ೨–೪ ಮೆಗಾಯೂನಿಟ್ ಬಲದ್ದು ಒಂದೇ ಒಂದು ಸಾಕು. ಪೆನಿಸಿಲಿನ್ ಮೈಗೆ ಹಿಡಿಸದವರೂ ರೋಗಾಣುಗಳು ಪೆನಿಸಿಲಿನ್ ನಿರೋಧಕವೂ ಆಗಿದ್ದರೆ ಇತರ ಪ್ರತಿಜೈವಿಕಗಳನ್ನು ಉಪಯೋಗಿಸಬಹುದು.

**ಉಪದಂಶ ಅಥವಾ ಫರಂಗಿ ರೋಗ :** ಈ ಸೋಂಕು ತಗುಲಿದವರ ಯೋನಿಯ ಮುಂಭಾಗದಲ್ಲಿ ಹುಣ್ಣುಗಳೂ, ಗರ್ಭಕೋಶದ ಕೊರಳುರಿತ ಉಂಟಾಗಿ ಬಿಳುಪು ದ್ರವಿಸುತ್ತದೆ. ಹಾಲ್ರಸ ಗ್ರಂಥಿಗಳ ಉರಿತವು ಈ ರೋಗದ ಇನ್ನೊಂದು ವಿಶೇಷ. ಈ ಕಾಯಿಲೆಗೂ ಪೆನಿಸಿಲಿನ್ ಪರಮೌಷಧ. ಈ ಸೋಂಕು ತಗುಲಿದ ರೋಗಿಗಳ ರಕ್ತ ಪರೀಕ್ಷಿಸಿದಾಗ ಈ ರೋಗವು ಇರುವುದು ಖಚಿತವಾಗುವುದು.

**ಲೋಮಕೊಂಟ ಬೇನೆ :** ಇದು ವಿಶಿಷ್ಟ ಲೋಮಕೊಂಟಿಗಳ ಸೋಂಕಿನಿಂದ ಉದ್ಭವಿಸುವ ಕಾಯಿಲೆ. ನೊರೆನೊರೆಯಾದ ಬಿಳುಪು ಕೀವಿನಂತಿದ್ದು ಯೋನಿಯಲ್ಲಿ ಉರಿ ಮೂತ್ರ ವಿಸರ್ಜನೆಯಲ್ಲಿ ಉರಿ ತುರಿಕೆ ಉಂಟಾಗುವುದು. ಕೆಲವು ಸಲ ಯೋನಿಯುರಿತದಿಂದ ರಕ್ತಮಿಶ್ರಿತ ಬಿಳುಪೂ ಒಸರುವುದು. ಈ ದ್ರವದ ಒಂದು ತೊಟ್ಟು ಸೂಕ್ಷ್ಮದರ್ಶಕದಲ್ಲಿ ನೋಡಿದಾಗ ಅತಿ ವೇಗವಾಗಿ ಸರಿದಾಡುವ ಲೋಮಕೊಂಟಿ ಕ್ರಿಮಿಗಳನ್ನು ನಾವು ನೋಡಿ ರೋಗವನ್ನು ಖಚಿತಪಡಿಸಿಕೊಳ್ಳಬಹುದು. ಈ ಸೋಂಕಿಗೆ ಮೆಟ್ರೊನಿಡಜೋಲ್ ಪರಿಣಾಮಕಾರಿಯಾಗಿದೆ. ೨ ಗ್ರಾಂ ಒಂದೇ ಸಲ ಅಥವಾ ೨೦೦–೨೫೦ ಮಿಲಿಗ್ರಾಂ ದಿನಕ್ಕೆ ಮೂರು ಹೊತ್ತು, ಏಳು ದಿನ ಉಪಯೋಗಿಸಿದರೆ ಸಾಕು. ಆದರೆ ಗಂಡಸಿಗೂ ಈ ಚಿಕಿತ್ಸೆ ಅತ್ಯವಶ್ಯಕ. ಕಾಂತಿಹೇನೆ ಬಿಳಿಚಕಾಂತಿಕ ಈ ರೋಗಕ್ಕೆ ಕಾರಣ. ತಡೆಯಲಾರದಷ್ಟು ನವೆ, ತುರಿಕೆ ಈ ರೋಗದ ವಿಶಿಷ್ಟ ಲಕ್ಷಣ. ಯೋನಿಯುರಿತ, ಮೂತ್ರ ವಿಸರ್ಜನೆಯಲ್ಲಿ ಉರಿ, ಮೊಸರಿನಂತಹ ಹೆಪ್ಪು ಹೆಪ್ಪಾದ ಬಿಳುಪು ಹೋಗುವುದು ಕಂಡುಬರುತ್ತದೆ. ಸೂಕ್ಷ್ಮದರ್ಶಕದಲ್ಲಿ ಇದನ್ನು ಪರೀಕ್ಷಿಸಿದಾಗ ಈ ಬಿಳಿಚಕಾಂತಿಕಗಳು ಕಂಡುಬರುತ್ತವೆ. ಯೋನಿಯಲ್ಲಿ ಸಕ್ಕರೆ ಅಂಶ ಜಾಸ್ತಿ ಇರುವ ಸಂದರ್ಭಗಳಲ್ಲಿ, ಅಂದರೆ ಸಿಹಿ ಮೂತ್ರ ರೋಗಿಗಳಲ್ಲಿ, ಬಸಿರಿಯರಲ್ಲಿ, ಗರ್ಭನಿರೋಧಕ ಮಾತ್ರೆಗಳನ್ನು ಬಳಸುವವರಲ್ಲಿ ಈ ಸೋಂಕು ತಗಲುವ ಸಂಭವ ಹೆಚ್ಚು. ನಿಸ್ಟಾಟಿನ್ ಅಥವಾ ಮೈಕೊಸ್ಟಾಟಿನ್ ಮಾತ್ರೆಗಳನ್ನು ಯೋನಿಯೊಳಗೆ ೧೦–೧೫ ದಿನ ಇಟ್ಟು ಉಪಯೋಗಿಸಿ, ಅಥವಾ ಕ್ಲೋಟ್ರೈಮಜೋಲ್ ಮುಲಾಮನ್ನು ಯೋನಿಯೊಳಗೆ ಒಂದು ಸಲದಂತೆ ಒಂದು ವಾರ ಹಚ್ಚಿ ಈ ರೋಗವನ್ನು ವಾಸಿ ಮಾಡಿಕೊಳ್ಳಬಹುದು.

**ಗರ್ಭಕೋಶದ ಕೊರಳುರಿತ :** ಮೂರನೇ ಒಂದು ಭಾಗ ಸ್ತ್ರೀಯರಲ್ಲಿ ಈ ರೋಗವು ಸಣ್ಣ ಪ್ರಮಾಣದಿಂದ ದೊಡ್ಡ ಪ್ರಮಾಣದವರೆಗೆ ಇದ್ದೇ ಇರುತ್ತದೆ. ಲೋಮಕೊಂಟಿ ರೋಗ, ಉಪದಂಶ, ಶುಕ್ಲ ಮೇಹ, ಕ್ಷಯ ಇತ್ಯಾದಿ ಈ ಕೊರಳುರಿತಕ್ಕೆ ಮೂಲ ಕಾರಣವಾಗಿರುತ್ತವೆ. ಲೋಳೆ ಲೋಳೆಯಾಗಿ ಕೀವು ಮಿಶ್ರಿತ ಬಿಳುಪು ಸುರಿಯುವುದು ಇದರ ಮುಖ್ಯ ಲಕ್ಷಣ. ಆದರೆ ತುರಿಕೆಯಾಗಲಿ ವಾಸನೆಯಾಗಲಿ ಇರುವುದಿಲ್ಲ. ಋತು ಮಧ್ಯೆ, ಸಂಭೋಗದ ನಂತರ ಕಂಡೂ

ಕಾಣುವಂತೆ ರಕ್ತಸ್ರಾವವಾಗುವ ಸಂಭವ ಹೆಚ್ಚು. ಗರ್ಭಕೋಶದ ಕೊರಳಿನಲ್ಲಿ ಹುಣ್ಣುಗಳಾಗಿರುವುದೇ ಈ ರಕ್ತಸ್ರಾವಕ್ಕೆ ಕಾರಣ. ಸೂಕ್ತ ತಪಾಸಣೆಯಿಂದ ಮೂಲರೋಗವನ್ನು ಪತ್ತೆ ಹಚ್ಚಿ ಯೋಗ್ಯ ಚಿಕಿತ್ಸೆ ಪಡೆಯಬೇಕು. ಈ ಸಂದರ್ಭದಲ್ಲಿ ಗರ್ಭಕೋಶದ ಮತ್ತು ಅದರ ಕೊರಳಿನ ಜೀವುಂಡಿಗೆ (biopsy) ಪರೀಕ್ಷೆ ಮಾಡಿ ಅರ್ಬುದ ರೋಗವಿಲ್ಲವೆಂದು ಖಚಿತ ಮಾಡಿ ಮಾಡಿಕೊಳ್ಳಲೇಬೇಕಾದದ್ದು ಮುಖ್ಯ. ಗರ್ಭಪಾತದ ಸೋಂಕು ಅರ್ಬುದ ರೋಗಗಳಲ್ಲಿ ಕೆಂಪು ಮಿಶ್ರಿತ ಬಿಳುಪು ಒಸರುತ್ತಿದ್ದು ಅದು ಅತಿ ದುರ್ವಾಸನೆಯಿಂದ ಕೂಡಿರುತ್ತದೆ. ಈ ದುರ್ವಾಸನೆಗೆ ಸತ್ತ ಜೀವಕಣಗಳು ಕೊಳೆತಿರುವುದೇ ಕಾರಣ.

ಇನ್ನು ಕೆಲವು ರೋಗಿಗಳಲ್ಲಿ ಮಿಶ್ರ ಸೋಂಕು ತಗುಲಿದ್ದು ಅಗತ್ಯ ಚಿಕಿತ್ಸೆ ನೀಡಬೇಕಾಗುವುದು. ಇನ್ನು ಕೆಲವರಲ್ಲಿ ಯೋನಿ ಸಂಕು (pessary) ಇರಿಸಿರುವಿಕೆ, ಮರೆತ ಹತ್ತಿಗಿಡಿ (tampon) ಗರ್ಭ ನಿರೋಧಕಗಳಾದ ವಂಕಿ, ರಬ್ಬರಿನ ಪೊರೆ ಧಾರಣೆ ಈ ಮಿಶ್ರ ಸೋಂಕಿಗೆ ದಾರಿ ಮಾಡಿ ಕೊಟ್ಟು ಬಾಧೆ ಉಂಟಾಗುತ್ತದೆ. ಒಂದು ಮಾತ್ರ ಇಲ್ಲಿ ಒತ್ತಿ ಹೇಳಬೇಕಾದದ್ದು ಎಂದರೆ ಗರ್ಭ ನಿರೋಧಕ, ವಂಕಿ ಧರಿಸಿದವರೆಲ್ಲರಿಗೂ ಈ ಬಿಳುಪು ಹೋಗುವುದು ಸತ್ಯಕ್ಕೆ ದೂರ. ಮೊದಲೇ ಗರ್ಭಕೋಶದ ಕೊರಳುರಿತವಿದ್ದು ವಂಕಿ ಹಾಕಿಸಿಕೊಂಡ ಮೇಲೆಯೇ ಅದು ಕಾಣಿಸಿಕೊಂಡದ್ದು ಎಂದು ಭಯಪಡುವವರೆ ಹೆಚ್ಚು. ಸೂಕ್ತ ಚಿಕಿತ್ಸೆ ತೆಗೆದುಕೊಂಡರೆ ಈ ಬಗ್ಗೆ ಗಾಬರಿ ಪಟ್ಟು ವಂಕಿಯನ್ನು ದೂಷಿಸಬೇಕಾಗಿಲ್ಲ.

ಇನ್ನು ಮಕ್ಕಳಲ್ಲಿ ಕಾಣಬರುವ ಬಿಳೀ ಮುಟ್ಟಿನ ಬಗ್ಗೆ ಎರಡು ಮಾತು. ಈ ಮೊದಲೇ ಹೇಳಿದಂತೆ ಮಕ್ಕಳ ಯೋನಿಯಲ್ಲಿ ಸಹಜವಾಗಿ ಒಸರುವ ದ್ರವದಲ್ಲಿ ಆಮ್ಲತೆಯು ಕೊರತೆಯಿರುವುದರಿಂದಲೂ ಯೋನಿಯ ಹೊರಪದರು ತೆಳ್ಳಗಾಗಿರುವುದರಿಂದಲೂ ಸಹಜ ರಕ್ಷಣೆ ಲೋಪವಾಗಿ ಬೇಗ ಸೋಂಕು ತಗುಲಿ ಬಿಳುಪು ಹೋಗುವುದು. ಆದರೆ ಒಳ ಬಟ್ಟೆಗಳನ್ನು ಸ್ವಚ್ಛವಾಗಿಡದಿರುವುದು, ಸೋಂಕು ತಗುಲಿದವರ ಪಕ್ಕದಲ್ಲಿ ಮಲಗುವುದು ತಪ್ಪಿಸಿದರೆ ಒಳ್ಳೆಯದು. ಇದೇ ಮಾತು ಮುಟ್ಟು ನಿಂತ ವೃದ್ಧೆಯರಿಗೂ ಅನ್ವಯಿಸುವುದು. ಸ್ತ್ರೀಚೋದಕಗಳ (oestrogen) ಕೊರತೆ ಮಕ್ಕಳಲ್ಲೂ ವೃದ್ಧೆಯರಲ್ಲೂ ಇರುವುದರಿಂದ ಆಮ್ಲತೆ ಕಡಿಮೆ ಇರುವುದು. ಸೂಕ್ತ ಜೀವನಿರೋಧಕಗಳ ಜೊತೆ ಅಲ್ಪ ಪ್ರಮಾಣದಲ್ಲಿ ಸ್ತ್ರೀ ಚೋದಕವನ್ನು ಉಪಯೋಗಿಸಿ ಇದನ್ನು ಉಪಶಮನಗೊಳಿಸಿಕೊಳ್ಳಬಹುದು.

ಹೀಗೆ ಬಿಳಿ ಮುಟ್ಟಿಗೆ ಅನೇಕ ಕಾರಣಗಳಿದ್ದು ಅವುಗಳಲ್ಲಿ ಕೆಲವು ಸಹಜವಾಗಿಯೂ ಕೆಲವು ರೋಗಗಳ ಸೋಂಕಿನಿಂದಲೂ ಉಂಟಾಗುತ್ತವೆ. ಸೋಂಕು ರೋಗಗಳಲ್ಲಿ ಲೈಂಗಿಕವಾಗಿ ಹರಡುವ ರೋಗಗಳ ಬಗ್ಗೆ ಎಚ್ಚರವಾಗಿದ್ದು ಒಮ್ಮೆ ಬಂದರೆ ಸೂಕ್ತ ಚಿಕಿತ್ಸೆಯನ್ನು ಸ್ತ್ರೀ ಪುರುಷರಿಬ್ಬರೂ ಪಡೆದು ಇನ್ನೊಮ್ಮೆ ಬರದಂತೆ ಜಾಗ್ರತೆ ವಹಿಸಬೇಕು. ಸಕಾಲದಲ್ಲಿ ಚಿಕಿತ್ಸೆ ಪಡೆಯದಿದ್ದರೆ ರೋಗವು ಬಲಿತು ಇತರ ಅಂಗಗಳಿಗೆ ಹರಡಿ ಹಾನಿ ಮಾಡಲಾರದಷ್ಟು ತೊಂದರೆಯಾಗಬಹುದು. ಈ ಎಲ್ಲಾ ರೋಗಗಳಲ್ಲೂ ಶುಭ್ರತೆ ಅತಿ ಮುಖ್ಯ. ಅಲ್ಲದೆ ನಂಜುರೋಧಕ ದ್ರವಗಳನ್ನು ಯೋನಿಯನ್ನು ತೊಳೆಯಲು ಉಪಯೋಗಿಸಬಹುದು.

ಪ್ರೌಢ ವಯಸ್ಕರಲ್ಲಿ ಕೆಂಪು ಮಿಶ್ರಿತ ಬಿಳುಪು ಹೋಗುತ್ತಿದ್ದರೆ ಗರ್ಭಕೋಶದ ಅರ್ಬುದ ಇಲ್ಲವೆಂಬುದನ್ನು ಜೀವುಂಡಿಗೆ ಪರೀಕ್ಷೆಯಿಂದ ಖಂಡಿತ ಮಾಡಿಕೊಳ್ಳಬೇಕು. ಯಾವುದಕ್ಕೂ ರೋಗ ಲಕ್ಷಣಗಳು ಕಾಣಿಸಿಕೊಂಡ ತಕ್ಷಣ ವೈದ್ಯರ ಸಲಹೆ ಪಡೆದು ನಡೆದು ಮನಸ್ಸಿನ ಶಂಕೆ ದೂರ ಮಾಡಿಕೊಂಡರೆ ಇಲ್ಲದ ಕಾಯಿಲೆಗಳನ್ನು ಊಹಿಸಿಕೊಂಡು ನರಳುವುದು ತಪ್ಪುವುದು. ✡



# ಜನಹಿತ ಸಾಧನೆಯಲ್ಲಿ ಅರ್ಥಪೂರ್ಣ ಕಾರ್ಯಗಳ ಆರು ತಿಂಗಳು

ಕಳೆದ ನೂರಂಭತ್ತು ದಿನಗಳಲ್ಲಿ ಸರ್ಕಾರ ಇಟ್ಟ ಹೆಜ್ಜೆ ದಿಟ್ಟ; ತಳೆದ ನಿಲುವು ಅಚಲ. ಕೈಗೊಂಡ ಕಾರ್ಯವನ್ನು ಆಗುಮಾಡುವ ವಿಶ್ವಾಸ.

* ಯೋಜನಾ ವೆಚ್ಚದಲ್ಲಿ ಈ ವರ್ಷ ನೂರು ಕೋಟಿ ರೂ. ಹೆಚ್ಚಳ.
* ಅಭಾವ ಪರಿಹಾರ ಕಾರ್ಯಗಳಿಗೆ ಈ ವರೆಗೆ ೫೦ ಕೋಟಿ ರೂ. ವೆಚ್ಚ
* ರೈತರು ಹಾಗೂ ಗ್ರಾಹಕರಿಗೆ ನೀಡಿರುವ ರಿಯಾಯಿತಿ– ಸುಮಾರು ೫೦ ಕೋಟಿ ರೂ.

**ಕುಡಿಯಲು ನೀರು, ಕೃಷಿಗೆ ನೀರಾವರಿ**

ಕುಡಿಯುವ ನೀರಿನ ತೀವ್ರ ಅಭಾವವಿರುವ ಗ್ರಾಮಾಂತರ ಪ್ರದೇಶದಲ್ಲಿ ೨೫ ಕೋಟಿ ರೂ. ವೆಚ್ಚದಲ್ಲಿ ೧೨,೮೦೦ ಕೊಳವೆ ಭಾವಿಗಳ ಸೌಕರ್ಯ. ಪಟ್ಟಣ ಪ್ರದೇಶದಲ್ಲಿ ೧.೧೯ ಕೋಟಿ ರೂ. ವೆಚ್ಚದಲ್ಲಿ ೫೫೦ ಕೊಳವೆ ಬಾವಿಗಳ ಸೌಲಭ್ಯ. ಎಲ್ಲ ಹಳ್ಳಿಗೂ ನೀರು ಪೂರೈಕೆಗಾಗಿ ೧೦೦ ಕೋಟಿ ರೂ. ಯೋಜನೆ.

ಹಳೆ ನೀರಾವರಿ ಯೋಜನೆಗಳಿಗೆ ವಿಶೇಷ ಗಮನ. ದೊಡ್ಡ ಮತ್ತು ಮಧ್ಯಮ ನೀರಾವರಿಗೆ ೮೯ ಕೋಟಿ ರೂ. ಕಾವೇರಿ ನದಿ ಕಣಿವೆ ಯೋಜನೆಗೆ ೮೪ ಕೋಟಿ ರೂ. ೮೦,೦೦೦ ಎಕರೆಗೆ ಅಧಿಕ ನೀರಾವರಿ. ೧೫ ಕೋಟಿ ರೂ. ವೆಚ್ಚದಲ್ಲಿ ೯೦೦ ಹೊಸ ಕೆರೆಗಳ ನಿರ್ಮಾಣ.

**ರೈತರಿಗೆ ರಿಯಾಯಿತಿ–**

ರೈತರಿಗೆ ಸುಮಾರು ೨.೬ ಕೋಟಿ ರೂಪಾಯಿಗಳಷ್ಟು ವಿವಿಧ ರೀತಿಯ ಪರಿಹಾರಗಳು.

**ಅಭಾವ ಪರಿಹಾರ ಕಾರ್ಯ:** ತೀವ್ರ ಅಭಾವ ಪೀಡಿತ ಪ್ರದೇಶಗಳ ಸಮಸ್ಯೆ ಪರಿಹಾರಕ್ಕೆ ಆದ್ಯತೆ. ೫೦ ಕೋಟಿ ರೂ. ವೆಚ್ಚ. ಕೃಷಿ ಕಾರ್ಮಿಕರು, ರಸ್ತೆ ಮುಂತಾದ ಕಾಮಗಾರಿ ಕೆಲಸಗಾರರ ಕೂಲಿ ದರದಲ್ಲಿ ರೂ. ೫ ರಿಂದ ೬–೫೦ ಕ್ಕೆ ಹೆಚ್ಚಳ. ಅಭಾವ ಪರಿಹಾರ ಕಾರ್ಯ ಪರಿಶೀಲನೆಗೆ ಪ್ರತಿ ಜಿಲ್ಲೆಗೆ ಒಬ್ಬೊಬ್ಬ ಸಚಿವರ ನೇಮಕ.

**ಕೈಗಾರಿಕೆ:** ಶೀಘ್ರದಲ್ಲೇ ಹೊಸ ಕೈಗಾರಿಕೆ ನೀತಿಯ ಪ್ರಕಟಣೆ. ಗ್ರಾಮೀಣ ಕೈಗಾರಿಕೆಗಳಿಗೆ ಆದ್ಯತೆ. ತಿಂಗಳಿಗೆ ಒಂದು ಸಾವಿರದಂತೆ ಸಣ್ಣ ಕೈಗಾರಿಕಾ ಘಟಕಗಳ ಸ್ಥಾಪನೆಯ ಗುರಿ.

**ಅಧಿಕಾರ ವಿಕೇಂದ್ರೀಕರಣ:** ಪುರಸಭೆ, ನಗರಸಭೆಗಳ ಚುನಾವಣೆಗೆ ನಿರ್ಧಾರ; ಹದಿನೆಂಟು ವರ್ಷ ತುಂಬಿದವರಿಗೆಲ್ಲ ಮತಾಧಿಕಾರ. ಮಹಿಳೆಯರಿಗೆ ಸೂಕ್ತ ಪ್ರಾತಿನಿಧ್ಯ.

**ಲೋಕಾಯುಕ್ತ:** ಸಾರ್ವಜನಿಕ ಶೀಲವೃದ್ಧಿ ಸಾಧ್ಯವಾಗುವ ಲೋಕಾಯುಕ್ತ ರಚನೆ ಒಂದು ಮಹತ್ವದ ಕ್ರಮ. ಭ್ರಷ್ಟಾಚಾರದ ಆಪಾದನೆಗೆ ಒಳಗಾದ ಅಧಿಕಾರಿ, ರಾಜಕಾರಣಿ ಈ ಸುಗ್ರೀವಾಜ್ಞೆಗೆ ಬದ್ಧ.

**ಹಿಂದುಳಿದ ವರ್ಗಗಳ ಆಯೋಗ:** ಹಿಂದುಳಿದ ವರ್ಗಗಳ ಹಿತರಕ್ಷಣೆಗೆ ನೇಮಕವಾದ ದ್ವಿತೀಯ ಹಿಂದುಳಿದ ವರ್ಗಗಳ ಆಯೋಗ ಹಾಗೂ ಅಲ್ಪಸಂಖ್ಯಾತರ ಸಮಸ್ಯೆ ಪರಿಶೀಲನೆಗೆ ರಚಿತವಾಗಿರುವ ಅಲ್ಪಸಂಖ್ಯಾತರ ಆಯೋಗಗಳ ಕಾರ್ಯಾರಂಭ. ಇದರಿಂದ ದುರ್ಬಲವರ್ಗದ ರಕ್ಷಣೆ. ಹರಿಜನ–ಗಿರಿಜನ ಅಭಿವೃದ್ಧಿ ಮಂಡಳಿಗೆ ೧೩ ಕೋಟಿ ರೂ. ನೀಡಿಕೆ.

**ಶಿಕ್ಷಣ:** ಶಿಕ್ಷಣ ಕ್ಷೇತ್ರದ ಸಮಗ್ರ ಸುಧಾರಣೆಗೆ ಸಾಧ್ಯವಾಗುವ ಶಿಕ್ಷಣ ವಿಧೇಯಕಕ್ಕೆ ಸಿದ್ಧತೆ. ರಾಜ್ಯದ ವಿದ್ಯಾರ್ಥಿಗಳಿಗೆ ನಿಗದಿಪಡಿಸಿದ ಮೆಡಿಕಲ್ ಸೀಟುಗಳಿಗೆ ಸೀಟು ಶುಲ್ಕ ರದ್ದು. ಸರ್ಕಾರಿ ಸೇವೆಯಲ್ಲಿರುವ ಸ್ಥಳೀಯ ಹಾಗೂ ಸ್ವೈಷಂಡರಿ ಪದವೀಧರರೂ ಹಾಗೂ ಇತರ ಅಭ್ಯರ್ಥಿಗಳಿಗೆ ಸರ್ಕಾರೀ ಸೇವೆಗೆ ಸೇರಲು ಗರಿಷ್ಠ ವಯೋಮಿತಿ ಏರಿಕೆ. ಡಿಗ್ರಿ ಹಾಗೂ ಸ್ನಾತಕೋತ್ತರ ಪದವಿಗಳಲ್ಲಿ ಅತ್ಯುತ್ತಮ ಅಂಕ ಪಡೆದ ಹರಿಜನ–ಗಿರಿಜನ ವಿದ್ಯಾರ್ಥಿಗಳಿಗೆ ಸರ್ಕಾರಿ ಅಧಿಕಾರಿಗಳಾಗಿ ನೇರ ನೇಮಕದ ಅವಕಾಶ. ಹೊಸ ಇಂಗ್ಲಿಷ್ ಶಾಲೆಗಳ ಮಂಜೂರಾತಿ ರದ್ದು.

**ಆಡಳಿತದಲ್ಲಿ ಕನ್ನಡ:** ಆಡಳಿತದಲ್ಲಿ ಕನ್ನಡ ಬಳಕೆ ಕಡ್ಡಾಯ. ಕನ್ನಡ ಬಳಕೆ ಆಗುತ್ತಿದೆಯೇ ಎಂಬುದನ್ನು ಪರಿಶೀಲಿಸಿ, ಸಮಸ್ಯೆಗಳಿದ್ದರೆ ಸಲಹೆ ಸೂಚಿಸಲು ಕಾವಲು ಸಮಿತಿ. ಆರೋಗ್ಯ ಅಭಿವೃದ್ಧಿ, ಮನೆಯಿಲ್ಲದವರಿಗೆ ಮನೆ, ನಿವೇಶನ, ಇಲಾಖಾ ಸಲಹಾ ಸಮಿತಿಗಳ ನೇಮಕ. ಹೀಗೆ ಜನಹಿತಕ್ಕಾಗಿ ಕೈಗೊಂಡಿರುವ ಕ್ರಮಗಳು ಹಲವಾರು. ಸಾಧನೆಗೆ ಕ್ರಮಬದ್ಧವಾಗಿ ಕಾರ್ಯನಿರತ. ಪ್ರಥಮ ವರ್ಷದ ಪ್ರಥಮಾರ್ಧದಲ್ಲಿ ಆಶಾದಾಯಕ ಮುನ್ನಡೆ.

## ಮಹಾ ಜನತೆಗೆ ನೀಡಿರುವ ಆಶ್ವಾಸನೆಗಳನ್ನು ಈಡೇರಿಸಲು ಪಣತೊಟ್ಟಿದೆ ಕರ್ನಾಟಕ ಸರ್ಕಾರ.

ಪ್ರಕಟಣೆ: ವಾರ್ತಾ ಮತ್ತು ಪ್ರಚಾರ ಇಲಾಖೆ,
ಕರ್ನಾಟಕ ಸರ್ಕಾರ, ಬೆಂಗಳೂರು.

ಡಿಐಪಿ/೪/೮೩-೮೪/೧೩೪

ಎಸ್. ಬಿ. ಜೋದಾನಪುರ

# ದೊಡ್ಡವರ ವಿನೋದ

ಸಮಾಜವು ಬದಲಾಗುವುದು ಎಷ್ಟು ಸ್ವಾಭಾವಿಕವೋ ಮೌಲ್ಯಗಳ ಬದಲಾವಣೆಯೂ ಅಷ್ಟೇ ಸ್ವಾಭಾವಿಕ. ತಂತ್ರಜ್ಞಾನದ ಪ್ರಗಲ್ಭವಾದ ಬೆಳವಣಿಗೆಯಿಂದ ಮನುಷ್ಯ ಕಂಗೆಟ್ಟಿದ್ದಾನೆ. ಆದ್ದರಿಂದ ಸಾಧ್ಯವಾದಷ್ಟು ಸುಖಪಡಬೇಕೆಂಬ ಭೌತಿಕವಾದಿಯಾಗಿದ್ದಾನೆ. ಯಾವದೇ ಮಾರ್ಗದಿಂದಲಾದರೂ ಹಣವನ್ನು ಗಳಿಸಬೇಕೆಂದು ಪ್ರಯತ್ನದಲ್ಲಿ ಮನುಷ್ಯ ಅಡ್ಡದಾರಿ ಹಿಡಿದಿದ್ದಾನೆ. ಜೀವನ ಬಹಳ ಭಾರವಾಗಿದೆ. ಕಾರಣ ಹಾಸ್ಯ-ವಿನೋದಗಳು ಮಾಯವಾಗಿವೆ ಎಂದು ಕೆಲವರ ವಾದ. ಹಾಸ್ಯ-ವಿನೋದಗಳ ಅಭಾವವೇ ಶುಷ್ಕ ಜೀವನಕ್ಕೆ ಕಾರಣ ಎನ್ನುವವರು ಮತ್ತೆ ಕೆಲವರು. ನಮ್ಮ ಹಿರಿಯರ ಜೀವನ ನಮಗೆ ಮಾರ್ಗದರ್ಶಕವಾಗಬೇಕು. ಅವರು ಎಷ್ಟು [illegible] ಸಿದ್ದರು. ವಿಜ್ಞಾನದ ಮಾರ್ಗ ವಿಭಜನೆ, ತತ್ವಜ್ಞಾನದ ಮಾರ್ಗ ಸಂಯೋಜನೆ. ವಿಭಜನೆಯಲ್ಲಿ ಸಂಯೋಜನೆ ನೆರವಿಗೆ ಬರುತ್ತದೆ. ನಮ್ಮ ಹಿರಿಯರು ಹಿಡಿದ ದಾರಿಯನ್ನು ನಾವು ಈಗ ಮರೆತಿದ್ದೇವೆ. ನೆನಪು ಮಾಡಿಕೊಳ್ಳಬೇಕಾದದ್ದು ನಮ್ಮ ಧರ್ಮ.

ನ್ಯಾಯವಾದಿ, ನ್ಯಾಯಾಧೀಶ, ವಿದೇಶ ಮಂತ್ರಿ, ರಾಯಭಾರಿಯಾಗಿ ಪಾತ್ರವಹಿಸಿದ ಮಹಮ್ಮದ ಕರೀಮ ಛಗಲಾ ವಿದ್ಯಾರ್ಥಿಯಾಗಿದ್ದಾಗ ಆಕ್ಸಫರ್ಡ್ ಯುನಿಯನ್ [illegible] ದ್ದರು. ಆ ಸಮಯದಲ್ಲಿ ಶ್ರೀಮತಿ [illegible] ನಾಯ್ಡು ಇಂಗ್ಲಂಡಿಗೆ ಭೆಟ್ಟಿ ಕೊಟ್ಟಿದ್ದರು. [illegible] ತಮ್ಮ ಸಂಘಕ್ಕೆ ಮುಖ್ಯ ಅತಿಥಿಗಳನ್ನಾಗಿ ಆಮಂತ್ರಿಸಿ ಅವರನ್ನು ಕರೆದುಕೊಂಡು ಹೋಗುವಾಗ, "ತಾವು ಯಾವ ವಿಷಯ ಕುರಿತು ಮಾತನಾಡುವಿರಿ?" ಎಂದು ಕೇಳಿದರಂತೆ. "ನಂತರ ಹೇಳುವೆ," ಎಂದರು ನಾಯ್ಡು. ಭೋಜನ ಪ್ರಾರಂಭವಾದಾಗ ಛಗಲಾರವರು ನೆನಪು ಮಾಡಿದರು. "ಛಗಲಾ, ಮೊದಲು ಊಟವನ್ನು ಮುಗಿಸು. ಮುಂದಿನ ವಿಚಾರ ಆಮೇಲೆ." ಸಭೆ ಪ್ರಾರಂಭವಾಯಿತು. "ಛಗಲಾ, ನೀನೆ ಒಂದು ವಿಷಯ ಸೂಚಿಸು, ಅದನ್ನೇ ಮಾತಾಡುವೆ-" ಎಂದು ನಾಯ್ಡು ಅವರು ಛಗಲಾ ಸೂಚಿಸಿದ ಆ ವಿಷಯವನ್ನು ಕುರಿತು ಸುಮಾರು ೪೫ ನಿಮಿಷ ಭಾಷಣ ಮಾಡಿದರು. ಅದು ತಮ್ಮ ಜೀವನದಲ್ಲಿಯೇ ಕೇಳಿದ ಅತ್ಯುತ್ತಮ ಭಾಷಣವೆಂದು ಛಗಲಾರವರು [illegible] ಹಿರಿಯರ ಜೀವನದ ಒಂದು ಮಾದರಿ ಎನ್ನಬಹುದೆ? ಅವರಲ್ಲಿ ವಿದ್ವತ್ತೂ ಇತ್ತು, ವಿನಯವೂ ಇತ್ತು. ವಿನೋದ, ಹಾಸ್ಯಗಳು ಅವರ ಜೀವನದಲ್ಲಿ ಹಾಸುಹೊಕ್ಕಾಗಿದ್ದವು.

ಮಹಾತ್ಮಾ ಗಾಂಧಿಯವರನ್ನು "ಮಿಕಿ–ಮೌಸ್" ಎಂದು ಹಾಸ್ಯ ಮಾಡುತ್ತಿದ್ದರು ಸರೋಜಿನಿ ನಾಯ್ಡು, "ಬಾಪೂಜಿಯನ್ನು ಬಡತನದಲ್ಲಿ ಇಡಲು ಕಾಂಗ್ರೆಸ್ಸು ಬಹಳಷ್ಟು ಹಣ ಖರ್ಚು ಮಾಡುತ್ತದೆ," ಎಂದು ಸತ್ಯವನ್ನೇ ವಿನೋದವಾಗಿ ಹೇಳಿದ ಅವರು ರಾಜಗೋಪಾಲಚಾರ್ಯರಿಗೂ ಹಾಸ್ಯ ಮಾಡದೇ ಬಿಡಲಿಲ್ಲ. ರಾಜಗೋಪಾಲಾಚಾರ್ಯರು ಅದೇ ತಾನೇ ಗವರ್ನರ್ ಜನರಲ್ ಆಗಿ ಅಧಿಕಾರ ವಹಿಸಿಕೊಂಡಿದ್ದರು. ನಾಯ್ಡು ಅವರು ರಾಜಭವನಕ್ಕೆ ಭೇಟಿ ಕೊಟ್ಟಾಗ ರಾಜಾಜಿ ಆ ಭವನದ ವಿವಿಧ ಭಾಗಗಳನ್ನು ತೋರಿಸಿದರು. ಅಲ್ಲಲ್ಲಿ ಏನೇನು ಸುಧಾರಣೆ ಮಾಡಬಹುದೆಂಬುದನ್ನು ಸೂಚಿಸುತ್ತಾ ಮಲಗುವ ಕೋಣೆಗೆ ಬಂದಾಗ, "ಎಲ್ಲ ಕಡೆಗೆ ಸುಧಾರಣೆ ಹೇಳಿದ ನಾನು, ಇಲ್ಲಿ ನಿಮಗೆ ಯಾವ ಸಹಾಯವನ್ನೂ ಮಾಡಲಾರೆ," ಎಂದಾಗ ಹಲ್ಲಿಲ್ಲದ ಮುದುಕರು ನಕ್ಕಿದ್ದೆ ನಕ್ಕಿದ್ದು.

ಚಾಣಕ್ಯಮತಿಯೆನಿಸಿದ್ದ ರಾಜಗೋಪಾಲಾಚಾರ್ಯರ ಬುದ್ಧಿ ಎಷ್ಟು ವಕ್ರವಾಗಿತ್ತೆನ್ನುದನ್ನು ಪಂಡಿತ ಮೋತಿಲಾಲರು ಬಹಳ ಅಂದವಾಗಿ ಹೇಳಿದ್ದಾರೆ. "ಒಂದು ಕಟ್ಟಿಗೆ ಕೋಲನ್ನು ಅವರ ತಲೆಯಲ್ಲಿ ತುರುಕಿದರೆ ಅದು ಹೊತ್ತಿಗೆ ಬಂದಾಗ ಕಾರ್ಕ್‌ಸ್ಕ್ರೂವೇ ಆಗಿರುತ್ತದೆ." ಅದನ್ನು ಕೇಳಿದ ರಾಜಗೋಪಾಲಾಚಾರ್ಯರು ಹೊಟ್ಟೆ ಹುಣ್ಣಾಗುವಂತೆ ನಕ್ಕರಂತೆ.

ಕೆಲವೊಮ್ಮೆ ಅಭಿಮಾನಪಡತಕ್ಕ ಸಂಗತಿಗಳೂ ಅಪಹಾಸ್ಯಕ್ಕೆ ಕಾರಣವಾಗುತ್ತವೆ. ಮತ್ತೊಬ್ಬರಿಂದ ತಮ್ಮ ಕೆಲಸ ಮಾಡಿಕೊಳ್ಳಲು ನಾಚಿಕೆಪಡುತ್ತಿದ್ದ ಬಾಪೂಜಿಯವರ ಸೇವೆ ಮಾಡುವ ಸೌಭಾಗ್ಯ ಒದಗಿದಾಗ ಸೇವೆ ಮಾಡಿದವರಿಗೆ ಬಹಳ ಆನಂದ ಮತ್ತು ಅಭಿಮಾನವುಂಟಾಗುವುದು ಸ್ವಾಭಾವಿಕವೆ. ಒಂದು ಸಲ ಬಾಪೂಜಿಯ ತಲೆಗೂದಲನ್ನು ಕತ್ತರಿಸಿದ ಹಡಪದವ ತನ್ನ ಅಂಗಡಿಯಲ್ಲಿ, "ನಾನು ಮಹಾತ್ಮಾಜೀಯವರ ಹಜಾಮತಿ ಮಾಡಿದೆ," ಎಂದು ಫಲಕ ಹಚ್ಚಿದನಂತೆ.

ಅಹಿಂಸೆಯಲ್ಲಿ ನಂಬಿಗೆ ಇಡಲಾರದ ಪಠಾಣ

ಸಲು ಪಠಾಣನೊಬ್ಬ ಪ್ರಯತ್ನಿಸಿದ. ತನ್ನ ಹಳ್ಳಿಯಲ್ಲಿ ಒಂದೆರಡು ದಿವಸಗಳ ಮಟ್ಟಿಗೆ ಇರಲಿಕ್ಕೆ ಗಾಂಧೀಜಿಯನ್ನು ಒತ್ತಾಯಿಸಿದಾಗ ಅವರು ಒಪ್ಪಲಿಲ್ಲ. ಆಗ ಮುದುಕ ಪಠಾಣನೊಬ್ಬ ತಮ್ಮ ಗ್ರಾಮದ ವಿಷಯ ಹೇಳಿದ. ಅವರ ಗ್ರಾಮಕ್ಕೆ ಸಂತನೊಬ್ಬ ಬಂದಿದ್ದ. ತಮ್ಮ ಹಳ್ಳಿಗೆ ಒಳ್ಳೆಯದಾಗಬಹುದೆಂದು ಅವನಿಗೆ ಅಲ್ಲಿಯೇ ಇರಲಿಕ್ಕೆ ಹೇಳಿದರು. ಅವನು ಒಪ್ಪದೇ ಇದ್ದಾಗ ಅವನನ್ನು ಕೊಂದು, ಒಂದು ಗೋರಿ ಕಟ್ಟಿದ್ದಾರೆ. ಅಲ್ಲಿ ಪ್ರತಿ ವರುಷ ದೊಡ್ಡದಾಗಿ ಜಾತ್ರೆಯನ್ನು ಏರ್ಪಡಿಸುತ್ತಾರೆ. ಗಾಂಧೀಜಿ ಅಲ್ಲಿ ಮತ್ತೆರಡು ದಿವಸ ಉಳಿದರೋ ಇಲ್ಲೋ ಗೊತ್ತಿಲ್ಲ. ಆದರೂ ಬಾಪೂಜಿ ನಕ್ಕಿರಲಿಕ್ಕೇ ಬೇಕು.

ಗಾಂಧೀಜಿಯವರ ಪಟ್ಟ ಶಿಷ್ಯರೆಂದು ಪ್ರಸಿದ್ಧಿ ಪಡೆದಿರುವ ಜವಾಹರಲಾಲ ನೆಹರೂ ಸಹ ವಿನೋದದಲ್ಲಿ ಹಿಂದುಳಿದವರಲ್ಲ. ನೆಹರೂ ಅವರ ಸರಕಾರದಲ್ಲಿ ಆರೋಗ್ಯ ಮಂತ್ರಿಯಾಗಿದ್ದ ರಾಜಕುಮಾರಿ ಅಮೃತ ಕೌರರಿಗೆ ಒಂದು ಸಲ ಕಾಂಗ್ರೆಸ್ಸಿಗರ ಮೇಲೆ ಸಿಟ್ಟು ಬಂದು ಕಾಂಗ್ರೆಸ್ಸಿಗರು ಲುಚ್ಚಾಗಳು, ಬದ್ಮಾಶ್ ಜನರು, ದೇಶದ ಹಿತಬಯಸದವರು, ಸ್ವಾರ್ಥಿಗಳು ಎಂದೆಲ್ಲ ಬಯ್ದರು. ಅದನ್ನೆಲ್ಲ ಶಾಂತವಾಗಿ ಕೇಳಿ ನೆಹರೂರವರು ಮಂದಸ್ಮಿತರಾಗಿ, "ಶ್ರೀಮತಿ ಕೌರರೇ, ದಯಮಾಡಿ ನೆನಪಿಡಿ, ಈ ನೆಹರು ಸಹ ಒಬ್ಬ ಕಾಂಗ್ರೆಸ್ಸಿಗ" ಎಂದರಂತೆ.

ಮಾನವೀಯತೆಯನ್ನು ನೆಹರೂರವರು ಮೈಗೂಡಿಸಿಕೊಂಡಿದ್ದನ್ನು ಮರೆಯುವಂತಿಲ್ಲ. ಮುಂಬಯಿಗೆ ಬಂದಿದ್ದ ನೆಹರೂರವರು ತಮ್ಮ ತಂಗಿ ಕೃಷ್ಣಾ ಹಥಿಸಿಂಗರ ಮನೆಯಲ್ಲಿ ಊಟಕ್ಕೆ ಕುಳಿತಿದ್ದರು. 'ಬಾಂಬೆ ಕ್ರಾನಿಕಲ್'ನ ವ್ಯಂಗ್ಯ ಚಿತ್ರಕಾರ ನೆಹರೂರವರ ಚಿತ್ರ ತೆಗೆಯಲು ಬಂದ. ಸಮಯದ ಅಭಾವವಿದ್ದುದರಿಂದ ಸಿಟಿಂಗ್ ಕೊಡಲು ತಮಗೆ ಸಾಧ್ಯವಿಲ್ಲವೆಂದು ಊಟ ಮಾಡುತ್ತಿದ್ದ ನೆಹರೂ ಹೇಳಿದಾಗ ಮುಖವನ್ನು ಸಪ್ಪಗೆ ಮಾಡಿದ ಆ ವ್ಯಂಗ್ಯಚಿತ್ರಕಾರ, "[illegible] ಊಟ ಸಾಗಿದೆ. ನನ್ನ ಊಟಕ್ಕೆ ಮಾತ್ರ ಇವತ್ತು

ನೆಹರೂ ಅವರ ಬಳಿಗೆ ಕೆಲ ಸಮಯ ಕಳೆದು ಹೋಗಬೇಕಾಯಿತು.

ನೆಹರೂ ಸರಕಾರದಲ್ಲಿ ಶಿಕ್ಷಣಮಂತ್ರಿಯಾಗಿದ್ದ ಅಬ್ದುಲ್ ಕಲಾಮ್ ಆಜಾದರು ಶಿಕ್ಷಣ ತಜ್ಞರೆಂದೂ ಹೆಸರಾಗಿದ್ದರು. ಶಿಕ್ಷಣ ಖಾತೆಗೆ ಐ.ಸಿ.ಎಸ್. ಕಾರ್ಯದರ್ಶಿಗಳಿಲ್ಲದ್ದನ್ನು ಕಂಡು ನೆಹರೂ ಮತ್ತು ವಲ್ಲಭಭಾಯಿಯವರು ಐ.ಸಿ.ಎಸ್. ಅಧಿಕಾರಿಗಳನ್ನು ಕಾರ್ಯದರ್ಶಿಯನ್ನಾಗಿ ತೆಗೆದುಕೊಳ್ಳುವಂತೆ ಮೇಲಿಂದ ಮೇಲೆ ಹೇಳುತ್ತಿದ್ದರು. ಶಿಕ್ಷಣ ತಜ್ಞರಾದ ಆಜಾದ್ ಕೊನೆಗೆ ಹೇಳಿದರಂತೆ, "ಇದು ಶಿಕ್ಷಣ ಕ್ಷೇತ್ರ, ಶಿಕ್ಷಣ ಪಡೆದವರು ಮಾತ್ರ ಇಲ್ಲಿರಲಿ."

ಮಂತ್ರಿಗಳಿನ್ನೂ ಸೂಕ್ಷ್ಮಮತಿಗಳಾಗಿದ್ದ ಕಾಲವದು. ಮಂತ್ರಿಗಳು ಭವ್ಯಗಾತ್ರದ ವಿದೇಶಿ ಕಾರುಗಳನ್ನೇ ಉಪಯೋಗಿಸುತ್ತಾರೆಂದು ಸಂಸತ್ ಸದಸ್ಯರು. ಆರೋಪ ಮಾಡಿದಾಗ, ಲಾಲಬಹಾದ್ದೂರ ಶಾಸ್ತ್ರಿಯವರು ಮುಗುಳ್ನಗುತ್ತಾ ಹೇಳಿದರು, "ನಾನೆಂದೂ ಇಂಥ ಕಾರಿನಲ್ಲಿ ಹೋಗುವುದಿಲ್ಲ. ಅದರಲ್ಲಿ ನಾನು ಕುಳಿತರೆ ಯಾರಿಗೂ ಕಾಣುವುದಿಲ್ಲವಾದ್ದರಿಂದ ಯಾರೂ ನನ್ನ ಕಡೆಗೆ

## ಮಳೆರಾಯ ಬರಬಾರದೆ!

ಓ ಮಳೆರಾಯ, ಬರಬಾರದೆ ನೀ ಬೇಗ
ಧಾರವಾಡಕ್ಕೆ ಬಿಸಿಲು ಬಹಳವಾಯಿತು
ಮಾವಿನ ಕಾಯಿ ಜೋತಾಡುತಿವೆ ಪಾಡಾಗಿ
ಕೆರೆ- ಬತ್ತಿವೆ- ಕುರು ಕುರು ಮೇಯಲು
ಹುಲ್ಲಿಲ್ಲ- ತುರುಕರುಗಳಿಗೆ ಈ
ಮಾತು- ಎಲ್ಲೆಲ್ಲೂ ಕೇಳಿ ಬರುತಿದೆ.
ಮುಂಜಾವು ವಾಕಿಂಗಿಗೆ ಹೊರಟ ಮುದುಕರೆಲ್ಲ,
'ಛೀ, ಈನು ಬೇಸಿಗೆಯಪ್ಪಾ- ಕೆಟ್ಟಿತು
ಧಾರವಾಡ ಎಂದೆನ್ನುತಾ ಎಲ್ಲೆಲ್ಲಿಯೋ
ಜನ ಬಂದು ಸೇರಿತೆಂದು— ಬೇಸಿಗೆ
ಹೆಚ್ಚಾಯಿತೆಂದು' ನಿಟ್ಟುಸಿರು
ಬಿಡುತ್ತಾರೆ ಪಾಪ! ಕಾರಣ ಬಂದುಬಿಡು
ಒಮ್ಮೆ ಮೇ ಫ್ಲಾವರ್ ಅರಳಲಿ-
ಕೋಗಿಲೆ ಕಂಠ ಸರಿಪಡಿಸಿಕೊಳ್ಳಲಿ
ಬಾ ಮಹಾರಾಯ— ಒಮ್ಮೆ ಬಂದು ಬಿಡು
ಹೊರಗೆ ಬರಲಿ- ನಮ್ಮ ಮುದುಕು ಛತ್ರಿ!

—ಬಿ. ಆರ್. ವಾಡಪ್ಪಿ

(ವೈಶಾಖ ಕಳೆದಾಗಲೂ ಬಾರದಿದ್ದ ಮೇಘರಾಜನನ್ನು ಕುರಿತು)

# ಬೆಳೆಯುತ್ತಿರುವ ಮಕ್ಕಳಿಗೆ

## ಬೇಕು ವಿಶೇಷ ಘನ ಆಹಾರ...

# ಫೆರೆಕ್ಸ್

## ಯಾಕೆಂದರೆ ಫೆರೆಕ್ಸ್ ಮಕ್ಕಳ ಶೀಘ್ರ, ಸರ್ವಾಂಗೀಣ ಬೆಳವಣಿಗೆಗಾಗಿ <u>ಅಧಿಕ</u> ಪೋಷಕ ಘನ ಆಹಾರವಾಗಿದೆ.

1. ನಿಮ್ಮ ಮಗುವಿನ ಬೆಳವಣಿಗೆಗೆ ಅತ್ಯಾವಶ್ಯಕವಾದ ಪ್ರೋಟೀನ್‌ನಿಂದ ಫೆರೆಕ್ಸ್ ಸಮೃದ್ಧವಾಗಿದೆ.

2. ನಿಮ್ಮ ಮಗುವಿಗೆ ರಕ್ತಹೀನತೆಯ ವಿರುದ್ಧ ರಕ್ಷಣೆ ನೀಡಲು, ರೋಗ ಪ್ರತಿರೋಧಕ ಶಕ್ತಿಯನ್ನು ಹೆಚ್ಚಿಸಲು ಮತ್ತು ಆರೋಗ್ಯಪೂರ್ಣ ರಕ್ತವನ್ನು ಖಾತ್ರಿಪಡಿಸಲು ಫೆರೆಕ್ಸ್‌ನಲ್ಲಿ ಬ್ರ್ಯಾಂಡ್‌ಗೊಂಡ ಬೇರೆ ಯಾವುದೇ ಘನ ಆಹಾರಕ್ಕಿಂತ ಅಧಿಕ ಕಬ್ಬಿಣ ಸತ್ವವಿದೆ.

3. ಕ್ಯಾಲ್ಸಿಯಮ್ ಮತ್ತು ಫಾಸ್ಫರಸ್. ಇವುಗಳನ್ನು 2:1ರ ಆದರ್ಶ ಪ್ರಮಾಣದಲ್ಲಿ ಒಳಗೊಂಡಿರುವ ಬ್ರ್ಯಾಂಡೆಡ್ ಘನ ಆಹಾರ ಫೆರೆಕ್ಸ್ ಒಂದೇ. ಈ ರೀತಿಯಲ್ಲಿ ಅದು ನಿಮ್ಮ ಮಗುವಿಗೆ ಅಧಿಕ ಆರೋಗ್ಯಪೂರ್ಣ ಎಲುಬು ಮತ್ತು ಸುದೃಢ ಹಲ್ಲುಗಳು ದೊರೆಯುವುದನ್ನು ಖಾತ್ರಿಪಡಿಸುತ್ತದೆ.

4. ಅಲ್ಲದೆ ಫೆರೆಕ್ಸ್ ಸುಲಭವಾಗಿ ಪಚನಗೊಳ್ಳುತ್ತದೆ—ಅದಕ್ಕೆ ಕಾರಣ ನಿಮ್ಮ ಮಗುವಿನ ಕೋಮಲ ಪಚನಾಂಗಗಳಿಗೆ ಸರಿಹೊಂದುವಂತೆ ವಿಶೇಷವಾಗಿ ಮೊದಲೇ ಬೇಯಿಸಿ ಅದನ್ನು ಸಿದ್ಧಗೊಳಿಸಲಾಗಿದೆ.




ಡಾಕ್ಟರರು ಶಿಫಾರಸು ಮಾಡುತ್ತಾರೆ-

**ಫೆರೆಕ್ಸ್®**

*ಗ್ಲಾಕ್ಸೋ* ಉತ್ಪಾದನೆ

ಲಕ್ಷ್ಯಕೊಡುವದಿಲ್ಲ," ಆಗ ಸಂಸತ್ತಿನ ತುಂಬ ಹಾಸ್ಯದ ಹೊನಲು.

ಹೊಸದಾಗಿ ಅಧಿಕಾರ ವಹಿಸಿಕೊಂಡ ಲಾರ್ಡ ಮೌಂಟ್ ಬ್ಯಾಟನ್ನರ ಭೆಟ್ಟಿಗೆ ಜಿನ್ನಾ ಹೋಗಬೇಕಾಗಿತ್ತು. ಅಂತಹ ವೇಳೆಯಲ್ಲಿ ಲೇಡಿ ಮೌಂಟ್‌ಬ್ಯಾಟನ್ನರು ಇರುವುದು ರೂಢಿ. ಆ ಮೂವರೂ ಫೋಟೋ ತೆಗೆಸಿಕೊಳ್ಳುವುದೂ ಸಂಪ್ರದಾಯ. ತಮ್ಮಿಬ್ಬರ ನಡುವೆ ಶ್ರೀಮತಿಯವರು ನಿಲ್ಲುತ್ತಾರೆ. ಆಗ, "ಎರಡು ಮುಳ್ಳುಗಳ ನಡುವೆ ಒಂದು ಗುಲಾಬಿ ಹೂವು" ಎಂದು, ವಿನೋದ ಮಾಡುವ ವಿಚಾರ ಜಿನ್ನಾರವರದಾಗಿತ್ತು. ಆದರೆ ಒಂದು ಕಡೆ ಲಾರ್ಡ್, ಮತ್ತೊಂದು ಕಡೆಗೆ ಲೇಡಿ ಮೌಂಟ್‌ಬ್ಯಾಟನ್ ನಡುವೆ ಜಿನ್ನಾ ನಿಂತರು. ಆಗಲೂ ಸಹ ಜಿನ್ನಾರವರು ತಮ್ಮ ಹಾಸ್ಯ ಚಟಾಕಿಯನ್ನು ಹಾರಿಸಿಯೇಬಿಟ್ಟರು. ಎಲ್ಲರೂ ನಕ್ಕಿರಲೇಬೇಕು– ಹಾಸ್ಯಕ್ಕಾಗಿಯಲ್ಲ. ತಪ್ಪಿಗಾಗಿ. ತಪ್ಪು ತಿಳಿಯುವ ಮೊದಲೇ ಮಾತು ಮಿಂಚಿತ್ತು.

ಗಡಿನಾಡ ಗಾಂಧಿ ಎಂದು ಪ್ರಸಿದ್ಧರಾದ ಬಾದಶಹಾಖಾನರನ್ನು ಜಿ. ಡಿ. ಬಿರ್ಲಾ ಫಲಾಹಾರಕ್ಕಾಗಿ ಆಮಂತ್ರಿಸಿದ್ದರು. ಅಲ್ಲಿದ್ದ ಹಣ್ಣುಗಳನ್ನು ಕಂಡು ಆಸೆಯಾಗಿ, ಬಿರ್ಲಾರವರು ಒಂದು ಹೋಳು ಕಿತ್ತಳೆಯನ್ನು ತಿಂದ ಕೂಡಲೇ ಡಾಕ್ಟರರು ಬಂದು ಅವರಿಗೆ ಅಂಟಾಸಿಡ್ ಗುಳಿಗೆ ನುಂಗಿಸಿದರು. ಅದನ್ನು ಕಂಡ ಬಾದಶಹರವರು, "ನಿಮಗೆ ದೇವರು ಸಂಪತ್ತು ಕೊಟ್ಟಿದ್ದಾನೆ, ನಮಗೆ ತಿನ್ನುವ ಸಾಮರ್ಥ್ಯ ಕೊಟ್ಟಿದ್ದಾನೆ. ನಾವು ತಿಂದು, ತಿಂದು ಸಾಯುತ್ತೇವೆ, ಅದನ್ನು ನೋಡಿ, ನೋಡಿ ಸಂಕಟಪಟ್ಟೇ ನೀವು ಸಾಯುತ್ತೀರಿ." ಎಂದು ಚಟಾಕಿ ಹಾರಿಸಿದರಂತೆ.

ಐ. ಸಿ. ಎಸ್. ಪಾಸಾಗಿ ಬಂದ ಬಂಗಾಲಿ ಬಾಬುಗಳೊಬ್ಬರು ನೋಬೆಲ್ ಪಾರಿತೋಷಕ ವಿಜೇತ ರವೀಂದ್ರರನ್ನು ಭೆಟ್ಟಿಯಾಗಿದ್ದರು. ಅವರು ಕೇವಲ ಇಂಗ್ಲೀಷಿನಲ್ಲಿ ಮಾತಾಡುವದನ್ನು ಕಂಡ ರವೀಂದ್ರರು ಬಂಗಾಲಿಯಲ್ಲಿ ಮಾತಾಡಲಿಕ್ಕೆ ಅವರಿಗೆ ಹೇಳಿದರು. ತಾನು ಬಂಗಾಲಿಯನ್ನು ಮರೆತುದಾಗಿ ಹೇಳಿದ್ದನ್ನು ಕೇಳಿ, "ಎಂತಹ ದುರ್ದೈವ! ನೀನು ಮಾತೃಭಾಷೆಯನ್ನು ಮರೆತಿರುವಿ. ಆದರೆ ಸರಿಯಾಗಿ ಇಂಗ್ಲೀಷನ್ನೂ ಕಲಿತಿಲ್ಲ," ಎಂದು ಅವರು ಹೇಳಿದಾಗ ಇಂಗು ತಿಂದ ಮಂಗನಾಗಿದ್ದ ಆ ಬಾಬುಸಾಹೇಬ್.

ಇಂತಹ ಸಾಹೇಬರಿಂದಲೇ ಭಾರತೀಯರ ಅವಹೇಳನವಾಗುತ್ತಿತ್ತು. ಗಡಿನಾಡ ಗಾಂಧಿಯವರ ಕಾರ್ಯದರ್ಶಿಯಾಗಿದ್ದ ಯೂನಸ್‌ರು ಶ್ರೀನಗರದ ಒಂದು ಹೊಟೇಲಿನಲ್ಲಿ ಕುಳಿತಾಗ ಒಬ್ಬ ಆಂಗ್ಲನು ಅವರ ಹತ್ತಿರ ಬಂದು ಕುಳಿತ. ಮಾತಾಡುತ್ತ ಅವನು ಕೇಳಿದ, "ಭಾರತೀಯರು ನಾಯಿಯ ಕೂಡ ಸಹ ಇಂಗ್ಲೀಷಿನಲ್ಲಿ ಮಾತಾಡುತ್ತಾರಲ್ಲ, ಯಾಕೆ?" ಯೂನಸ್ ಹೇಳಿದರು: "ಅದಕ್ಕೆ ತಿಳಿಯಬೇಕಾದರೆ, ಅದರ ಮಾತೃಭಾಷೆಯಲ್ಲಿಯೇ ಮಾತಾಡಬೇಕಲ್ಲವೆ!"

ದೊಡ್ಡವರ ಮಾತುಗಳು ಯಾವಾಗಲೂ ವಿನಯದಿಂದ ಕೂಡಿರುವವೆ. ಕೆ. ಪಿ. ಎಸ್. ಮೆನನ್ ಉತ್ತಮ ಐ. ಸಿ. ಎಸ್. ಅಧಿಕಾರಿ. ರಾಯಭಾರಿಯಾಗಿದ್ದವರಿಗೆ ಬಯ್ಗಳು ಗೊತ್ತಿಲ್ಲವೆಂದರೆ ಆಶ್ಚರ್ಯವಲ್ಲವೆ? ಅವರ ಗುಮಾಸ್ತನೊಬ್ಬ ಮಾಡಿದ ದೊಡ್ಡ ತಪ್ಪಿಗೆ ಅವರು ಹೇಳಿದರಂತೆ, "ಶ್ರೀ...ಯವರೆ, ನೀವು ಉತ್ಕೃಷ್ಟವಾದ ತಪ್ಪನ್ನೇ ಮಾಡಿರುವಿರಿ (You have done an excellent mistake), ಉತ್ತಮ ಸಂಸ್ಕಾರದ ಫಲ ಇದು."

ಜಾನ್ ಕೆನಡಿ ಅಮೇರಿಕದ ಅಧ್ಯಕ್ಷ ಪದಕ್ಕೆ ಉಮೇದುವಾರರಾಗಿದ್ದರು. ಅವರು ವಯಸ್ಸಿನಲ್ಲಿ ಬಹಳ ಚಿಕ್ಕವರಾಗಿದ್ದುದರಿಂದ ಅವರ ಸಾಮರ್ಥ್ಯದಲ್ಲಿ ಕೆಲವರಿಗೆ ಸಂಶಯವಿತ್ತು. "ಕೆನಡಿಯವರು ಮೊದಲು ವೈಸ್ (Vice president) ಆಗಬೇಕೆಂದು ಸೂಚಿಸಿದರು. "ನನಗೆ ವೈಸಿಸ್ (Vices ದುರ್ಗುಣಗಳು) ಸೇರುವದಿಲ್ಲ." ಎಂದರು ಕೆನಡಿ.

ದೊಡ್ಡವರ ವಿನೋದ ಯಾವಾಗಲೂ ಚೇತೋಹಾರಿಯಾಗಿಯೇ ಇರುತ್ತದೆ. ✡

ಗೌರೀಶ ಕಾಯ್ಕಿಣಿ

# ಡಾರ್ವಿನ್ ವಾಲ್ಲೆಸ್ ಮತ್ತು ಡಾ. ಶಂಬಾ

ಡಾ. ಶಂಬಾ ಜೋಶಿಯವರ ಈಚಿನ ಸಂಶೋಧನೆಯು ನಡೆದು ಬಂದ ದಾರಿ ಮಾನವನ ಉತ್ಕ್ರಾಂತಿವಿಕಾಸವಾದದ ನಾಗಮೋಡಿಯ ಪರಿಯನ್ನು ಏರಿ ಸಾಗಿ ಬಂದಿದೆ. ಅವರು ವಿವಸ್ವತ್ ಮನು ಮತ್ತು ಸ್ವಾಯಂಭು ಮನು ಇವರ ವಿಭಿನ್ನತೆಯನ್ನು ಪ್ರಸ್ತಾಪಿಸುತ್ತಾ ಪ್ರಜ್ಞೆ ಮತ್ತು ಬುದ್ಧಿ ಇವುಗಳಲ್ಲಿ ಸೂಕ್ಷ್ಮವಾದರೂ ಅಷ್ಟೇ ಮಹತ್ವದ ಭೇದವನ್ನು ನಿರೂಪಿಸಿದ್ದಾರೆ.

ಈ ಸಂದರ್ಭದಲ್ಲಿ ಮಾನವನ ಮನೋವಿಕಾಸದ ಹಂತದಲ್ಲಿ ಅವರು ಎರಡು ಘಟ್ಟಗಳನ್ನು ಗುರುತಿಸುತ್ತಾರೆ. ಅದನ್ನೇ ಚಾರ್ಲ್ಸ್ ಡಾರ್ವಿನ್ನನು ಪ್ರತಿಪಾದಿಸಿದ ಮಾನವನ ಉತ್ಕ್ರಾಂತಿಯ ಹಂತದಲ್ಲಿ ನಿಲ್ಲುತ್ತಾನೆ. ಸಲ್ಲುತ್ತಾನೆ ಎಂಬುದನ್ನೂ ಸೂಚಿಸುತ್ತಾರೆ. ಈ ವಾದದ ಲ್ಲಿಯ "Missing link" (ಕಳೆದುಹೋದ ಕೊಂಡಿ)ನ ಪರಿಭಾಷೆಗೆ ಪರ್ಯಾಯವಾಗಿ ಡಾ. ಜೋಶಿಯವರು ತುಂಬ ಮಾರ್ಮಿಕವಾಗಿ 'ನರ'ನೆಂಬ ಅವಸ್ಥೆಯನ್ನು 'ವಾ-ನರ'ನ ನಂತರ 'ಮಾನವ'ನ ಮುಂಚೆ ಪೃಥಕ್ ಆಗಿ ಒತ್ತಿ ಹೇಳುತ್ತಾರೆ. 'ನರ'ನು ಅಹುದೋ ಅಲ್ಲವೋ ("They were men and not men"- Loren C. Eisley). ಎಂಬ ಅವಸ್ಥೆಯ ದ್ವಿಪಾದ ಪಶು-ವಾನರ ಅಲ್ಲಿಂದ 'ನರ' ಅಲ್ಲಿಂದ ಮನಸ್ತತ್ವದ ವಿಕಾಸದೊಂದಿಗೆ ಮಾನವ, ಮನುಷ್ಯ. ಹೀಗಿದೆ ಈ ಸೋಪಾನ.

"ನರ ಮನುಷ್ಯ ಒಂದೇ ಜಾತಿ" ಎಂದು ಕವಿವರ್ಯ ಹಾಡಿದ್ದುಂಟು. ಆದರೆ ಮಾನಸಿಕ ವಿಕಾಸ ಕ್ರಮದಲ್ಲಿ ಈ 'ನರ' ಮಾನವನಿಂದ ಅಂಶಿಕವಾಗಿ ಕೆಳ ಮಟ್ಟದವ ಎಂಬುದು ಸ್ಪಷ್ಟ. ಡಾರ್ವಿನ್ ಈ ಪ್ರಮೇಯವನ್ನು ಪ್ರಸ್ತುತ ಪಡಿಸಿದ್ದೂ ಸಮಗ್ರ ನಿಸರ್ಗದಲ್ಲಿ ನಡೆಯುವ 'ಗುಣೋತ್ಕರ್ಷ'ದ ಆಯ್ಕೆ ಹಾಗೂ ಆ ಮೂಲಕ ಒದಗಿ ಬರುವ ಜೀವಜಾತಿಗಳ ಮಾರ್ಪಾಟು ಬೇರ್ಪಾಟುಗಳಿಂದ ಸ್ಥಾಪಿತವಾಗುವ, ನಿವರ್ತನಗೊಳ್ಳುವ ಯೋಗ್ಯತಮನ ಜೀವನ (Survival of the fittest) ತತ್ವವನ್ನೊಳಗೊಂಡ (Origin of the species- (ಜೀವ ಜಾತಿಗಳ ಉಗಮ)" ಎಂಬ ವಿಖ್ಯಾತ ಗ್ರಂಥದ ಅತಿ ಮಹತ್ವದ ಭಾಗವಾದೆ.

ಗಿಡ-ಬಳ್ಳಿ, ಕ್ರಿಮಿ-ಕೀಟ, ಪಶು-ಪಕ್ಷಿ ಮುಂತಾದ ಪ್ರಾಣಿವರ್ಗಗಳು ಬದುಕಿನ ಹೋರಾಟದಲ್ಲಿ ಪ್ರತಿಕೂಲಗಳನ್ನೂ ಪ್ರತಿ

ಸ್ಪರ್ಧಿಗಳನ್ನು ಎದುರಿಸಿ, ಹಿಮ್ಮೆಟ್ಟಿಸಿ ಮೀರಿ ನಿಲ್ಲುವ ಈ ಉತ್ಕ್ರಾಂತಿಯ ಏಣಿಯ ತೀರ ಈಚಿನ ಮೆಟ್ಟಿಲು ಈ ಮಂಗ – ಮಾನವ ವಿಕಾಸದ ಹಂತ. ಈ ಹಂತದ ತನಕ ಈ ನಿಸರ್ಗದ ಆಯ್ಕೆಯ ಸಿದ್ಧಾಂತವನ್ನು ಕಂಡುಹಿಡಿಯುವಲ್ಲಿ ಡಾರ್ವಿನ್ ಏಕಾಕಿಯಾಗಿದ್ದಿಲ್ಲ. ಅವನಿಗೆ ಸಮಕಾಲೀನನೂ ಸಹಸಂಶೋಧಕನೂ ಆಗಿ ಸ್ವತಂತ್ರವಾಗಿ ಆಲ್‌ಫ್ರೆಡ್ ರಸೆಲ್ ವಾಲ್ಲೆಸ್ ಎಂಬ ಮೇಧಾವಿಯೂ ಸಾಧನೆ ನಡೆಸಿದ್ದ. ಆದರೆ ಮಾನವನ ಉದಯದ ಹಂತದಲ್ಲಿ ಮಿದುಳಿನ ವಿಕಾಸದ ಮೀಮಾಂಸೆಯಲ್ಲಿ ವಾಲ್ಲೆಸ್ ಡಾರ್ವಿನ್ನನಿಂದ ಬೇರೆಯಾದ. ಅವರ ಸಿದ್ಧಾಂತಗಳಲ್ಲಿ ಒಂದು ರೀತಿ ಕವಲೊಡೆಯಿತು.

ಅದಕ್ಕೆ ಕಾರಣ ಈ "ಮಿಸಿಂಗ್ ಲಿಂಕ್"ನ ಸ್ವರೂಪದ ಬಗೆಗೆ ಮತಭೇದ, ಅರ್ಥಾತ್ ಮಾನವನ ಮಿದುಳು ಹೇಗೆ ಉಂಟಾಯಿತು ಎಂಬ ಬಗೆಗೆ ಇಬ್ಬರಲ್ಲಿ ತಲೆದೋರಿದ ತೀವ್ರ ಮತಭೇದ. ಡಾರ್ವಿನ್ ತನ್ನ ತರ್ಕಸರಣಿಗೆ ಸುಸಂಗತವಾಗಿ 'ಜಾತಿ ಮರ್ಕಟ'– ತಲೆಯಿಂದ ಮಾನವನ ಮಸ್ತಕದ ವಿಕಾಸವಾಗುವುದರಲ್ಲಿ ಅದೇ ನಿಸರ್ಗದ ಆಯ್ಕೆಯ ನಿಯಮ, ಗುಣಪರಿಣಾಮಿಯಾಗಿ ನಿರಂತರ ಮುನ್ನಡೆದು ಬಂದದ್ದನ್ನೇ ಕಂಡ. ಆದರೆ ಆಲ್‌ಫ್ರೆಡ್ ವಾಲ್ಲೆಸ್ ಈ ನಿಲುವನ್ನು ಕೆಳ ವರ್ಗದ ಪ್ರಾಣಿಪ್ರಪಂಚದ ಮಟ್ಟಿಗೇ ಒಪ್ಪಿಕೊಂಡು ಈ ಮಾನವೀಯ ಉತ್ಕ್ರಾಂತಿಯ ಮಟ್ಟದಲ್ಲಿ ಪೂರ್ತಿ ಬಿಟ್ಟುಕೊಟ್ಟ. ಮಾನವನ ಮಿದುಳಿನ ವಿಕಾಸದ ಕ್ರಮದ ದೃಷ್ಟಿಯಿಂದ ಈ ನೈಸರ್ಗಿಕ ಆಯ್ಕೆ ಹಾಗೂ ಆ ಮೂಲಕ ಮಾರ್ಪಾಟಾದ ಕ್ರಮ ತೀರ ದೀರ್ಘಾವಧಿಯದೂ ಬಲು ನಿಧಾನವಾಗಿಯೂ ಕಂಡಿತು.



"ಈ ಜಾಗಾನ ಮೊದಲಿದ್ದವನಿಗೆ ಅಡ್ವಾನ್ಸ್ ಕೊಟ್ಟು ಪಡೆದಿದ್ದೇನೆ ಗೊತ್ತಾ?"

೧೯೧೧ರ ಸುಮಾರಿಗೆ ಜಾವಾದಲ್ಲಿ ಹಾಗೂ ಇಂಗ್ಲೆಂಡಿನ ಸಸೆಕ್ಸ್ ಪ್ರಾಂತದ ಪಿಲ್ಟ್‌ಡೌನ್ ಎಂಬ ಗುಡ್ಡದೋರೆಯಲ್ಲಿ ಬೇರೆ ಬೇರೆಯಾಗಿ ಎರಡು ತಲೆ ಬುರುಡೆಗಳು ಸಿಕ್ಕವು– ಡಾರ್ವಿನ್ ವಾದಕ್ಕೆ ಪುಷ್ಟಿ ನೀಡಲು. ಜಾವಾ ವಾನರ ತಲೆ ಬುರುಡೆ ಆದಿಮ ಹೆಚ್ಚು ಪ್ರಾಥಮಿಕ ಹಾಗೂ ಸಣ್ಣ ಗಾತ್ರದ ಮಿದುಳಿನದಾಗಿತ್ತು. ಆದರೆ ಅದೇ ಸುಮಾರಿಗೆ ಸಿಕ್ಕ ಪಿಲ್ಟ್‌ಡೌನ್ ನರಕಪಾಲ ಕೆಳಬದಿಯಲ್ಲಿ ಮಂಗನ ಮೂತಿಯಂತಿದ್ದರೂ ಮೇಲ್ಭಾಗದಲ್ಲಿ ಆಧುನಿಕ ಮಾನವನ ಮಿದುಳಿನ ಗಾತ್ರಕ್ಕೆ ಹೋಲುವ ಬುರುಡೆಯಾಗಿತ್ತು. ಇವೆರಡೂ ಹಿಮಯುಗದ ಆರಂಭದವು; ೧೦ ಲಕ್ಷ ವರ್ಷ ಹಳೆಯವು ಎಂದು ತೀರ್ಮಾನಿಸಲಾಗಿತ್ತು. ಡಾರ್ವಿನ್ನನ ಗ್ರಂಥ ಪ್ರಕಟವಾದ ೧೮೫೯ನೆಯ ಇಸವಿಯಿಂದ ೫೦ ವರ್ಷ ಕಾಲ ಇವೆರಡೂ ತಲೆ ಬುರುಡೆಗಳುಳ್ಳ ಮೂಲ ನರ–ವಾನರರು ಆ "ಕಳೆದು ಹೋದ ಕೊಂಡಿ"ಗಳನ್ನು ಪೂರೈಸಲು ಸಾಕಾದರು.

ಆದರೆ ೧೯೫೧ರ ಸುಮಾರಿಗೆ ಪಿಲ್ಟ್‌ಡೌನ್ ತಲೆ ಬುರುಡೆ ಪೂರ್ತಿ ಕೃತ್ರಿಮ–ಮೋಸವೆಂದು ಸಿದ್ಧವಾಯಿತು! ಯಾರೋ ತುಂಟರು ಹಳೆಯ ಮಂಗಕ್ಕೆ ಈಚಿನ ತಲೆ ಜೋಡಿಸಿದ್ದರಿಂದ ಅದು ಮೋಸದ ಬುರುಡೆಯಾಗಿ ಒಡೆಯಿತು! ಆದರೆ ಆಲ್‌ಫ್ರೆಡ್ ವಾಲ್ಲೆಸ್ ೧೯೧೩ರಲ್ಲಿಯೇ! ಈ ಪಿಲ್ಟ್‌ಡೌನ್ ಬುರುಡೆಯನ್ನು ನಂಬಿದ್ದಿಲ್ಲ! ಆದರೆ ಅವನನ್ನು ಯಾರೂ ಗಮನಿಸಲಿಲ್ಲ.

ವಾಲ್ಲೇಸ್ ಉಷ್ಣ ಕಟಿಬಂಧದ ದ್ವೀಪ ಸಮೂಹಗಳಲ್ಲಿ ಬಹುಕಾಲ ಆದಿವಾಸಿ ಕಾಡು ಜನಗಳ ನಡುವೆ ವಾಸಿಸಿ ಅವರ ಹಳಬ ಮಾದರಿಯ ಬದುಕನ್ನು ಅಭ್ಯಸಿಸಿದವನು. ಅದರಿಂದ ಆತ ಕಂಡುಕೊಂಡದ್ದೇನೆಂದರೆ, ಆದಿ ಮಾನವನು ಅವನಿಗೂ ಪೂರ್ವದ ಮೂಲ ವಾನರ ಕುಲದಿಂದ ಒಮ್ಮೆಲೆ ಆ ಕಾಡು ಅವಸ್ಥೆಯಲ್ಲಿಯೂ ತೀರ ಮೇಲೆ ಹಾಗೂ ಬೇರೆ ಮಾದರಿಯ ಬದುಕಿಗೆ ಏರಿದವನು. ಅವನ ತಲೆ ದುಂಡಗಾಗಿ, ತಲೆ ಬುರುಡೆ ತೆಳುವಾಗಿ ವೈದೊಗಲ ರೋಣೆ ಕಳಚಿತ್ತಲ್ಲದೆ ಅವನ ಮಿದುಳಿನ ಶಕ್ತಿ, ಮಾನಸಿಕ ಶಕ್ತಿ ತಾತ್ಕಾಲಿಕ ಜೀವಧಾರಣೆಯ ಅಗತ್ಯಗಳ ಪೂರೈಕೆಗೂ ಮೀರಿ ಉಳಿಯುವಷ್ಟು ಪುಷ್ಟವೂ ಬಲಿಷ್ಠವೂ ಆಗಿತ್ತು. ಡಾರ್ವಿನ್ನನ ಅಭಿಪ್ರಾಯದಂತೆ ನಿಸರ್ಗದ ಆಯ್ಕೆಯಲ್ಲಿ ಇಂಥ ಇಂದ್ರಿಯ ಅವಯವಗಳ ಶಕ್ತಿ ಆಯಾ ಅಗತ್ಯದ ಒತ್ತಡಕ್ಕೆ ಎಷ್ಟು ಬೇಕೋ ಅಷ್ಟೇ ಅಥವಾ ತುಸುವೆ ಹೆಚ್ಚು ಬೆಳೆದು ಮುಂದೆ ಆ ಜಾತಿ ಬದುಕಿ ಉಳಿದು ಅದರ ಆ ಶಕ್ತಿ ಗುಣ ಲಕ್ಷಣಗಳು ಪಳಗಿ ನಿಧಾನವಾಗಿ ಬಲಿತು ಬೆಳೆಯುತ್ತವೆ.

ಆದರೆ ಈ ಮಾನವ ಪ್ರಾಣಿಯ ಮಟ್ಟಿಗೆ ಈ ಧಿಡೀರ್ ಬದಲಾವಣೆ ಉತ್ಕ್ರಾಂತಿಯ ಉದ್ದಜಿಗಿತ ಹೇಗೆ ಏಕೆ ಸಾಧ್ಯ? ಇದಕ್ಕೆ ಆಲ್‌ಫ್ರೆಡ್ ವಾಲ್ಲೆಸ್ ಸೂಚಿಸಿದ ಕಾರಣವು ಮಾತ್ರ ಅವೈಜ್ಞಾನಿಕ, ವಿಚಾರವಾದಿಗೆ ಅಮಾಯಕ. ಯಾವುದೋ ದೈವಿಕ ಶಕ್ತಿಯ ನಿಯಂತ್ರಣ, ಅಜ್ಞಾತ ಆತ್ಮಿಕ ಘಟಕ ಈ ವಾನರನಿಂದ ನರನಾಗುವ ಅವಸ್ಥೆಯಲ್ಲಿ ಉತ್ಕ್ರಾಂತಿಯ ಕ್ರಿಯೆ ಶೀಘ್ರವೂ ತೀವ್ರವೂ ಆಗುವಂತೆ ಕೆಲಸ ಮಾಡಿರಬೇಕು ! ಇಲ್ಲವಾದರೆ, ಆ ಅತಿ ಆದಿ ಮಾನವನಿಂದ ಇಂದಿನ ಆದಿವಾಸಿ ಕಾಡು ಮಾನವ ವಿಶೇಷ ಭಿನ್ನವಾಗಿಲ್ಲ. ಅಲ್ಲದೆ ಕೋಟಿಕೋಡಗಗಳಲ್ಲಿ ಕಂಡುಬರದ ಒಂದು ಸೌಂದರ್ಯ ಪ್ರಜ್ಞೆ, ಕಲಾಸಕ್ತಿ ಈ ಪ್ರಾಚೀನ ಗವಿ ಮನುಷ್ಯರಲ್ಲಿ ವ್ಯಕ್ತವಾಗಿದೆ. ಅವರು ಬರೆದ ಭಿತ್ತಿಚಿತ್ರಗಳ ರೇಖಾಕೃತಿ ವರ್ಣಾಕೃತಿಗಳಲ್ಲಿ. ಅವರಲ್ಲಿ ಆ ನಿರೀಕ್ಷಣೆ ಹಾಗೂ ನವ ನಿರ್ಮಾಣ ಶಕ್ತಿ ಒಮ್ಮೆಲೆ ಬಂದಂತಿದೆ! ಈ ಗುಣೋತ್ಕರ್ಷ ಕಾಲ ಪರಿಪಾಕದಿಂದ ಸಾವಕಾಶವಾಗಿ ಬಂದ ಉತ್ಕ್ರಾಂತಿ ವಿಕಾಸದ ಕ್ರಮವಲ್ಲ. ವಾಲ್ಲೆಸನ ಈ ವಾದದಿಂದ ಡಾರ್ವಿನ್ ತುಸು ಕಳವಳಗೊಂಡನು. ಆದರೆ ಇದಕ್ಕೆ ಉತ್ತರಿಸಲಿಲ್ಲ. (ಆಗ ಪಿಲ್ಟ್‌ಡೌನ್ ನರಕಪಾಲ ಮೋಸವೆಂದು ಯಾರೂ ತಿಳಿದಿದ್ದಿಲ್ಲ!)

ವಾನರನು ನರನಾದಾಗ ಅವನ ಶೈಶವಾವಸ್ಥೆಯ ಅಶಕ್ತತೆ, ಅಸಹಾಯತೆ ಬೆಳೆಯಿತು. ಚಿಕ್ಕಂದು ಲಂಬಾಯಮಾನವಾಯಿತು. ಅದಕ್ಕಾಗಿ ಕೌಟುಂಬಿಕ ಹಾಗೂ ಸಾಮಾಜಿಕ ಲಾಲನೆ ಪಾಲನೆ ಪೋಷಣೆಯ ಅಗತ್ಯ ಉಂಟಾಯಿತು. ಜೊತೆಗೆ ಪಶು ಕೋಟಿಯ ಪ್ರಾಕೃತಿಕ ಮೂಲ ಪ್ರವೃತ್ತಿಗಳ ಕ್ರಿಯೆಯ ಬಲ ಕಡಿಮೆಯಾಗತೊಡಗಿ ಅದರ ರಕ್ಷಾಕವಚದ ಸ್ಥಾನದಲ್ಲಿ ಹೊಸ ಮಿದುಳು ಊಹೆ, ಕನಸು, ವಿಚಾರು ಜಟಿ, ರೂಢಿ, ಸಂಸ್ಕಾರ ಇತ್ಯಾದಿಗಳ ಒಂದು, ಸಂಕೀರ್ಣ ಭಾವಕೋಶವನ್ನೇ ಈ ನವಮಾನವ ಜೀವಿಯ ಸಂರಕ್ಷಣೆಗೆ ನಿರ್ಮಿಸುವ ಒತ್ತಡದಲ್ಲಿ ವೇಗದಿಂದ ಕೆಲಸಮಾಡುವಂತೆ ಆಯಿತು, ಇದರಿಂದ ಮನಃಸಂಸ್ಥೆ ರೂಪುಗೊಂಡಿತು.

ಆದರೆ ಈ ಹೊಸ ನರನ ಈ ಪ್ರಜ್ಞಾ ಪ್ರಪಂಚ ಮಾನವನ ಮನಃಪ್ರಪಂಚದಿಂದ ಬೇರೆಯಾಗಿ ಬಹುಕಾಲ ಸಾಗಿರಲು ಶಕ್ಯವಿಲ್ಲ. ಡಾ. ಶಂಬಾ ಅವರು ವಾಲ್ಲೇಸನ ಸಿದ್ಧಾಂತದತ್ತ ವಾಲಿದಂತಿದೆ. ಆದರೆ ಅವರು ಕಲ್ಪಿಸಿದಂತೆ ನರ ಪಾತಳಿ ಮಾನವ ಪಾತಳಿಯಿಂದ ವಾಲ್ಲೆಸನೂ ಅಷ್ಟೊಂದು ಕಟ್ಟುನಿಟ್ಟಾಗಿ, clear cut ಆಗಿ ಪ್ರತ್ಯೇಕಿಸಿದಂತಿಲ್ಲ. ಇವರ ನಡುವಿನ ಕೊಂಡಿಯೂ ಎಲ್ಲೋ ಕಳಚಿಕೊಂಡಿದೆಯೋ? ✡



# ಪೂರೈಕೆ ಮತ್ತು ಬೇಡಿಕೆ

ಮೂಲ : 'ಓ ಹೆನ್ರಿ'
ಕನ್ನಡಕ್ಕೆ : ಎಚ್. ಎಸ್. ಶ್ರೀಪಾದಭಟ್ಟ

ಥರ್ಡ್ ಅವೆನ್ಯೂರಸ್ತೆಯಲ್ಲಿ ೯ × ೧೨ ಚದರಡಿ ಅಳತೆಯ ಒಂದು ಮಳಿಗೆಯಿದೆ. ವಿದ್ಯುಚ್ಛಕ್ತಿಯಿಂದ ಹ್ಯಾಟುಗಳನ್ನು ಕ್ಲೀನ್ ಮಾಡುವ ಅಂಗಡಿಯೊಂದು ಅಲ್ಲಿದೆ. ಒಮ್ಮೆ ಅಂಗಡಿ ಹೊಕ್ಕ ಗಿರಾಕಿ ಮತ್ತೊಮ್ಮೆ ಬೇರೆ ಕಡೆ ಮುಖ ಹಾಕಿದ್ದಿಲ್ಲ. ಅಂಗಡಿ ಮಾಲಿಕನ ಈ ಯಶಸ್ಸಿನ ಗುಟ್ಟನ್ನು ನನಗೆ ತಿಳಿಯಲಾಗದಿದ್ದರೂ ಪ್ರತಿ ನಾಲ್ಕು ದಿನಗಳಿಗೊಮ್ಮೆ ನಿಮ್ಮ, ನನ್ನ ಹ್ಯಾಟುಗಳು ಅಲ್ಲಿ ಕ್ಲೀನ್ ಆಗುತ್ತವೆ. ಆ ಅಂಗಡಿಯ ಮಾಲಿಕನ ಹೆಸರು ಫಿಂಚ್.

ಫಿಂಚ್ ೩೦ ವರ್ಷದಿಂದ ೪೦ ವರ್ಷದೊಳಗಿನ. ಹಳದಿ ಬಣ್ಣದ, ಆಮೆನಡಿಗೆಯ ಮನುಷ್ಯ. ವ್ಯಾಪಾರ ಭರದಿಂದ ನಡೆಯುತ್ತಿತ್ತು. ವ್ಯಾಪಾರ ಸಳ್ಳಕವಾದಾಗ ಅವರಿವರೊಡನೆ ತನ್ನ ಅನುಭವಗಳ ಗ್ರಂಥದಿಂದಾಯ್ದ ಕುತೂಹಲಕರ ಘಟನೆಗಳನ್ನು ಸ್ವಾರಸ್ಯವಾಗಿ ಹೇಳುವುದರಿಂದ ಸ್ವಾಭಾವಿಕವಾಗಿ ಗಿರಾಕಿಗಳು ಆಕರ್ಷಿಸಲ್ಪಡುತ್ತಿದ್ದರು. ಅಗತ್ಯವಿಲ್ಲದಿದ್ದರೂ ನಾನು ಆಗಾಗ್ಗೆ ನನ್ನ ಹ್ಯಾಟನ್ನು ಕ್ಲೀನ್ ಮಾಡಿಸುತ್ತಿದ್ದುದೂ ಇದೇ ಕಾರಣದಿಂದ— ನಾನಾ ವಿಧವಾದ ಅಂಗಡಿ ವ್ಯಾಪಾರಗಳ ರಹಸ್ಯ ತಿಳಿಯುವುದೆಂಬ ಕುತೂಹಲದಿಂದ.

ಒಂದು ಮಧ್ಯಾಹ್ನ ನಾನು ಆತನ ಅಂಗಡಿಯೊಳಗೆ ಕಾಲಿಟ್ಟಾಗ ಆತ ಏಕಾಂಗಿಯಾಗಿದ್ದ. ಮುಗುಳ್ನಗುತ್ತ ನನ್ನ ಹ್ಯಾಟು 'ಪನಾಮ'ವನ್ನು ಕೈಗೆ ತೆಗೆದುಕೊಂಡು ಒಂದು ದ್ರವದಿಂದ ಸ್ವಚ್ಛಗೊಳಿಸತೊಡಗಿದ. ಆತನೇ ತಯಾರಿಸಿದ ಒಂದು ತೆರನ ಗುಂಬವಾದ ಆ ದ್ರವ, ಅಯಸ್ಕಾಂತದಂತೆ ಹ್ಯಾಟುಗಳ ಮೇಲಿನ ಕೊಳೆ ಮತ್ತು ಧೂಳನ್ನು ಹೀರಿಬಿಡುವುದೆಂಬ ಆತನ ನಂಬಿಕೆ ಹುಸಿಯಾಗಿದ್ದಿಲ್ಲ.

"ಇಂಥ ಹ್ಯಾಟುಗಳನ್ನು ಇಂಡಿಯನ್ನರು ನೀರು ಸೋರಗದೆ ಉಪಯೋಗಿಸುತ್ತಾರಂತೆ." ನಾನು ಹೇಳಿದೆ.

"ಸಾಧ್ಯವಿಲ್ಲ, ಯಾವ ಇಂಡಿಯನ್ ಅಥವಾ ಬಿಳಿ ಮನುಷ್ಯನೂ ನೀರಿನೊಳಗಡೆ ದೀರ್ಘಕಾಲ ಇರಲಾರ. ಮಾತಿಗೆ ಹೇಳುತ್ತೇನೆ. ನಿಮಗೆ ರಾಜಕೀಯದತ್ತ ಒಲವಿದೆಯೇ? ಈಚೆಗೆ ಪತ್ರಿಕೆಯಲ್ಲೊಂದು ಸುದ್ದಿ ಓದಿದೆ. ಇಂಡಿಯನ್ನರು 'ದ ಲಾ ಆಫ್ ಸಪ್ಲೈ ಅಂಡ್ ಡಿಮ್ಯಾಂಡ್' ಎಂಬ ಒಂದು ಕಾನೂನು ಪರೀಕ್ಷೆಯನ್ನು ಪಾಸು ಮಾಡುತ್ತಾರಂತೆ," ಫಿಂಚ್ ನುಡಿದ— ಹ್ಯಾಟು

ರರ ದೋಣಿಗಳು ತಪ್ಪಿಸಿಕೊಂಡಾಗ, ಭಯಂಕರ ಪಟಗೋನಿಯನ್ ನರಭಕ್ಷಕರ ಕೈಗೆ ಸಿಕ್ಕಿ ಸಖಿಗಳನ್ನು ಕಳೆದುಕೊಂಡ. ಏಡಿಯಂತೆ ತನ್ನ ಎಡಗೈಯೊಂದನ್ನು ಕಳೆದುಕೊಂಡ ವ್ಯಕ್ತಿಯೊಬ್ಬ ನಿದ್ದಾನೆ. ಇಂಥಿಂಥವರೆಲ್ಲಾ ನನಗೆ ಸ್ನೇಹಿತರಿರುವಾಗ ಒಬ್ಬ ಹ್ಯಾಟ್ ಕ್ಲೀನರನಿಗೆ ಒಬ್ಬ ಬಿಳಿಯ ವ್ಯಕ್ತಿ ಪರಿಚಿತನಿರುವನೆಂಬ ವಿಚಾರ ನನ್ನನ್ನು ಅಷ್ಟಾಗಿ ಜುಲುಮೆಗೊಳಿಸಲಿಲ್ಲ.

"ಇದು, ಹೊಸ ಹ್ಯಾಟೇ?" ಎಂದಿನ ಒಣಗಿದ ಗೊಡ್ಡು ನಗೆಯನ್ನು ಪ್ರದರ್ಶಿಸುತ್ತ ಫಿಂಚ್ ಕೇಳಿದ.

"ಹೌದು; ಹಳೆಯದಕ್ಕಿಂತ ಅರ್ಧ ಇಂಚು ದೊಡ್ಡದಿದೆ. ಐದು ದಿನಗಳ ಮುಂಚೆಯಷ್ಟೇ ಆ ಹ್ಯಾಟನ್ನು ಕೊಂಡಿದ್ದೆ ನಾನು."

ಒಂದು ಹೊಸ ಕಥೆಯನ್ನು ಪ್ರಾರಂಭಿಸುತ್ತ ಫಿಂಚ್ ಹೇಳಿದ – "ಒಂದು ರಾತ್ರಿ ಒಬ್ಬ ಕಂದು ಬಿಳಿಯ ಬಣ್ಣದ ಮನುಷ್ಯನೊಬ್ಬ ನನಗೆ ಭೇಟಿಯಾದ. ಅವನ ಎದುರಿಗೆ ಕಾಣುತ್ತಿದ್ದ ನಾಲ್ಕು ಜೇಬುಗಳಲ್ಲಿ ಹಣ ಇಣುಕುತ್ತಿತ್ತು. ಸದಾ ಬಾಯಲ್ಲಿ ಏನಾದರೂ ಅಗಿಯುತ್ತಿದ್ದ. ಅದು ಈಗ್ಗೆ ಎರಡು ವರ್ಷಗಳ ಹಿಂದೆ ನಾನು ಕೆಲಸೇನಂಬರ್ ಗಾಡಿಯೊಂದರ ಪ್ರಯಾಣದಲ್ಲಿದ್ದಾಗ." ಕೊನೆಗೆ ನಮ್ಮ ಸಂಭಾಷಣೆ ಬಂಗಾರದತ್ತ ತಿರುಗಿತು. "ದಕ್ಷಿಣ ಅಮೇರಿಕದಲ್ಲಿ ಗ್ವಾಟೆಮಾಲಾ ಎಂಬ ಕಡಿದಾದ ಒಂದು ಬೆಟ್ಟ ಪ್ರದೇಶ, ಎಲ್ಲೆಲ್ಲೂ ಬಂಗಾರವನ್ನು ಮುಚ್ಚಿಕೊಂಡಿತ್ತಂತೆ. ಆಶ್ಚರ್ಯವೆಂದರೆ, ಕೆಲವು ಇಂಡಿಯನ್ನರು ಬಂಗಾರದ ಪೊಳೆಯನ್ನೇ ಆ ಬೆಟ್ಟದಿಂದ ಹರಿಸಿಕೊಂಡು ಹೋಗುತ್ತಿದ್ದರು." ಅವನ ಈ ಮಾತನ್ನು ನಾನು ನಂಬಲಿಲ್ಲ.... ಅವನ ಮಾತಿನಲ್ಲೇ ಹೇಳುವುದಾದರೆ, "ಇಂಕಾಸ್ ಮತ್ತು ಆ್ಯಸ್ಟೆಕ್ಸ್ ಎಂದು ಕರೆಯಲ್ಪಡುತ್ತಿದ್ದ ಒಂದು ಇಂಡಿಯನ್ ಗುಂಪು ಮೆಸಾಪೊಟೇಮಿಯಾ ಮತ್ತು ಮೆಕ್ಸಿಕೊದ ಜೊತೆ ಯಾದಾನಿಂದಲೂ ಗ್ವಾಟೆಮಾಲಾ ಪ್ರದೇಶದ ಮೂಲನಿವಾಸಿಗಳಾಗಿದ್ದರು. ಆ ಬೆಟ್ಟದ ಹಳ್ಳ, ಕಲ್ಲು, ಮಣ್ಣುಗಳಿಂದ ಬಂಗಾರದ ಹುಡಿಯನ್ನು ಜೇರ್ಪಡಿಸಿ, ನಂತರ ಅವುಗಳನ್ನು ಇದಕ್ಕೆಂದೇ ತಯಾರಿಸಿದ ಟಗರಿನ ಚರ್ಮದ ಚೀಲಗಳಲ್ಲಿ ಒಂದೊಂದು ಚೀಲಕ್ಕೆ ಒಂದೊಂದು 'ಅರೋಬಾ' (ಒಂದು 'ಅರೋಬಾ'೨೫ ಪೌಂಡುಗಳು)ದಂತೆ ತುಂಬಿಸಿ, ಭದ್ರವಾದ ಕಲ್ಲುಗೋಡೆಯ ಮನೆಯಲ್ಲಿ ಬಚ್ಚಿಡುತ್ತಿದ್ದರು. ಅವರ ಕಲ್ಲಿನ ಬಾಗಿಲ ಮೇಲೆ ಗುಂಗುರು ಕೂದಲುಳ್ಳ, ಉಬ್ಬಿದ ಸ್ತನಗಳ, ತೋರ ನಿತಂಬಗಳ ಕೋಲಲೂದುತ್ತಿರುವ ಆಕರ್ಷಕ ಭಂಗಿಯ ಸ್ತ್ರೀ ವಿಗ್ರಹಗಳನ್ನು ಕೆತ್ತುತ್ತಿದ್ದರು. ಆದರೆ ಅವರ ಸಂಪತ್ತೆಲ್ಲವನ್ನೂ ಒಬ್ಬ ಬಿಳಿಯ ದೊರೆ ತನ್ನದಾಗಿಸಿಕೊಂಡು ಇಡೀ ಗುಂಪನ್ನೇ ಬಹಿಷ್ಕರಿಸಿಬಿಟ್ಟು ಕೊಂಡಿದ್ದನಂತೆ. ಹೇರಳವಾಗಿ ಸಂಪತ್ತು ಕೊಡುವ ಭೂಮಿತಾಯಿಗೆ ತಮ್ಮ ಅಳಿಲು ಸೇವೆಯೆಂದು ಬಗೆಯುವ ಅವರ ಮುಗ್ಧ ಜೀವನವನ್ನು ಆ ದೊರೆ ಅವಮಾನವಾಗಿ ಮಾಡಿಸಿ ಪ್ರತಿಫಲ ತಾನು ಪಡೆಯುತ್ತಿದ್ದನಂತೆ."ನಂತರ ಸಂಭಾಷಣೆ ಅಷ್ಟಕ್ಕೇ ನಿಂತಿತು, ನಾನು ಆತನ ಕೈ ಕುಲುಕುತ್ತ, 'ಕ್ಷಮಿಸು, ನಾನು ನಿನ್ನ ಮಾತನ್ನು ನಂಬಲು ಸಾಧ್ಯವಿಲ್ಲ," ಎಂದು ಆತನನ್ನು ಬೀಳ್ಕೊಟ್ಟೆ'. ಎಂದ ಫಿಂಚ್ ಒಂದು ಕ್ಷಣ ಮೌನವಾಗಿ ಕುಳಿತ. ನನ್ನ ಕುತೂಹಲ ಮೇರೆ ಮೀರಿತು. ಆತ ಯಾವಾಗಲೂ ಹಾಗೆಯೇ. ತನ್ನ ಕಥಾನಕವನ್ನು ಅರ್ಧಕ್ಕೆ ನಿಲ್ಲಿಸಿ ನಮ್ಮ ಆಸಕ್ತಿ, ತಾಳ್ಮೆಯನ್ನು ಪರೀಕ್ಷಿಸುತ್ತಾನೆ. ನಾನು ತಕ್ಷಣ. "ಕಥೆ ಮುಗಿದು ಹೋಯಿತೇ? ಇಲ್ಲಿ ಆತ, ಹೇಳಿದ್ದನ್ನು ಪರೀಕ್ಷಿಸಲು ಹೋದೆಯಾ?" ಎಂದು ಕೇಳಿದೆ. ನನ್ನ ಕುತೂಹಲವನ್ನು ಅರಿತ ಆತ, "ನಿಮ್ಮ ಆಸಕ್ತಿಯನ್ನು ಪರೀಕ್ಷಿಸಲು ನಿಲ್ಲಿಸಿದೆ. ಈಗ ಕೇಳಿ. ಮುಂದಿನ ವಿಸ್ಮಯಕಾರಕ ಹಾಗೂ ಸಾಹಸಮಯವಾದ ನನ್ನ ಅನುಭವ ಕಥನವನ್ನು" ಎಂದು ಮತ್ತೆ ಪ್ರಾರಂಭಿಸಿದ: "ಆತ ಹೇಳಿದ ವಿಚಾರ ನನ್ನ ಮನಸ್ಸನ್ನು ಕೊರೆಯುತ್ತಲೇ ಇತ್ತು. ನಾನೇಕೆ ಇದನ್ನು ಪರೀಕ್ಷಿಸಬಾರದು ಎಂದು ದೃಢ ಮನಸ್ಸು ಮಾಡಿದ್ದರ ಹಿನ್ನೆಲೆಯಲ್ಲಿ ನನ್ನ ಸ್ವಾರ್ಥವೂ ಇತ್ತೆನ್ನಿ. ಸರಿ; ಆದಾದ ಒಂದು ತಿಂಗಳ ನಂತರ ನನ್ನ ಐದು ವರ್ಷಗಳ ಉಳಿತಾಯ ಹಣ ಸಾವಿರದ ಮುನ್ನೂರು ಡಾಲರುಗಳೊಂದಿಗೆ

ಗ್ವಾಟೆಮಾಲಾ ಪೆಟ್ಟ ಪ್ರದೇಶಕ್ಕೆ ಹೊರಡಲಿರುವಾನೆ. ಇಂಡಿಯನ್ನರ ಇಷ್ಟ ಕಷ್ಟಗಳೇನೆಂದು ಅರಿತಿದ್ದ ನಾನು ಅಂತೆಯೇ ಸಿದ್ಧನಾಗಿದ್ದೆ. ನಾಲ್ಕು ಗಟ್ಟಿಮುಟ್ಟಾದ ಹೇಸರಗತ್ತೆಗಳ ಮೇಲೆ ಕೆಂಪು ಫ್ಲಾನೆಲ್ಲಿನ ಬ್ಲಾಂಕೆಟ್ಟುಗಳು, ಕಬ್ಬಿಣ ಹಿತ್ತಾಳೆ ಪಾತ್ರೆಗಳು, ಉತ್ಕೃಷ್ಟ ರೇಜರುಗಳು, ಕೆತ್ತನೆಯ ಬಾಚಣಿಗೆಗಳು, ಹರಳಿನ ನೆಕ್ಲೇಸುಗಳು, ಕಾಗೆ ಬಂಗಾರದ ಆಭರಣಗಳು, ಸಿದ್ಧಪಡಿಸಿದ ಉಡುಪುಗಳು, ಎಲ್ಲವನ್ನೂ ಚೀಲಗಳಲ್ಲಿ ತುಂಬಿ ಹೊರಿಸಿದೆ. ಹೇಸರಗತ್ತೆಗಳನ್ನು ನಡೆಸಲು, ಮಾರ್ಗದರ್ಶಕನಾಗಲು, ದುಭಾಷಿಯಾಗಲು ಒಬ್ಬ ಕಪ್ಪು ಮನುಷ್ಯನನ್ನು ಭತ್ಯ ಕೊಡುವುದಾಗಿ ಹೇಳಿ ಪಡೆದೆ. ಆತನ ಹೆಸರು ಕ್ಲಿಂಟಕ್. ಎಲ್ಲ ಸರಿ. ಆತನ ಇಂಗ್ಲಿಷ್ ಭಾಷೆಯ ಉಚ್ಚಾರ ಮಾತ್ರ ಕೇಳಲು ಹಿಂಸೆಯಾಗುತ್ತಿತ್ತು.

"ಪರ್ವತಗಳ ಮಾರ್ಗವಾದ ದಾರಿಗುಂಟ ನಲವತ್ತು ಮೈಲಿಗಳಾಚೆಯಿದ್ದ ಆ ಬಂಗಾರದ ಹಳ್ಳಿಯನ್ನು ತಲುಪಲು ನಮಗೆ ಒಂಭತ್ತು ದಿನಗಳು ಹಿಡಿದವು. ಒಂದು ಮಧ್ಯಾಹ್ನ ದೊಡ್ಡ ಸೇತುವೆಯೊಂದರ ಮೇಲೆ ಬಂದು ನಿಂತೆವು. ಸುಮಾರು ಐದು ಸಾವಿರ ಅಡಿ ಆಳದ ಕೆಳಗೆ ನದಿಯೊಂದು ಹರಿಯುತ್ತಿತ್ತು. ವನ್ಯ ಮೃಗಗಳು ಆಗ ತಾನೇ ಬಂದು ಹೋದ ಗುರುತುಗಳು ಅಲ್ಲಿ ಮೂಡಿದ್ದವು. ದೈವ ಸಹಾಯ ನಮ್ಮ ಪಾಲಿಗಿದ್ದದ್ದರಿಂದ ಅವುಗಳ ಕ್ರೂರ ದೃಷ್ಟಿಗೆ ನಾವು ಆ ತನಕ ಗೋಚರಿಸಿರಲಿಲ್ಲ. ಸೇತುವೆಯಾಚೆ ಇರುವುದೇ ಆ ಪ್ರದೇಶವಾಗಿತ್ತು.

ಕಲ್ಲು ಮಣ್ಣಿನಿಂದ ನಿರ್ಮಿಸಲ್ಪಟ್ಟ ಆ ಪ್ರದೇಶದಲ್ಲಿ ಬೀದಿಗಳೇ ಇರಲಿಲ್ಲ. ಕೆಲವೇ ಹಳದಿ ಕಂದು ಬಣ್ಣದ ತಲೆಗಳು ಕಿಟಕಿ ಬಾಗಿಲುಗಳ ಮೂಲಕ ಹಣಿಕಿಕ್ಕುತ್ತಿರುವ ದೃಶ್ಯ ಪಾರ್ಸೆಸ್ಟರ್ ಅಂಬ್ರವನ್ನು ನೋಡಿದಾಗ ತಲೆ ಹೊರ ಹಾಕುವ 'ಬೆಲ್ಪ್' ಹುಳಗಳಂತೆ ಕಾಣುತ್ತಿತ್ತು. ಎಲ್ಲಕ್ಕಿಂತ ದೊಡ್ಡದಾಗಿ ಭವ್ಯವಾಗಿರುವ ಒಂದು ಪುರಾತನ ಮನೆ. ಮನೆಯ ಸುತ್ತ ಇರುವ ವಿಶಾಲವಾದ ದೇವಡಿಯಲ್ಲಿ ಸ್ಥೂಲ ಕಾಯದ ಬಿಳೀ ಮನುಷ್ಯನೊಬ್ಬ ರಾಜಠೀವಿಯಲ್ಲಿ ನಿಂತಿದ್ದ. ಕೆಂಪು ಗೆಣಸಿನಂತೆ ಕೆಂಪಗಿದ್ದ ಆತನ ಕೈಬೆರಳುಗಳ ಮಧ್ಯೆ ಉರಿಯುತ್ತಿರುವ ಸಿಗರೇಟು, ಕತ್ತಿನಲ್ಲೊಂದು ಚಿನ್ನದ ಚೈನು ರಾರಾಜಿಸುತ್ತಿತ್ತು. ಆತ ತೊಟ್ಟ ಬಟ್ಟೆ, ಹದಮಾಡಿದ ಜಿಂಕೆಯ ಚರ್ಮದಿಂದ ಮಾಡಲ್ಪಟ್ಟಿತ್ತು. ಆತನ ವಿಶಿಷ್ಟ ಮುಖಭಾವ ಅಮೇರಿಕದ ಸೆನೆಟರುಗಳ ಪೋಲೀಸ್ ಅಧಿಕಾರಿಗಳ ನೆನಪು ತರುತ್ತಿತ್ತು.

ಆತ ನಮ್ಮ ಕಡೆಗೆ ಒಂದು ಕ್ಷಣ ದಿಟ್ಟಿಸಿ, ನಮ್ಮತ್ತ ಹೆಜ್ಜೆ ಹಾಕುತ್ತಿದ್ದುದನ್ನು ಗಮನಿಸಿದ ಕ್ಲಿಂಟಕ್ ಹೇಸರಗತ್ತೆಗಳನ್ನು ನಿಲ್ಲಿಸಿ, ದುಭಾಷಿಯ ಪಾತ್ರ ವಹಿಸಲು ತಯಾರಾದ.

"ಹಲೋ… ಬುಟ್ಟನ್ ಸ್ಕೈ, ನಮ್ಮ ಸರಹದ್ದಿನೊಳಗೆ ಹೇಗೆ ಬಂದೆ ? ಹಳ್ಳಿಯ ಪರಿಚಯ ಹೇಗೆ ಆಯಿತು? ಏನು ಬಂದೆ?" ಪರಿಚಿತನಂತೆ ಆತ ಕೇಳಿದ.

"ಕ್ಷಮಿಸಿ, ನಾನೊಬ್ಬ ಬಡ ಪ್ರವಾಸಿಗ. ಹೇಸರಗತ್ತೆಗಳು ನನ್ನ ವಾಹನ. ನೀವು ನನ್ನನ್ನು ತಪ್ಪು ತಿಳಿದುಕೊಂಡಿದ್ದೀರಿ," ನಾನು ಹೇಳಿದೆ.

"ಓಹ್ ! ಬಡ ಪ್ರವಾಸಿಗ ! ಇಲ್ಲಿಗೆ! ನೀವೋ ನಿಮ್ಮ ಚತುಷ್ಪಾದ ವಾಹನಗಳೋ ! ವಿಚಿತ್ರವಾಗಿದೆ! ಬನ್ನಿ ಬನ್ನಿ… ಒಳಗೆ ಬನ್ನಿ," ಎಂದ ಆತ ಒಂದು ಕೈಬೆರಳನ್ನು ಮೇಲೆತ್ತುತ್ತಲೇ ಒಬ್ಬ ಹಳ್ಳಿಗ ಓಡಿ ಬಂದು ತಲೆ ಬಾಗಿ ನಿಂತ. ಯಾವುದೋ ರಾಜರ ಆಸ್ಥಾನಕ್ಕೆ ಬಂದಿರುವೆವೆ? ಎಂದು ನಮಗೆ ಸಂದೇಹ ಉಂಟಾಯಿತು.

"ಈ ಮನುಷ್ಯ ನಿಮ್ಮ ಹೊರಗಿನ ಅವಶ್ಯಕತೆಗಳನ್ನು ಪೂರೈಸುತ್ತಾನೆ. ಒಳಗೆ ನಾನು ನೋಡಿಕೊಳ್ಳುವೆ," ಎಂದು ಆತ ಮನೆಯೊಳಗೆ ನಮ್ಮನ್ನು ಕರೆದುಕೊಂಡು ಹೋಗಿ ಆಸನಗಳನ್ನೂ ಹಾಲು ಬಣ್ಣದ ಪಾನೀಯಗಳನ್ನೂ ಒದಗಿಸಿಕೊಟ್ಟ. ನಾನು ಇದುವರೆಗೂ ಕಂಡಿರದಿದ್ದ ಭವ್ಯ ಕೋಣೆ ಅದಾಗಿತ್ತು. ಕರಿ ಕಲ್ಲಿನ ಗೋಡೆಗಳು ನಳನಳಿಸುವ ರೇಷಿಮೆ ವಸ್ತ್ರಗಳಿಂದ ಅಲಂಕೃತವಾಗಿದ್ದುವು. ನೆಲದ ಮೇಲೆ ಹಳದಿ ಕೆಂಪು ಬಣ್ಣಗಳ ರತ್ನಗಂಬಳಿಗಳು, ಕೆತ್ತನೆಯ ಕಂದು ಕುಂದಾರ ಮಂದಿಕೆಗಳು, ಆಸನಗಳ

ಮೋಟಿ ಬಿತ್ತಿಬಿಟ್ಟ ತರ್ಕಸ್ಥಾನದ! ರಾಜಧಾನಿಯ ಅದಿನ ದಸ್ತಿ ಮಾಡಿದ ಚರ್ಮಗಳು ಮತ್ತು ಸುಮಾರು ಅರ್ಧ ಡಜನ್ ಕರಾವಳಿ ಜೋಪಡಿಗಳಿಗಾಗುವಷ್ಟು ಬಿದಿರಿನ ಮನೆ ಮಟ್ಟುಗಳು.

"ಮೊಟ್ಟ ಮೊದಲು, ನನ್ನ ಪರಿಚಯ ಮಾಡಿಕೊಡುತ್ತೇನೆ ನಿಮಗೆ. ಈ ಹಳ್ಳಿಯ ಬಹುಪಾಲು ಮಂದಿ ಇಂಡಿಯನ್ನರು, ಈ ದೊಡ್ಡ ಗುಂಪಿನ ಅಧಿಪತಿ ನಾನು ಮತ್ತು ಅವರ ಉತ್ಪನ್ನಗಳ ಮಕ್ತೇದಾರ. ಅವರು ನನಗಿಟ್ಟ ಪ್ರೀತಿಯ ಹೆಸರು 'ಗ್ರ್ಯಾಂಡ್ ಯಾಕುಮಾ.' ರಾಜ ಅಥವಾ ಅಂಗ್ಯೆಯ ಮುಖ್ಯ ಬೆರಳು ಎಂಬುದರ ಅನ್ವರ್ಥನಾಮ. ಬಂದೂಕೋರರ ಒಕ್ಕೂಟಕ್ಕಿಂತ ನ್ಯಾಯ, ಧರ್ಮಗಳೆಂಬ ದೈವೀಶಕ್ತಿಗಿಂತ, ನಾನು ಇಲ್ಲಿ ಬಲಿಷ್ಠನಾಗಿದ್ದೇನೆ. ಆಗಾಗ್ಗೆ ಪತ್ರಿಕೆಗಳನ್ನೋದಿ ದೇಶ ವಿದೇಶದ ಸುದ್ದಿಗಳನ್ನು ತಿಳಿಯುತ್ತೇನೆ. ಸರಿ, ನನ್ನದಾಯಿತು; ನಿಮ್ಮದು?" ಎಂದು ರಾಜಠೀವಿಯಿಂದ ಆತ ಕೇಳಿದ.

"ಆಗಬಹುದು. ನಾನು ಡಬ್ಲ್ಯು. ಡಿ. ಫಿಂಚ್ ಎಂದು ಪರಿಚಿತ, ವೃತ್ತಿ ಬಂಡವಾಳಶಾಹಿ. ವಿಳಾಸ–೨೪೧ ಈಸ್ಟ್ ಫರ್ಟಿ ಸೆಕೆಂಡ್–ನ್ಯೂಯಾರ್ಕ್" ನಾನು ತಟ್ಟನೆ ಹೇಳಿದೆ.

"ನ್ಯೂಯಾರ್ಕ್! ನನಗೆ ಗೊತ್ತು!... ಅದರೊಳಗೆ ಹೊಕ್ಕ ಪ್ರಥಮ ವೀಕ್ಷಣೆಗಾರರಿಗೆ ಒತ್ತರದಿನ ಸಿಂಬೆಯೊಳಗೆ ಸಿಲುಕಿದಂಥ ಅನುಭವವಾಗುತ್ತಿವಲ್ಲವೆ?"

"ನಾವು ಏಕೆ ಬಂದೆವು ಎಂಬುದನ್ನು ಊಹಿಸಲಾರದಷ್ಟು ದಡ್ಡನಲ್ಲ ಈ ಹಳ್ಳಿಯ ದೊರೆ," ಎಂದು ಮಾತಿನಲ್ಲೇ ಇರಿದೆ.

ಕೈ ಬೆರಳಿಗೆ ಹೊತ್ತಿಕೊಂಡ ಕಾಕಂಬಿ ನೆಕ್ಕುವುದು ಏನು ಸುಖ ಎಂಬ ಮಗುವಿನ ಮುಖಭಾವ ಪ್ರದರ್ಶಿಸುತ್ತ, ಇದೇನು ಅಂಥಾ ಚಿತ್ತಸ್ವಾಸ್ಥ್ಯ ಕದಡುವಂಥಾ ಸಮಸ್ಯೆಯಲ್ಲ ಎನ್ನುವ ನಿರ್ಲಿಪ್ತ ಭಾವದಿಂದ ಆತ ಉತ್ತರಿಸಿದ, "ಬಂಗಾರದ ಮರಳು. ಇದಕ್ಕಾಗಿ ಇಲ್ಲಿಗೆ ಬರುವವರು ಬಹಳ ಜನ. ಅದನ್ನು ಪಡೆಯುವುದಿರಲಿ, ಅವರೇ ನಿರ್ನಾಮವಾದರು. ನೀವು ಇದಕ್ಕಾಗಿಯೇ ಬಂದವರಾದರೆ, ನನ್ನ ಉಪದೇಶ, ಮುಂಬರ್ಲಿ ಸಾಹಸಿಗರ ದುರಂತ ಕಥೆಗೆ ವಸ್ತುವಾಗಬೇಡಿ," ಎಂದು ಪಕ ಪಕನೆ ನಕ್ಕ, "ಈ ಇಂಡಿಯನ್ ನನ್ನವರು– 'ಪೀಕ್ಸ್' ಪಂಗಡದ ವಂಶಜರು; ಮಕ್ಕಳಂಥ ಮುಗ್ಧರು, ಸರಳರು. ಇದು ಒಂದು ಬಂಗಾರದ ಗಣಿಯ ಪ್ರಾಂತ್ಯ. ಇಲ್ಲಿ ಸಿಗುವ ಬಂಗಾರದ ಉಪಯೋಗವೇನು? ಮಾರುವುದು ಹೇಗೆ, ಪ್ರಪಂಚದಲ್ಲಿ ಅದರ ಕಿಮ್ಮತ್ತೇನು ಎಂಬುದನ್ನು ತಿಳಿಯದಷ್ಟು ಅಜ್ಞಾನಿಗಳು... ಅಲ್ಲ, ಮುಗ್ಧರು. ಆದರೆ ಅಷ್ಟೇ ದುಷ್ಟರು, ಕ್ರೂರಿಗಳು, ಭಯಂಕರರು. ತಮಗೆ ಮೋಸ ಮಾಡಿದವರನ್ನು ಒಂದು ಕ್ಷಣವೂ ಉಳಿಸಲಾರರು. ಈ ಉದ್ದೇಶಕ್ಕಾಗಿಯೇ ನೀವು ಬಂದವರಾದರೆ, ನಿಮ್ಮ ಭವಿಷ್ಯದ ಕುರಿತು ನನಗೆ ಭಯ ಆವರಿಸಿದೆ."

"ಇರಬಹುದು. ಆದರೆ ನಿಮ್ಮನ್ನಾವರಿಸಿದ ಭಯ ನಮಗೇಕೋ ಉಲ್ಲಾಸಭರಿತವಾಗಿ, ಕುತೂಹಲವಾಗಿ ಕಾಣುತ್ತಿದೆ," ಏನನ್ನೂ ಎದುರಿಸಲು ಸಿದ್ಧವಾಗೇ ಬಂದಿದ್ದರಿಂದ ಹೇಳಿದೆ.

"ಮಿ. ಡಬ್ಲ್ಯು. ಡಿ. ನೀವು ಬಲು ಘಾಟಿಯಾಗೇ ತೋರುತ್ತೀರಿ. ಸರಿ; ನಿಮಗೊಂದು ಅವಕಾಶ ಕಲ್ಪಿಸಿ ಕೊಡುತ್ತೇನೆ. ನಾನು ಅನುಸರಿಸಿದ ಮೂಲಭೂತ ಮಾರ್ಗ ಕಷ್ಟಸಾಧ್ಯ. ನಿಮಗೆ, ನೀವು ತಂದ ವಸ್ತುಗಳನ್ನು ಮಾರಲು ಪ್ರಯತ್ನಿಸಿ. ಆಗಲಾದರೂ ಬಂಗಾರದ ಮರಳು ದಕ್ಕುತ್ತದೋ ನೋಡಿ. ಈಗ ನನ್ನನ್ನು ವಿಧ್ಯುಕ್ತವಾಗಿ ಪರಿಚಯ ಮಾಡಿಕೊಡಲೇಬೇಕಾಯಿತು. ನನ್ನ ನಿಜ ನಾಮಧೇಯ ಜೇಮ್ಸ್ ಪೇಟ್ರಿಕ್ ಪೇನ್. ಈ ಇಂಡಿಯನ್ ಪೀಕ್. ಪಂಗಡವು ನನ್ನ ಸ್ವಯಾರ್ಜಿತ ಗೆಲುವು; ಪೈತೃಕವಲ್ಲ. ಒಬ್ಬಂಟಿಯಾಗಿ ಈ ಅನಾಗರಿಕರನ್ನು ಒಲಿಸಿಕೊಂಡ ಸಾಹಸೀ ಜೀವ ಇದು. ನಾಲ್ಕು ವರ್ಷಗಳ ಹಿಂದೆ ಬಿರುಗಾಳಿ ನನ್ನನ್ನು ಎತ್ತಿ ಇಲ್ಲಿಗೆ ಒಗೆದಾಗ ನನ್ನ ಆಕಾರ, ಸೌಮ್ಯ ಮುಖಕಂಠ ತ್ರಾಣದಿಂದ ಅವರನ್ನು ಒಲಿಸಿಕೊಂಡೆ. ಶ್ರೀಮಂತನಾದೆ. ಕೇವಲ ಆರೇ ವಾರಗಳಲ್ಲಿ ಅವರ ಭಾಷೆ ಕಲಿತೆ, ಚಾಕಚಕ್ಯದಿಂದ

ಟರ್ ವ್ಯಾಪಾರಿಯ ಬಗ್ಗೆ ಕೊಂಚ ಯೋಚಿಸು."

ಈಗ ನಾನು ತಿರಸ್ಕಾರದಿಂದ ದ್ವೇಷಪೂರಿತವಾಗಿ ಅವನತ್ತ ನೋಡುತ್ತಿದ್ದೆ.

"ನೀವು ತುಂಬಾ ಅದೃಷ್ಟವಂತರು. ಸ್ವಲಾಭ ಬಯಸದ ಈ ಮುಗ್ಧ ಜನರ ಗುಂಪಿಗೆ ನೀವು ಒಬ್ಬ ಸರ್ಕಾರಿ ಸೇವಕರೆಂದಾಯಿತು! ಆಗಲಿ. ಟೊಳ್ಳು ಮಾತುಗಳಿಂದ ಪ್ರಯೋಜನವಿಲ್ಲ. ನಾನೂ ಮಾಣಿಕ್ಯಗಳ ಸಣ್ಣ ವ್ಯಾಪಾರಿ. ಒಂದು ವಜ್ರಕ್ಕೆ ೪.೮೫ ಡಾಲರಿನಂತೆ ಒಮ್ಮೆಗೆ ಇನ್ನೂರು ಇಪ್ಪತ್ತು ಡುಲರುಗಳನ್ನು ತೊಡಗಿಸುತ್ತೇನೆ. ನನಗೆ ಕೊಂಚ ಸಹಾಯ ಮಾಡುವಿರಾ?" ನನ್ನ ಮಾತಿನಲ್ಲಿ ದೈನ್ಯ ತುಂಬಿ ಕೇಳಿದೆ.

ಧೊಪ್ಪನೆ ಕೆಳಗೆ ಬಿದ್ದು ಚೀಲದ ರಾಶಿಗಳ ಮೇಲೆ ಕೈಗಳನ್ನಾಡಿಸುತ್ತ, "ಇವುಗಳನ್ನು ನಾನು ತುಂಬಾ ಪ್ರೀತಿಸುತ್ತೇನೆ, ಹಗಲೂ ರಾತ್ರಿ ಇವನ್ನು ತಬ್ಬಿಕೊಂಡಿರಬೇಕೆನ್ನುವಷ್ಟು. ಇದು ನನ್ನ ಜೀವನದ ಸ್ವಾರ್ಥ. ನನ್ನ ಪ್ರಿಯತಮೆಗಿಂತಲೂ ಹೆಚ್ಚು ಸುಖ ಇಲ್ಲಿ ಪಡೆಯುತ್ತೇನೆ. ನಾನು ದೊರೆ ಆಗರ್ಭ ಶ್ರೀಮಂತ! ನಾನು ಕೋಟ್ಯಧೀಶ ಆಗಲು ಇನ್ನು ಒಂದು ವರ್ಷ ಸಾಕು. ಪ್ರತಿ ತಿಂಗಳೂ ಈ ರಾಶಿ ಹೆಚ್ಚುತ್ತಾ ಹೋಗುತ್ತದೆ. ಈ ಸಾಗರ ಕೊಲ್ಲಿ ತೀರದ ಎಲ್ಲ ವಾಸಿಗಳೂ ನನ್ನ ಹತೋಟಿಯಲ್ಲಿದ್ದಾರೆ. ಈ ಗೌರವದ ಫಲ ಇಂದು ನಾನೊಬ್ಬ ಶ್ರೀಮಂತ ಸೆನೆಟರ್. ಈ ಕ್ಷಣಕ್ಕಾಗಿ ನಾನು ಜಕ್ಕವಕ್ಕಿಯಂತೆ ಕಾದೆ. ಮಿ. ಡಬ್ಲ್ಯೂ.ಡಿ., ಇವರು ಏಕೆ ನಿನ್ನ ಸಾಮಾನುಗಳನ್ನು ಕೊಳ್ಳಲಾರರು ಗೊತ್ತೇ ನಿನಗೆ? ಅವರ ಸಂಗ್ರಹಿಸುವ ಬಂಗಾರದ ಹುಡಿಯೆಲ್ಲ ಇಲ್ಲಿ ಬಂದು ಸೇರುತ್ತದೆ. ಕಾರಣ ನಾನು ಅವರ ದೊರೆ. ಅವರಲ್ಲಿ ಹುದುಗಿಸಿರುವ ಬಯಕೆ ಮತ್ತು ಅಸೂಯೆ ಎರಡೂ ಸಂಪೂರ್ಣ ನಶಿಸಿ ಹೋಗುವಂತೆ ನಾನು ಬೋಧಿಸಿದ್ದರ ಫಲ ಇದು. ನಿನಗೆ ನನ್ನದೊಂದು ಹಿತವಚನ – ಮೊದಲು ಅಂಗಡಿ ಮುಚ್ಚಿ ನೀನು ಬಂದ ದಾರಿ ಹಿಡಿ." ಎಂದು ಹೇಳುತ್ತಾ ಎದ್ದ.

ನಾನು ರೊಚ್ಚಿಗೆದ್ದೆ. ಅಬ್ಬಾ! ಅವನ ಸ್ವಾರ್ಥದ ಪರಮಾವಧಿಯೇ! ಅಮಾಯಕರನ್ನು ಸೂರೆ ಹೊಡೆಯುವ ಅವನ ಕ್ರೂರ ಚಾಪಲ್ಯವೇ! ನನ್ನ ಅಸಹನೆ ಮೀರಿತು.

"ತಾಳು, ನೀನು ಮನುಷ್ಯ ಜಾತಿಗೆ ಅಷ್ಟೇ. ಆದರೆ ಕ್ರೂರಿ ನಿರ್ದಯಿ; ರಾಕ್ಷಸ. ಮನುಷ್ಯ ಮನುಷ್ಯನಿಗೆ ಮಾಡುವ ಮೋಸ, ವಂಚನೆ, ಪಿಸಾಚಿತನದಿಂದಾಗಿ ನೀನು ಮಾನವೀಯ ಮೌಲ್ಯಗಳನ್ನು ಮೆಟ್ಟಿ ನಿಂತಿರುವೆ! ಮಾನವೀಯ ಹಕ್ಕುಗಳನ್ನು ಕಡೆಗಣಿಸಿರುವೆ. ನಿನ್ನ ದುರ್ಗುಣವೆಷ್ಟು ಹೀನಾಯವಾಗಿವೆ! 'ಪೂರೈಕೆ'ಯನ್ನು ಬೆಂಬಲಿಸಿ ಬೋಧಿಸಿದೆ. ಆದರೆ ಬೇಡಿಕೆಯನ್ನು ಕಡೆಗಣಿಸಿದ್ದೀಯೇ. ಈಗ ನೋಡು, ಬೇಡಿಕೆ ಎಷ್ಟೊಂದು ವಿಶಾಲವಾದ ಖಂಡಿತವಾದ ಮಾನವೀಯ ಹಕ್ಕುಗಳ ಪೈತ್ಯಕ! ಬೀದಿಯ ಮೂಲೆಯಲ್ಲಿ ಬೇಡುವನೂ ಬೇಡಿಕೆಯ ಒಂದು ಅಂಶ. ಪೂರೈಕೆ ಮತ್ತು ಬೇಡಿಕೆ ಎರಡನ್ನೂ ಸಮಾನವಾಗಿ ಹಂಚಿಕೊಳ್ಳುವುದು ಮಾನವನ ಧರ್ಮಯುತ ಸ್ವಾರ್ಜಿತ ಹಕ್ಕು! ಧರ್ಮ, ನ್ಯಾಯ, ನೀತಿಯನ್ನು ತುಳಿದು ಅಧಃಪತನಗೊಳಿಸಿದ ನಿನಗೆ ನಾನು ಪ್ರತಿಸ್ಪರ್ಧಿಯಾಗುತ್ತೇನೆ. ನಾನು ಇಲ್ಲಿಗೆ ಬಂದಾಗಲೇ ಇದನ್ನು ಊಹಿಸಿದ್ದೆ. ಅವರು ತಪ್ಪು ದಾರಿ ತುಳಿಯಲು ಕಾರಣನಾದ ನಿನ್ನ ರಾಜಕೀಯ, ಆರ್ಥಿಕ ನೀತಿಯನ್ನು ಬುಡಸಹಿತ ಹೊಡೆದೋಡಿಸಿ, ಕಮರಿಹೋದ ಅವರ ಬಯಕೆ ಆಕಾಂಕ್ಷೆಗಳನ್ನು ಬಡಿದೆಬ್ಬಿಸುವುದೇ ನನ್ನ ವ್ಯಾಪಾರದ ಉದ್ದೇಶ. ನೀನು 'ಪೂರೈಕೆಯನ್ನು ಬೋಧಿಸಿದರೆ ನಾನು ಬೇಡಿಕೆಯನ್ನು' ಬೆಂಬಲಿಸುತ್ತೇನೆ ಎಂದು ಖಡಾಖಂಡಿತವಾಗಿ ಒದರಿದವನೇ ಅಲ್ಲಿಂದ ಹೊರಡಲು ಹೆಜ್ಜೆ ಮುಂದಿಟ್ಟೆ. ರೊಯ್ಯನೆ ಅವನ ಇಬ್ಬರು ಸೇವಕರು ಆಯುಧಗಳ ಸಮೇತ ನಮ್ಮ ಅಕ್ಕಪಕ್ಕ ನಿಂತರು. "ನಿಲ್ಲಿ, ಅವರನ್ನು ಬಿಟ್ಟುಬಿಡಿ; ಕ್ಷುಲ್ಲಕ ಮೋಸದ ಹುಳುಗಳು ಅವರು. ಅವರ ಮೇಲೇಕೆ ನಮ್ಮ ದ್ವೇಷ?" ಧ್ವನಿ ಬಂದತ್ತ ನಾವು ತಿರುಗಿದೆವು. ಆಶ್ಚರ್ಯ! ಸೇನನೇ ಆ ಮಾತು ಹೇಳಿದ್ದ. ಅವನ ನಂಬಿಕೆಯ ಭದ್ರ ಅಭಿಪ್ರಾಯವನ್ನು ಅಲುಗಿಸಬೇಕೆಂದು ನಮ್ಮ ಮನ ನಿರ್ಧರಿಸಿತು. ಅಲ್ಲಿಂದ ಬಿರಬಿರನೆ ಹೊರಟು ನಮ್ಮ ಬಿಡಾರ

ಹೇಳಿದೆವು. ನಾನು ದುಡುಕಿಬಿಟ್ಟೆನೇ? ಅವನ ಹಗೆತನವನ್ನು ಕಟ್ಟಿಕೊಂಡು ನಾವಿಲ್ಲಿರಲು ಸಾಧ್ಯವೇ? ಸಾಧ್ಯ: ನಮ್ಮ ಸಕಲ ಪ್ರಯತ್ನಗಳೂ ಅಸಫಲಗೊಳ್ಳುವ ದೃಢ ನಂಬಿಕೆ ಆತನಿಗಿದ್ದರಿಂದ ನಮ್ಮನ್ನು ನಮ್ಮಷ್ಟಕ್ಕೆ ಬಿಟ್ಟ. ಅದು ನನ್ನ ಜಯದ ಮೊದಲ ಮೆಟ್ಟಿಲು.

ಮಾರನೆ ಬೆಳಿಗ್ಗೆ ಪ್ಲಾಜಾ ಆವರಣದಲ್ಲಿ ಒಂದು ಹೊಸ ಮೂಟೆಯನ್ನು ಹೇಸರಗತ್ತೆಗಳ ಮೇಲಿಂದ ಕೆಳಗಿಳಿಸಿದೆವು. ಮೂಟೆ ಬಿಚ್ಚಿ ಎಂದಿನಂತೆ ಸಾಮಾನುಗಳನ್ನು ಕ್ರಮವಾಗಿ ಜೋಡಿಸಿದೆವು. ಉತ್ಕೃಷ್ಟವಾದ ನೆಕ್ಲೇಸುಗಳು, ಬಳೆಗಳು, ಬಾಚಣಿಕೆಗಳು ಮತ್ತು ಕಿವಿಯ ರಿಂಗುಗಳು, ಬಣ್ಣ ಬಣ್ಣದ ಒಳ ಉಡುಪುಗಳು, ಕೊನೆಯದಾಗಿ ಅರ್ಧ ಗ್ರೋಸು (ಆರು ಡಜನ್) ಹಿಂಭಾಗದಲ್ಲಿ ತವರಿನ ತಗಡಿದ್ದ ಕೈಗನ್ನಡಿಗಳು ಅಂದಿನ ಮುಖ್ಯ ವಸ್ತುವಾಗಿತ್ತು. ಜನಸಮೂಹ ಎಂದಿನಂತೆ ನೆರೆಯಿತು. ಅವರನ್ನು ಮತ್ತೂ ಆಕರ್ಷಿಸಲು ತುತ್ತೂರಿಯನ್ನು ರಾಗವಾಗಿ ಊದತೊಡಗಿದೆ. ಥಟ್ಟನೆ ನನಗೆ ಏನೋ ಹೊಳೆದು ಕೈಗನ್ನಡಿಗಳನ್ನು ಹೆಂಗಸರ ಕೈಗೆ ರವಾನಿಸಿ ಅವುಗಳ ಮಹತ್ವವನ್ನು ವಿವರಿಸಿದೆ. ನನ್ನ ವಿವರಣೆಯಿಂದ ಕುತೂಹಲಗೊಂಡ ಈ ಪೀಕ್ ಪಂಗಡ ಮೊಟ್ಟ ಮೊದಲು ಕನ್ನಡಿ ಎಂಬ ಸುಂದರ ವಸ್ತುವನ್ನು ಅತ್ಯಾಶ್ಚರ್ಯದಿಂದ ನೋಡಿತು.

ದೂರದಲ್ಲಿ ದೊರೆ ಜೇನ್ ನಮ್ಮತ್ತಲೇ ನೋಡುತ್ತ ಕಣ್ಣುಗಳಲ್ಲೇ ನಕ್ಕು [illegible] ತಿವಿದ.

ಅಷ್ಟರಲ್ಲಿ ಜನಸಮೂಹದೊಳಗೆ ಏನೋ ಗಲಾಟೆ ಪ್ರಾರಂಭವಾಯಿತು. ನನ್ನ ಕಣ್ಣುಗಳಲ್ಲಿ ಜಯವು ತುಂಬಿತು. ಹೌದು ನನ್ನ ಪ್ರಯತ್ನ ಫಲಿಸಿತ್ತು! ವಿಚಿತ್ರ ವಸ್ತುಗಳಾಗಿ ಕಂಡ ಕನ್ನಡಿಯೊಳಗೆ ತಮ್ಮ ಮುಖ, ದೇಹವನ್ನು ನೋಡಿದ ಹೆಂಗಸರು ತಾವೆಷ್ಟು ಸುಂದರ ಅಂಗಾಂಗಗಳನ್ನು ಹೊಂದಿದ್ದೇವೆ! ಎಂದುಕೊಂಡರು. ಹಾಗೆ ಅಂದುಕೊಂಡವರು ಇತರರಲ್ಲಿ ಆ ಗುಟ್ಟನ್ನು ಬಿತ್ತಿದರು. ಸರಿ, ಕೇಳಬೇಕೇ? ಕೆಲವು ಯುವತಿಯರಂತೂ ತಮ್ಮ ಉಡುಪುಗಳನ್ನು ಕಿತ್ತೆಸೆದು ನಮ್ಮ ಅಂಗಡಿಯ ಒಳ ಉಡುಪುಗಳನ್ನು ಧರಿಸಿ ತಮ್ಮ ಅಂಗಾಂಗಗಳು ಇಷ್ಟೊಂದು ಆಕರ್ಷಕವಾಗಿವೆ? ಎಂದು ದಿಗ್ಭ್ರಮೆಪಟ್ಟರೆ, ಕೆಲವರು ಸೌಂದರ್ಯ ಪ್ರಸಾಧನಗಳನ್ನು ಮುಖಕ್ಕೆ ಹಚ್ಚಿಕೊಂಡು ಕನ್ನಡಿಯೊಳಗೆ ತಮ್ಮ ಸುಂದರ ಮುಖಗಳನ್ನು ನೋಡಿ ಸಂತೋಷಾತಿರೇಕದಿಂದ ನರ್ತಿಸಿದರು. ಇನ್ನು ಇವರನ್ನು ಈ ಹೊಸ ಆಕರ್ಷಕ ಉಡುಪಿನಲ್ಲಿ ಹೊಸ ಸೌಂದರ್ಯವನ್ನು ನೋಡಿದ ಗಂಡಸರ ಪಾಡು ಹೇಳಾಗರಬೇಕ ! ಹಾಗಾಗಿ ನನ್ನ ನಿರೀಕ್ಷೆಗಿಂತ ಹೆಚ್ಚು ಗೊಂದಲವೇರ್ಪಟ್ಟಿತು. ಅಷ್ಟರಲ್ಲಿ ಸೂರ್ಯಾಸ್ತವಾಗತೊಡಗಿದ್ದರಿಂದ ಬಾನಿನಲ್ಲಿ ಮೂಡಿದ ಕೆಂಪು ರಂಗು ರಂಗಾಗಿ ಇವರ ಮೇಲೆ ಪಸರಿಸಿ ಪ್ರೇಕ್ಷಕರಿಗೆ ಆ ನೃತ್ಯ ದೇವನೃತ್ಯದಂತೆ ಮನಮೋಹಕವಾಗಿ ಕಂಡಿತು. ಕತ್ತಲಾವರಿಸಿದ್ದರಿಂದ ನಾನು ಪೆಟ್ರೋಮ್ಯಾಕ್ಸ್ ಹಚ್ಚಿದೆ. ಸುಮಾರು ಅರ್ಧ ತಾಸು ಅವರ ನೃತ್ಯ ನಡೆಯಿತು. ನಂತರ ಗಲಾಟೆ ಶಾಂತವಾಗಿ ಈ ವಸ್ತುಗಳು ತಮಗೆ ಬೇಕೆಂಬ ಬಯಕೆ ಅವರಲ್ಲಿ ಕ್ರಮೇಣ ಮೂಡತೊಡಗಿತು. ಬಯಕೆ ಮೂಡುತ್ತಲೇ ಅವುಗಳನ್ನು ಕೊಳ್ಳುವುದು ಹೇಗೆ ಎಂದು ಅವರು ಗುಣುಗುಣಿಸುತ್ತಿದ್ದನ್ನು ಥಟ್ಟನೆ ಗ್ರಹಿಸಿದ ನನ್ನ ಮೆದುಳು ಜಾಗೃತವಾಯಿತು. ಕ್ಲಿಂಟಕ್‌ನನ್ನು ಎಚ್ಚರಿಸಿದೆ. ಕ್ಲಿಂಟಕ್ ಎದ್ದು ನಿಂತು ಕೂಗಿ, "ಭೂಮಿಯಲ್ಲಿ ರಾಜ ರಾಣಿಯರ ಮೈಗೊಪ್ಪುವ ಈ ಯೋಗ್ಯ ಆಭರಣಗಳನ್ನು ಉಡುಪುಗಳನ್ನು ಕೊಳ್ಳಬೇಕೆಂದು ನಿಮಗೆ ಬಯಕೆಯಿದೆಯಲ್ಲವೇ? ಅವುಗಳನ್ನು ಧರಿಸಿ ನೀವು ಆಕರ್ಷಕರಾಗಿ ಕಾಣಬೇಕೆಂಬ ನಿಮ್ಮ ಬಯಕೆ ಸಹಜವಾದುದು. ನಿರಾಸೆಗೊಳ್ಳಬೇಡಿ. ನೀವು ಸಂಪಾದಿಸುವ ಬಂಗಾರದ ಪುಡಿ ಇವುಗಳನ್ನು ಕೊಳ್ಳುತ್ತೇವೆ. ಈ ಸಾಧನಗಳು ನಿಮ್ಮ ಸೌಂದರ್ಯ ವೃದ್ಧಿ ಮಾಡುವುದಲ್ಲದೆ ಕೆಟ್ಟ ಶಕ್ತಿಗಳಿಂದ ನಿಮ್ಮನ್ನು ರಕ್ಷಿಸುತ್ತವೆ."

ಕಾಕಪೋಕರ ಗುಂಪನ್ನು ಚದುರಿಸುತ್ತ ಬಂದ ಒಬ್ಬ ಇಂಡಿಯನ್ ಒಬ್ಬ ಅರೆ ಬತ್ತಲೆಯ ಆಕರ್ಷಕ ಹೆಣ್ಣು [illegible] [illegible]

ಬರುತ್ತಿದ್ದ. ಆತನ ಕೈಯಲ್ಲಿ ಮೀನಿನಾಕಾರದ ಒಂದು ಆಭರಣದ ದಾರದ ತುದಿಯಿತ್ತು. ಜೋತಾಡುತ್ತಿದ್ದ ಆಭರಣವನ್ನೇ ಹೋಲುವ ಚಂದ್ರಕಾಂತ ಶಿಲೆಯ ತುಳಸಿ ಮಣಿಯ ಮಾಲೆ ಒಂದು ಅವಳ ಸುಂದರ ಕತ್ತನ್ನು ಅಲಂಕರಿಸಿತ್ತು. ಆತ ತಕ್ಷಣ ಪ್ರೇಯಸಿಯೊಂದಿಗೆ ಒಂದು ಕಲ್ಲು ಬಂಡೆಯನ್ನೇರಿ ಮಾತನಾಡತೊಡಗಿದ. ಲೆತ್ತದಾಟದ ದಾಳಗಳನ್ನು ದಡ್ಡಿಯೊಳಗೆ ಹಾಕಿ ಕುಲುಕುಲು ಮಾಡಿದಾಗ ಉಂಟಾಗುವ ಶಬ್ದಕ್ಕೂ ಆತನ ಮಾತಿಗೂ ವ್ಯತ್ಯಾಸವಿರಲಿಲ್ಲ. ಆತ ಹೇಳಿದ್ದನ್ನು ಕ್ಲಿಂಟಕ್ ದುಭಾಷಿಸುತ್ತ ನನಗೆ ಹೇಳಿದ. "ನಿಮ್ಮ ಸಾಮಾನುಗಳನ್ನು ಕೊಳ್ಳಬೇಕೆಂಬ ಬಯಕೆ ನಮ್ಮಲ್ಲಿ ಉಲ್ಬಣಿಸುತ್ತದೆ. ಆದರೆ ನಮ್ಮಲ್ಲಿದ್ದ ಬಂಗಾರದ ಹುಡಿ ಇವುಗಳನ್ನು ಕೊಳ್ಳುತ್ತದೆಂಬ ಅರಿವು ನಮಗಿರಲಿಲ್ಲ. ಅವುಗಳೆಲ್ಲವನ್ನೂ 'ಗ್ರಾಂಡ್ ಯಾಕುವ'ನಿಗೆ ತಲುಪಿಸಿದ್ದೇವೆ. ಹೆಂಗಸರು ಬಯಕೆಯಿಂದ ಹುಚ್ಚರೇ ಆಗಿದ್ದಾರೆ. 'ಗ್ರಾಂಡ್ ಯಾಕುವಾ' ನಮಗೆ ಬೋಧಿಸಿದ್ದಾನೆ, ಅವು ಅನುಪಯುಕ್ತ ವಸ್ತುಗಳೆಂದು. ಯಾಕುವಾ ನಮ್ಮನ್ನು ಮೂರ್ಖರನ್ನಾಗಿ ಅಜ್ಞಾನಿಗಳನ್ನಾಗಿ ಮಾಡಿದ್ದಾನೆ.

"ಇದೋ...ನಡೆ...ತ್ವರೆಮಾಡಿ ಹೇಳು ಅವರಿಗೆ. ಬಂಗಾರದ ಹುಡಿಯನ್ನು ತಂದರೆ ಅವುಗಳಿಗೆ ತೂಕ ಹಚ್ಚಿ ಒಂದು ಔನ್ಸಿಗೆ ಹದಿನಾರು ಡಾಲರುಗಳಂತೆ ತೆಗೆದುಕೊಳ್ಳುತ್ತೇವೆ. ಇದು ಗ್ವಾಟೆಮಾಲಾ ಕರಾವಳಿಯಲ್ಲೇ ಅತ್ಯಂತ ಹೆಚ್ಚಿನ ಬೆಲೆ. ಹುಂ...ಹೇಳು...ನಾಳೆ ಬೆಳಿಗ್ಗೆ ಬರಹೇಳು ಈಗ ಕತ್ತಲಾಯಿತು" ಎಂದು ನಾನು ಕ್ಲಿಂಟಕ್‌ನಿಗೆ ಹೇಳಿದೆ.

ನಂತರ ಕೊಂಚ ಸಮಯ ಕಳೆದಿರಬಹುದು. ಇದ್ದಕ್ಕಿದ್ದಂತೆ ಜನಸಮೂಹವೆಲ್ಲ ಮೋಡದಂತೆ ಕರಗಿ ಹೋಯಿತು. ನಮ್ಮ ಸಾಮಾನುಗಳನ್ನು ಮೂಟೆಗಳಿಗೆ ತುಂಬಿ ಹೇಸರಗತ್ತೆಗಳ ಮೇಲೆ ದೊಡ್ಡಿಗೆ ಹೊಡೆದೆವು. ನಮ್ಮ ಹೂಟದಲ್ಲಿ ಜಯ ನಮಗೆ ಖಂಡಿತ ಎಂಬ ನಂಬಿಕೆ ದಿಟವಾಗತೊಡಗಿತ್ತು.

ಸಂಜೆ ನಾವು ನಮ್ಮ ಬಿಡಾರಕ್ಕೆ ಮರಳಿ ಕೊಂಚ ಸಮಯವಾಗಿತ್ತು. ಬಿಡಾರದ ಹೊರಗೆ ದೂರದಲ್ಲಿ ದೊಡ್ಡದಾಗಿ ಗಲಾಟೆ ಕೇಳಿಸತೊಡಗಿತು. ನಾವು ಗಾಬರಿಯಾಗಿ ಹೊರ ಬಾಗಿಲ ಬಳಿ ಬಂದು ನೋಡಿದೆವು. ಆಶ್ಚರ್ಯ! ಅಲ್ಲಿ ಕಂಡ ದೃಶ್ಯವನ್ನು ನಮಗೆ ನಂಬಲಾಗಲಿಲ್ಲ. ಕಿಂಗ್ ಷೇನ್ 'ಗ್ರಾಂಡ್ ಯಾಕುವಾ' ಪ್ರಾಣ ಭಯದಿಂದ ಓಡಿಬರುತ್ತಿದ್ದ. ಬಟ್ಟೆಗಳು ಅಲ್ಲಲ್ಲಿ ಹರಿದಿದ್ದವು. ಕ್ರಾಪು ಕೆದರಿತ್ತು. ಮುಖದಲ್ಲಿ ಪರಚಿದ ಗಾಯಗಳಿಂದ ರಕ್ತ ಸೋರುತ್ತಿತ್ತು.

ನಾವು ದಿಙ್ಮೂಢರಾಗುತ್ತಿದ್ದಂತೆಯೇ ಹತ್ತಿರಕ್ಕೆ ಬಂದ ಷೇನ್ ಅರಚಿದ: "ಅವರು ನನ್ನ ಮನೆಯನ್ನೆಲ್ಲಾ ಕೊಳ್ಳೆ ಹೊಡೆಯುತ್ತಿದ್ದಾರೆ. ಅಲ್ಲಿಂದ ಬಂದ ನನಗೆ ಈ ಗತಿಯಾಯಿತು. ಹೇಗೊ ತಪ್ಪಿಸಿಕೊಂಡು ಓಡಿ ಬಂದೆ. ಮಿ. ಡಬ್ಲ್ಯು. ಡಿ., ಬೇಗ ಹೇಸರಗತ್ತೆಗಳನ್ನು ಬಿಚ್ಚಿತನ್ನಿ. ನನ್ನ ಜೊತೆಗೆ ನಿಮ್ಮನ್ನು ಛಿದ್ರಛಿದ್ರ ಮಾಡುತ್ತಾರೆ ಅವರು. ಇನ್ನ ಸ್ವಲ್ಪ ಹೊತ್ತಿನಲ್ಲಿ ನಾವು ಈ ಪ್ರದೇಶದಿಂದಲೇ ದೂರ ಹೋಗಬೇಕು." "ಹೂಂ." ಗಂಡಾಂತರದಲ್ಲಿದ್ದರೂ ಶಾಂತವಾಗಿ ಹೇಳಿದೆ. "ಬೇಡಿಕೆ ಮತ್ತು ಪೂರೈಕೆಯ ಸತ್ಯವನ್ನು ಅವರು ಈಗ ಕಂಡುಕೊಂಡರು. ತಮ್ಮ ಜನ್ಮಸಿದ್ಧ ಹಕ್ಕುಗಳನ್ನು ನೆಲಕಚ್ಚಿಸಲು ಕಾರಣರಾದವರನ್ನು ಅವರು ಎರಡು ಹೋಳಾಗಿ ಸೀಳಿದರೂ ಆಶ್ಚರ್ಯವಿಲ್ಲ. ಆಗೆಲ್ಲ ನಮ್ಮನ್ನು ನೋಡಿ ಬಿದ್ದು ಬಿದ್ದು ನಗುತ್ತಿದ್ದವರಲ್ಲವೇ ದೊರೆಗಳೇ? ಈಗ ನಮ್ಮ ಕಾಲ. ಆದರೆ ನಿಮ್ಮ ಜೊತೆ ನಮಗೂ ಗಂಡಾಂತರ ಬಂದೊದಗಿತು..."

"ಷೇನ್ ಮತ್ತೆ ಅಂಗಲಾಚುವ ಧ್ವನಿಯಲ್ಲಿ ಕೂಗಿದ. "ನಿಮ್ಮ ಕಾಲಿಗೆ ಬೀಳುತ್ತೇನೆ. ನೀವೇ ನನ್ನನ್ನು ಒಮ್ಮೆಗೆ ಕೊಂದು ಬಿಡಿ. ಆದರೆ ಅವರ ಕೈಯಲ್ಲಿ ಸಿಕ್ಕಿ ಚಿತ್ರಹಿಂಸೆಯಿಂದ ಸ್ವಲ್ಪ ಸ್ವಲ್ಪ ಸಾಯಲಾರೆ. ದಯವಿಟ್ಟು, ಹುಂ, ತ್ವರೆಮಾಡಿ. ಅವರ ಕೈಯಲ್ಲಿ ಚಾಕು ಮತ್ತು ಕೈಗೊಡಲಿಗಳಿವೆ..."

"ತೆಗೆದುಕೊಳ್ಳಿ ಆ ನರಳುವ ಹೇಸರಗತ್ತೆಯನ್ನು. ಅದು ನಿಮಗಾಗಿ ಮತ್ತು ನಿಮ್ಮ

# ಪದಾರ್ಥ ಚಿಂತಾಮಣಿ



ಯಾವುದಾದರೂ ಚರ್ಚೆಯಲ್ಲಿ ಎದುರಾಳಿಯನ್ನು ಸೋಲಿಸಲು ಅತಿಯಾದ ತೇಜೋವಧೆಯ ಮಾತಾಡಿದವನಿಗೆ ಇದು **ಓವರ್-ಬೌಂಡ್ರಿಯಾಯಿತು** ಎನ್ನುತ್ತೇವೆ. ಇಂಗ್ಲೀಷರೊಡನೆ ಈ ದೇಶಕ್ಕೆ ಬಂದ ಕ್ರಿಕೆಟ್ ಆಟದ ಪರಿಭಾಷೆ ಇದು; ನಮ್ಮ ಜನರ ಮನಸ್ಸಿನ ಮೇಲೆ ಈ ವಿದೇಶಿ ಆಟ ಹಾಕಿದ ಛಾಪಿಗೆ ಈ ಮಾತು ಒಂದು ನಿದರ್ಶನ.

ಜನಪ್ರಿಯ ಕ್ರೀಡೆಗಳು ಯಾವಾಗಲೂ ಭಾಷೆಯ ಮೇಲೆ ಅಚ್ಚೊತ್ತುತ್ತ ಬಂದಿವೆ. ಕ್ರಿಕೆಟ್ಟು ಸಜ್ಜನಿಕೆಯ ಆಟ ಎಂದು ಪ್ರತೀತಿ. ಯಾರಾದರೂ ಎದುರಾಳಿಯನ್ನು ಸೋಲಿಸಲು ಅನ್ಯಾಯದ ಉಪಾಯವನ್ನು ಪ್ರಯೋಗಿಸಿದರೆ ಇಂಗ್ಲೀಷ್ ಜನ This is not cricket "ಇದು **ಕ್ರಿಕೆಟ್ ಅಲ್ಲ,**" ಎನ್ನುತ್ತಾರೆ.

"ಹಿಡಿದ **ಪಟ್ಟು** ಬಿಡಲಿಲ್ಲ," "ಚುನಾವಣೆಯಲ್ಲಿ ಅನೇಕ **ಪಟ್ಟು**ಗಳನ್ನು ಬಳಸಬೇಕಾಗುತ್ತದೆ" ಎನ್ನುವಾಗ್ಗ ನಾವು ಉಪಯೋಗಿಸುವುದು ಕುಸ್ತಿ ಆಟದ ಒಂದು ತಾಂತ್ರಿಕ ಶಬ್ದ. **ಪಟ್ಟು** ಅಂದರೆ **ಹಿಡಿತ**– ಕುಸ್ತಿಯಲ್ಲಿ ಸ್ಪರ್ಧಿಗಳು ಎದುರಾಳಿಯನ್ನು ಮಣ್ಣುಮಾಡಲು ಬಳಸುವ ಉಪಾಯ. (ಪಟ್ಟು = ಪತ್ತು = ಹಿಡಿತ). ಸೋತರೂ ಸೋಲೊಪ್ಪದೆ ಪೌರುಷ ಕೊಚ್ಚುವವರಿಗೆ "**ಬಿದ್ದರೂ ಮೂಗಿಗೆ ಮಣ್ಣಾ**ಗಲಿಲ್ಲ" ಎನ್ನುವಾಗಲೂ ಕುಸ್ತಿಯ ಪರಿಭಾಷೆ ಮಾತಿಗೆ ರಂಗು ಕೊಡುತ್ತದೆ. ಬಿದ್ದು ಮೂಗು ನೆಲ ಮುಟ್ಟಿದರೆ ಜಟ್ಟಿ ಸೋತಂತೆ. "ಹೀಗೆ **ಮೂಗು ನೆಲಕ್ಕೆ ತಾಗಿಸಿದೆ**" ಅಂದರೆ ಸೋಲೊಪ್ಪಿಕೊಂಡೆ ಎಂದರ್ಥ.

ಚದುರಂಗದಾಟದ ನುಡಿಕಟ್ಟೂ ಸಾಮಾನ್ಯ ಅಭಿವ್ಯಕ್ತಿಯನ್ನು ರಂಜಿತಗೊಳಿಸುತ್ತದೆ. ಇಂಗ್ಲೀಷಿನ ಚೆಕ್ (check) ಮತ್ತು ತಜ್ಜನ್ಯ ಪದಗಳು ಚದುರಂಗದಾಟದ ತಾಂತ್ರಿಕ ಪದಗಳು. ಪರ್ಶಿಯನ್ ಭಾಷೆಯಿಂದ ಅರಬ್ಬೀ ಮೂಲಕ **ಶಾಹ್** ಎಂಬುದು ಇಂಗ್ಲೀಷಿಗಾಗುವಾಗ **ಚೆಕ್** ಆಯಿತು. ತಡೆಯುವುದು ಎಂದು ಅದರ ಅರ್ಥ. ಪರ್ಶಿಯನ್ **ಶಾಹ್‌ಮಾತ್**‌ನಿಂದ (= ರಾಜ ಸತ್ತನು) ಇಂಗ್ಲೀಷಿನ **ಚೆಕ್‌ಮೇಟ್** ಅಪಭ್ರಂಶವಾಯಿತಂತೆ. ಚದುರಂಗದ ಅರಸನನ್ನು ಅಲುಗದಂತೆ ಕಟ್ಟಿಹಾಕುವುದು **ಶಾಹ್‌ಮಾತ್**. ರಾಜಕೀಯ ಅಥವಾ ಸೈನಿಕ ಗತ್ತಿನಲ್ಲಿ ತಡೆ ಅಥವಾ ಅನಾಹುತವನ್ನು ಅನುಭವಿಸುವುದಕ್ಕೆ ಈ ಶಬ್ದ ಬಳಸುತ್ತಾರೆ. ಉತ್ತರ ಕರ್ನಾಟಕದಲ್ಲಿ **ಶಹಾ ಕೊಡುವುದು** ಎಂಬೊಂದು ನುಡಿಕಟ್ಟುಂಟು. ಯಾವುದಾದರೂ ಸಂದರ್ಭದಲ್ಲಿ ಹಳೆಯ ಒಂದು ಮಾತು ಇಲ್ಲವೆ ಘಟನೆಯನ್ನು ನೆನಪಿಸಿಕೊಟ್ಟು, ಹಂಗಿಸಿ, ಬಾಯಿ ಕಟ್ಟಿಸುವುದೇ **ಶಹಾಕೊಡುವುದು**. ಎದುರಾಳಿಗೆ, "ನೋಡು, ನಿನ್ನ ಅರಸನನ್ನು ಕಟ್ಟಿಹಾಕಿದ್ದೇನೆ," ಎಂದಂತೆ. **ಶಹಾ ಪರ್ಶಿಯನ್ ಶಾಹ್**‌ನ ಮರಾಠಿ ಅಪಭ್ರಂಶ.

ಇಸ್ಪೇಟಿನಂಥದೇ ಆಟ ಹಿಂದೆ ನಮ್ಮಲ್ಲಿತ್ತೆಂದು ಹೇಳಲಾಗಿದೆ. ಆದರೆ ಆಧುನಿಕ ಇಸ್ಪೇಟಾಟ ನಮಗೆ ಪಶ್ಚಿಮದಿಂದಲೇ ಬಂದದ್ದೆಂದು ಅದರ ಹೆಸರೇ ಸಾಕ್ಷಿ ಹೇಳುತ್ತದೆ. **ಇಸ್ಪೇಟ್** ಎಂಬುದು ಪೋರ್ತುಗೀಸ್ **ಇಸ್ಪೆದಾ** (espada)ದ ಭಾರತೀಯ ರೂಪ. ಅದೇ ಇಂಗ್ಲೀಷಿನ ಸ್ಪೇಡ್ (espada). **ಸ್ಪೇಡ್** ಎಂದರೆ **ಸಲಿಕೆ** ಅಥವಾ ಗುದ್ದಲಿ. ಇಸ್ಪೇಟಿನ ನಾಲ್ಕು ಜಾತಿಯ ಎಲೆಗಳಲ್ಲಿ ಒಂದು ಜಾತಿಯವುಗಳ ಮೇಲೆ ಮುದ್ರಿಸಿದ (ಸಲಿಕೆ) ಗುರುತುಗಳಿಂದ ಆ ಜಾತಿಗೆ ಇಂಗ್ಲೀಷಿನಲ್ಲಿ ಸ್ಪೇಡ್ಸ್ ಅನ್ನುತ್ತಾರೆ; ಆದರೆ ನಮ್ಮಲ್ಲಿ ಆ ಆಟಕ್ಕೇ ಆ ಹೆಸರು ಬಿದ್ದಿದೆ ಅಷ್ಟೆ. **ಇಸ್ಪೇಟ್** ಎಂಬ ಶಬ್ದ ನೋಡಿದರೆ ಈ ಆಟ ನಮ್ಮಲ್ಲಿ ಇಂಗ್ಲೀಷರಿಂದಲ್ಲ, ಪೋರ್ತುಗೀಸರಿಂದ ಪ್ರಚಾರವಾಯಿತೆಂದು ಅರ್ಥವಾಗುತ್ತದೆ. ಪೋರ್ತುಗೀಸ್ ಮತ್ತು ಫ್ರೆಂಚರ ಇಸ್ಪೇಟ್ ಪರಿಭಾಷೆಯನ್ನೇ ಇಂಗ್ಲೀಷರೂ ತೆಗೆದುಕೊಂಡಿದ್ದಾರೆ.

ಪಾಶ್ಚಾತ್ಯರಲ್ಲಿ ಈ ಆಟದ ಜನಪ್ರಿಯತೆ ಸಾಮಾನ್ಯ ಅಭಿವ್ಯಕ್ತಿಯಲ್ಲಿ ಬಳಕೆಗೆ ಬಂದ

ಇಸ್ಪೇಟ್ ಪರಿಭಾಷೆಯ ಪದಗಳಿಂದ ನಿದರ್ಶನಕ್ಕೆ ಬರುತ್ತದೆ. ಇಂಗ್ಲೀಷಿನಲ್ಲಿ (ಯಾವೊಂದು ವಿವಾದ ಅಥವಾ ಸ್ಪರ್ಧೆಯಲ್ಲಿ) ಒಂದು ಪಕ್ಷದವರು ತಮ್ಮ ಇರಾದೆ ಮತ್ತು ಬಲಾಬಲಗಳ ಗುಟ್ಟನ್ನು ಬಿಡುವುದಿಲ್ಲ ಎನ್ನುವುದಕ್ಕೆ, "ತಮ್ಮ ಎಲೆಗಳನ್ನು ಎದೆಗೆ ಹತ್ತಿ ಹಿಡಿದುಕೊಳ್ಳುವುದು" (holding one's cards close to one's chest) ಎನ್ನುತ್ತಾರೆ. ಏನನ್ನೂ ಮರೆಮಾಚದೆ ಇದ್ದದ್ದನ್ನೆಲ್ಲ ಹೇಳುವುದಕ್ಕೆ, "ತನ್ನ ಇಸ್ಪೇಟೆಲೆಗಳನ್ನೆಲ್ಲ ಮೇಜಿನ ಮೇಲೆ ಬಿಡಿಸಿಡುವುದು," ಎನ್ನುತ್ತಾರೆ. ಇಷ್ಟೆಲ್ಲ ವಿಧದ ಇಸ್ಪೇಟ್ ನುಡಿಕಟ್ಟುಗಳು ಕನ್ನಡದಲ್ಲಿ ಬಳಕೆಗೆ ಬಾರದಿದ್ದರೂ ತುರುಫು ಮಾತ್ರ ಬಂದಿದೆ. ತುರುಫು ಎಂದರೆ ಇಂಗ್ಲೀಷ್ Trump ಇಸ್ಪೇಟಿನ ನಾಲ್ಕೆಲೆ ಜಾತಿಗಳಲ್ಲಿ ಒಂದನ್ನು ತುರುಫು (ಕೆಲವೆಡೆ **ಹುಕುಂ** ಎಂಬ ಉರ್ದು ಪದವನ್ನು ಬಳಸುತ್ತಾರೆ) ಎಂದು ನಿರ್ಣಯಿಸಿ ಅದು ಇತರ ಮೂರು ಜಾತಿಗಳಿಗಿಂತ ಪ್ರಬಲ ಎಂದು ಸ್ವೀಕೃತವಾಗುತ್ತದೆ. ಒಂದು ಚಿಕ್ಕ ಬೆಲೆಯ ತುರುಫಿನ ಎಲೆಯಿಂದ ಎಷ್ಟು ದೊಡ್ಡ ಬೆಲೆಯ ಇತರ ಜಾತಿಗಳ ಎಲೆಗಳನ್ನೂ ಹೊಡೆದು ಹಾಕಬಹುದು. (ಟ್ರಂಪ್=ಟ್ರಯಂಫ್=ವಿಜಯ ಅಥವಾ ಜೇತಾರ).

ಈ ತುರುಫು ಭಾಷೆಗೆ ಏನೇನು ಬೆಡಗು ಕೊಡುತ್ತದೆ ನೋಡಿ. "ಈ ಚುನಾವಣೆಯಲ್ಲಿ ಜಾತಿಯೇ ತುರುಫು" ಎಂದರೆ ಜಾತಿ ಭಾವನೆ ಪರಿಣಾಮಗಳಲ್ಲಿ ಪ್ರಬಲ ಪಾತ್ರವಹಿಸುತ್ತದೆ. "ಈ ಕೇಸಿನಲ್ಲಿ ತುರುಫೆಲ್ಲ ಇಂಥ ಪಕ್ಷದ ಕೈಲಿ ಇವೆ" ಅಂದರೆ ವಿವಾದದಲ್ಲಿ ಗೆಲವು ತರಬಲ್ಲ ಎಲ್ಲ ಪ್ರಬಲಾಂಶಗಳೂ ಆ ಪಕ್ಷದಲ್ಲೇ ಇವೆ; ಇನ್ನೊಂದು ಪಕ್ಷ ದುರ್ಬಲವಾಗಿದೆ.

ಇಸ್ಪೇಟಿನ **ಎಕ್ಕಾ** ಕೂಡ ಭಾಷೆಯಲ್ಲಿ ಕೆಲಸ ಮಾಡುತ್ತಿದೆ. **ಎಕ್ಕಾ** ಇಂಗ್ಲೀಷಿನಲ್ಲಿ Ace-ಅಂದರೆ ಒಂದು. ಆದರೆ ಅನೇಕ ಆಟಗಳಲ್ಲಿ ಎಕ್ಕಾ ಎಲೆಗೆ ಎಲ್ಲಕ್ಕೂ ಹೆಚ್ಚು ಬೆಲೆ. ಆದ್ದರಿಂದ ಎಲ್ಲಾ ಎಕ್ಕಾ ಅವನ ಕೈಲಿ ಸೇರಿವೆ ಅಂದರೆ ಬಲವತ್ತರ ಅಂಶಗಳೆಲ್ಲ ಅವನ ಹತ್ತಿರ ಇವೆ; ಎದುರಾಳಿ ಗೆಲ್ಲುವುದು ಅಸಾಧ್ಯ.

**ಸೂತ್ರಧಾರ** ಎಂಬ ಶಬ್ದ ನಾಟಕದ ಮ್ಯಾನೇಜರ್ ಅಥವಾ ಡೈರೆಕ್ಟರ್ ಎಂಬರ್ಥದಲ್ಲಿ ಬಹಳ ಪುರಾತನ ಕಾಲದಲ್ಲೇ ಬಳಕೆಯಲ್ಲಿತ್ತು. ಈ ಶಬ್ದ ತನ್ನದೇ ಕತೆ ಹೇಳುತ್ತದೆ. ಸೂತ್ರ ಅಂದರೆ **ನೂಲು** ಅಥವಾ **ದಾರ**. ನಾಟಕ ನಿರ್ದೇಶಕ ನೂಲು ಹಿಡಿದಾತ ಹೇಗಾಗುತ್ತಾನೆ? ಇದು ಬಹುಶಃ ಬೊಂಬೆಯಾಟದ ಪರಿಭಾಷೆ. ಹಿಂದೆ ನಿಂತು ಸೂತ್ರಗಳನ್ನು ಎಳೆದು ಬೊಂಬೆಗಳನ್ನಾಡಿಸಲಾಗುತ್ತದಲ್ಲವೇ ? ಈ ಶಬ್ದದ ಮೇಲಿಂದ ಬೊಂಬೆಯಾಟ ನಾಟಕಕ್ಕಿಂತ ಪ್ರಾಚೀನವೆಂದು ಸಾಧಿಸುವ ಧೈರ್ಯ ನನಗಿಲ್ಲವಾದರೂ ಭರತನ ಕಾಲದಲ್ಲಿ ನಾಟಕ ಒಂದು ವ್ಯವಸ್ಥೆಗೆ ಬಂದಾಗಂತೂ ಬೊಂಬೆಯಾಟ ಜನಪ್ರಿಯವಾಗಿತ್ತೆಂದು ತರ್ಕಿಸಬಹುದು. ಸೂತ್ರಚಾಲನೆ ಎಂಬುದೂ ಬೊಂಬೆಯಾಟದ್ದೇ ಮಾತೆಂದು ಸಹಸಾ ನಮಗೆ ಹೊಳೆಯುವುದಿಲ್ಲ. ಎಲ್ಲ ಸೂತ್ರಗಳನ್ನೂ ಪ್ರಧಾನ ಮಂತ್ರಿಗಳೇ ತಮ್ಮ ಕೈಲಿರಿಸಿಕೊಂಡಿದ್ದಾರೆನ್ನುವಾಗಲೂ ಬೊಂಬೆಯಾಟದ್ದೇ ಸಾಮತಿ ಕೊಡುತ್ತಿರುತ್ತೇವೆ. ಎಲ್ಲವೂ **ಸುಸೂತ್ರ** ಅಥವಾ **ಸಸೂತ್ರ**ವಾಗಿ ನಡೆಯಿತು; ಯಾವುದೂ ಸಸೂತ್ರವಾಗಿರಲಿಲ್ಲ ಮೊದಲಾದವುಗಳೂ ಹಾಗೆಯೆ. ದೇವಾಲಯಾದಿಗಳಲ್ಲಿ ನಿರ್ಮಾಣದ ಪ್ರಧಾನ ಶಿಲ್ಪಿಯಾದವನೂ **ಸೂತ್ರಧಾರ**ನೆನಿಸುತ್ತಾನೆ. ಪಟ್ಟದಕಲ್ಲಿನ ಒಂದು ದೇವಾಲಯದಲ್ಲಿ **ಸೂತ್ರಧಾರ** ಶ್ರೀ ಗುಂಡ ಆಚಾರಿಯ ಸುದ್ದಿ ಬರುತ್ತದೆ. ಇತರ ಎಲ್ಲ ಶಿಲ್ಪಿಗಳನ್ನೂ ನಿಯಂತ್ರಿಸುವವನಾದ್ದರಿಂದ ಅವನೂ ಸೂತ್ರಧಾರ.

**ಪಂಚತಂತ್ರ, ಕುತಂತ್ರ, ಅತಂತ್ರ,** ರಾಜತಂತ್ರ, ತಂತ್ರಿ ಇತ್ಯಾದಿಗಳಲ್ಲಿನ ತಂತ್ರ ಕೂಡ ನೂಲಿನ ಸಾಮ್ಯದಿಂದ ಹುಟ್ಟಿದವುಗಳು. ತಂತು ಎಂದರೆ ತೆಳ್ಳನ್ನ **ನೂಲು** ಅಥವಾ **ಎಳೆ**. ಇಲ್ಲಿಯೂ ಬೊಂಬೆಯಾಟದ ಧ್ವನಿ ಇದೆಯಾದರೂ ಇದು **ನೇಯ್ಗೆ**ಗೆ ಸಂಬಂಧಿಸಿದ್ದೂ ಇರಬಹುದು. ತಂತ್ರಕ್ಕೆ ನೇಯ್ಗೆಯ **ಮಗ್ಗ** ಎಂದು ಅರ್ಥವಿದೆ. ಮಗ್ಗ ನಡೆಸುವ ಸಾಲಿಗನೂ ಹಿಂದೆ ಕೂತ ಎಳೆಗಳನ್ನು ಹಾಸುಹೊಕ್ಕಾಗಿ ನೇಯುತ್ತಾನೆ. "ಒಳಗು ಹೊರಗು ನುಲಿವ ಕೈಯ ಕುಣಿತ ಕಾಣದು" ಎಂದು ಕಡಂಗೋಡ್ಲು ಹೇಳುತ್ತಾರೆ. ಮೇಲೆ ಹೇಳಿದ ತಂತ್ರಗಳೂ ಕಾಣದ ಕೈಯ ಆಟವಲ್ಲವೆ ?

—**ಪಾನಂ.**

## ಪಂಜಾಬಿ ಕಥೆ




# ಧರ್ಮದಾಸ ಮತ್ತು ಖಾಲಿಸ್ತಾನ

ಮೂಲ : ಹವ್‌ದರ್‌ವೀರ್ ನೌಶಹರವಿ
ಕನ್ನಡಕ್ಕೆ : ರಾ. ನ. ಮೂರ್ತಿ

ಬಾಬಾಜಿ ತಮ್ಮ ಮೊಮ್ಮಗ ಗುರುಪಾಲನ ಜತೆಯಲ್ಲಿ ಬರುತ್ತಿರುವ ಒಬ್ಬ ಯುವಕನನ್ನು ತಮ್ಮ ಮುಂದೆ ಕಂಡರು. "ಬನ್ನಿ. ಹೇಗೆ ಬಂದ್ರಿ?" ಎಂದರು.

"ಅಜ್ಜ. ಇವನು ನನ್ನ ಸ್ನೇಹಿತ. ಶಾಲೆಯಲ್ಲಿ ಅಧ್ಯಾಪಕ. ಈಗ ಜನಗಣತಿ ಆಗ್ತಾ ಇದೆಯಲ್ಲ, ಅದರ ವಿಚಾರವಾಗಿ ತಮ್ಮನ್ನು ಕಾಣೋದಕ್ಕೆ ಬಂದಿದ್ದಾನೆ."

"ಸರಿ. ಒಳ್ಳೇದು. ಬನ್ನಿ, ಒಳಗಡೆ ಬನ್ನಿ ಕೂತ್ಕೊಳ್ಳಿ, ತಾವು ಕೇಳೋದು, ಬರೆಯೋದು ಸಾಕಷ್ಟಿರಬಹುದು. ಹೋಗಪ್ಪಾ, ಸ್ವಲ್ಪ ಚಹಾ ತಂದ್ಕೊಡು."

"ಇಲ್ಲ ಬಾಬಾಜಿ. ಚಹಾದ ಅವಶ್ಯಕತೆ ಇಲ್ಲ, ನಾನು ಈಗ ಇನ್ನೂ ಕೆಲವು ಮನೆಗಳಿಗೆ ಹೋಗ ಬೇಕು. ಇದೊಂದು ನಾಯಿ ಕೆಲಸ ಅಥವಾ ಕತ್ತೆ ಚಾಕರಿ."

"ಏನೂ ಪರವಾಗಿಲ್ಲ. ಚಹಾ ಕುಡಿಯೋ–ದ್ರೊಳ್ಗೆ ಏನು ಮಹಾ ತಡವಾಗುತ್ತೆ?" ಬಾಬಾಜಿ ಅವನನ್ನು ವಿನಯದಿಂದ ಡ್ರಾಯಿಂಗ್ ರೂಮಿಗೆ ಕರೆದುಕೊಂಡು ಬಂದು, "ಇಲ್ಲಿ ಕೂತ್ಕೊಳ್ಳಿ, ಕುರ್ಚಿ ಮೇಜುಗಳಿರೋದ್ರಿಂದ ಆರಾಮವಾಗಿ ಬರೆಯಬಹುದು."

ಆತ ಮೇಜಿನ ಮೇಲೆ ಕಾಗದಗಳನ್ನು ಹರಡಿಕೊಂಡ.

"ಸ್ವಾಮಿ, ತಮ್ಮ ಹೆಸರು?" ಎಂದ.

"ಭರ್‌ಪೂರ್‌ಸಿಂಗ್"

"ವಯಸ್ಸು?"

"ಎಪ್ಪತ್ತೆರಡು ವರ್ಷ."

"ಧರ್ಮ?"

"ಸಿಖ್",

"ಜಾತಿ?"

"ಜಾಟ."

"ಕೆಲಸ?"

"ಪಾಯುದಳದಿಂದ ನಿವೃತ್ತ, ಈಗ ವ್ಯವಸಾಯದಲ್ಲಿಮೇಲ್ವಿಚಾರಣೆ."

"ಮಾತೃಭಾಷೆ?"

"ಯಾವ ಭಾಷೆಯಲ್ಲಿ ತಾವು ಪ್ರಶ್ನೆ ಕೇಳ್ತಾ ಇದೀರಿ, ಯಾವ ಭಾಷೆಯಲ್ಲಿ ನಾನು ಉತ್ತರ ಕೊಡ್ತಾ ಇದೀನಿ?"

"ಹಾಗಿದ್ದ ಮೇಲೆ ಭಾಷೆ ಕಾಲಂನಲ್ಲಿ 'ಪಂಜಾಬಿ' ಅಂತ ಭರತಿ ಮಾಡಲೆ?"

"ಇಲ್ಲ, ಪುಶ್ತು ಅಂತ ಹಾಕ್ತೀರೇನು?"

"ಸರಿ, ನಿಮಗೆ ಹೆಣ್ಮಕ್ಕಳು–ಗಂಡು ಮಕ್ಕಳು?"

"ಎಲ್ಲರಿಗಿಂತಲೂ ದೊಡ್ಡ ಮಗ ಹರ್‌ಪಾಲ್ ಸಿಂಗ್."

"ವಯಸ್ಸು?"

"ವಯಸ್ಸು! ಇದೀಗ ಹರ್‌ಪಾಲ್ ಸ್ವರ್ಗಸ್ಥನಾಗಿದ್ದಾನೆ."

"ತಮ್ಮ ಎರಡನೆಯ ಮಗನ ಹೆಸರು?" ಅಧ್ಯಾಪಕ ಪಶ್ಚಾತ್ತಾಪ ವ್ಯಕ್ತಪಡಿಸುತ್ತಾ ಕೇಳಿದ.

"ಗುರುದೀಪ್‌ಸಿಂಗ್"

"ಬಾಬಾಜಿ, ನಿಮ್ಮೊತ್ತೇಲಿ ಇರೋ ಅಷ್ಟು ಜನಗಳನ್ನು ಮಾತ್ರ ಹೇಳಿ ಸಾಕು."

"ಅಪ್ಪಾ. ನನ್ನ ಗುರುದೀಪ್ ನನ್ನ ಹತ್ರ ಯಾಕೆ ಇರಬೇಕಿತ್ತು! ಅವನೂ ಈಗ ಈ ಪ್ರಪಂಚದಲ್ಲಿ ಇಲ್ಲ." ಬಾಬಾ ಭರ್‌ಪೂರ್‌ಸಿಂಗ್ ಬೇಸರದಿಂದ ದಪ್ಪ ಗಾಜಿನ ಕನ್ನಡಕ ತೆಗೆದು ಕಣ್ಣುಗಳನ್ನು ಒರೆಸಿಕೊಳ್ಳತೊಡಗಿದರು.

ಇದನ್ನು ನೋಡಿ ಅವರ ಕುಟುಂಬದ ಉಳಿದೆಲ್ಲ ಸದಸ್ಯರ ಬಗ್ಗೆ ವಿವರಗಳನ್ನು ಅವರ ಮೊಮ್ಮಗನೇ ಭರ್ತಿ ಮಾಡಿಸತೊಡಗಿದ. ಅವನು ಬಾಬಾಜಿಯವರ ಎರಡನೆಯ ಮಗನ ಹೆಸರನ್ನು "ಧರ್ಮದಾಸ್" ಎಂದು ಹೇಳಿದ.

"ಧರ್ಮದಾಸ್ ಅಥವಾ ಧರ್ಮಸಿಂಗ್?" ಅಧ್ಯಾಪಕ ಕೇಳಿದ.

"ಧರ್ಮಸಿಂಗ್ ಅಲ್ಲ, ಧರ್ಮದಾಸ್," ಮಧ್ಯದಲ್ಲಿ ಬಾಬಾಜಿ ಬಾಯಿ ಹಾಕಿ ಹೆಮ್ಮೆಯಿಂದ ಹೇಳಿದರು.

"ನನ್ನ ಮೂರನೆಯ ಮಗನ ಹೆಸರು ಧರ್ಮದಾಸ."

"ವಯಸ್ಸು?"

"ಸುಮಾರು ೨೪–೨೫."

"ಧರ್ಮ?"

"ಹಿಂದೂ."

"ಧರ್ಮ ಹಿಂದೂ?"

"ಹೌದು ಹಿಂದೂ."

"ಆದರೆ ನೀವು?"

"ಆದರೇನು?"

ಕೆಲ ಕ್ಷಣ ಪರಿಸರದಲ್ಲಿಂಥೇ ಆಶ್ಚರ್ಯ ಹಾಗು ನಂಬಿಕೆಯ ಮಂಜು ಹರಡಿತು. ಅಧ್ಯಾಪಕ ಯಂತ್ರದಂತೆ ಉಳಿದ ಜನಗಳ ವಿವರಗಳನ್ನೆಲ್ಲಾ ತುಂಬಿಕೊಂಡು, ಮತ್ತೆ ಕಾಗದ ಜೋಡಿಸಿಕೊಳ್ಳುತ್ತಾ, "ಸರಿ, ಗುರುಪಾಲ್, ಇನ್ನು ಬರ್ತೇನೆ. ನೀನು ಸಾಯಂಕಾಲ ಬಂದ್ಬಿಡಬೇಕು. ದೇವಸ್ಥಾನದ ಹತ್ತಿರ ಐದು ಗಂಟೆಗೆ ಸರಿಯಾಗಿ ಆರಕ್ಷ ವಿರೋಧಿ ಮೋರ್ಚಾ ಸಭೆ ಇದೆ. ನೆನಪಿದೆಯಾ? ತೀರ್ಮಾನವಾಗಿಬಿಡಲಿ... ಪಂಜಾಬು ಗುಜರಾತಿನಂತ ಹಿಂದುಳಿಯುವದು ಬೇಡ."

"ಇರಯ್ಯಾ, ಚಹಾ ಈಗ್ಲೇ ಬಂದ್ಬಿಡುತ್ತೆ."

"ಚಹಾದ ಆಸೆ ಇಲ್ಲ. ಕುಡಿಬೇಕೂಂದ್ರೆ, ಒಂದು ಲೋಟ ನೀರು ಕೊಡಪ್ಪಾ."

ಗುರುಪಾಲ್ ನೀರು ತರಲು ಹೋದ. ಬಾಬಾಜಿ ತಂದ್ರಿಯಿಂದ ಎಚ್ಚರಗೊಂಡು, "ಮಾಸ್ತರೇ, ಧರ್ಮದಾಸನ ಭಾಷೆಯನ್ನು ನೀವು ಕೇಳಲೇ ಇಲ್ಲ?" ಎಂದರು.

"ಕೇಳುವಂತಹ ಪ್ರಮೇಯವೇ ಬರಲಿಲ್ಲ."

"ಅದೂ ಸರಿಯೇ ಅನ್ನಿ. ಭಾಷೆ ಕೇಳೋ ಅವಶ್ಯಕತೆ ಏನಿದೆ? ಪಂಜಾಬಿಗಳೆಲ್ಲರ ಭಾ

ಪಂಜಾಬಿಯಲ್ಲದೆ ಬೇರೆ ಏನು ಆಗೋದಕ್ಕೆ ಸಾಧ್ಯ?"

"ಯಾಕಾಗೋದಿಲ್ಲ? ಈಗ ನೋಡಿ ನನ್ನ ಭಾಷೆ ಹಿಂದಿ, ಧರ್ಮದಾಸನ ಭಾಷೆಯೂ ಹಿಂದಿಯೇ!"

"ಇಲ್ಲ, ಧರ್ಮದಾಸನ ಭಾಷೆ ಪಂಜಾಬಿ," ಬಾಬಾಜಿ ಸ್ವಲ್ಪ ಕಠೋರವಾಗಿ ಹೇಳಿದರು.

"ನೀವೇನೂ ಕೋಪ ಮಾಡಿಕೊಳ್ಳಬೇಡಿ. ನಾನು ಹೊಡೆಸುವಾಕಿ ಪಂಜಾಬಿ ಅಂತ ಮಾಡ್ಕೋತೀನಿ."

ಗುರುಪಾಲ್ ನೀರು ತೆಗೆದುಕೊಂಡು ಬಂದ. ಮಾಸ್ಟರ್ ಅರ್ಧ ಲೋಟ ನೀರು ಕುಡಿದು ಹೊರಟು ಹೋದ. ಲೋಟದಲ್ಲಿದ್ದ ಎಂಜಲು ನೀರು ಮೇಜಿನ ಮೇಲಿತ್ತು. ಇಂದು ಮತ್ತೆ ಪಾಕಿಸ್ತಾನವಾದಂತೆ, ಬೀದಿ-ಬಡಾವಣೆಗಳಲ್ಲಿ ಯುದ್ಧವಾದಂತೆ... ಬಾಬಾಜಿ ಕುರ್ಚಿಯಲ್ಲಿ ಅರ್ಧಂಬರ್ಧ ಮಲಗಿಕೊಂಡೇ ಗಾಢವಾದ ಚಿಂತೆಯಲ್ಲಿ ಮುಳುಗಿದ್ದರು. ಭಗ್ನಗೊಂಡ ಗೋಡೆಗಳ ಮನೆಗಳು ಹಾಳಾಗುತ್ತಿವೆ. ಹಳ್ಳಿಗಳು ನಾಶವಾಗುತ್ತಿವೆ. ವಂಶಪಾರಂಪರ್ಯವಾಗಿ ಮಕ್ಕಳು ಆಡುತ್ತಿದ್ದ ಮೈದಾನಗಳು ಹಾಳು ಬಿದ್ದಿವೆ! ಭಂಡಾರ ಲೂಟಿಯಾಗಿದೆ. ವಿಗ್ರಹಗಳು ಮಣ್ಣು ಮುಕ್ಕುತ್ತಿವೆ. ಸ್ನೇಹದ ಹೊಸ ಸಮಾಧಿಯ ಮೇಲೆ ಧರ್ಮೀಯನೊಬ್ಬ ಕುಳಿತು ಹೆಂಡ ಕುಡಿಯುತ್ತಿದ್ದಾನೆ. ನಾಲ್ಕು ಕಡೆಗಳಿಂದ "ಉಳಿಸಿ, - ಉಳಿಸಿ" ಎಂಬ ಕೂಗು ಕೇಳುತ್ತಿದೆ. ಆದರೆ ಯಾರು ಯಾರನ್ನು ಉಳಿಸುವುದು? "ಭರ್‌ಪೂರ್‌ಸಿಂಗ್!" ಅವನ ಸ್ನೇಹಿತ! ತನ್ನ ಮಕ್ಕಳನ್ನು ಕಾಪಾಡಬೇಕೂಂತ... "ನಿನ್ನ ಮಕ್ಕಳೂಂತ ತಿಳ್ಕೊಂಡು ನನ್ನ ಕೊನೆಯಾಸೆ." ಕತ್ತಲೆಯಲ್ಲಿ ಭರ್‌ಪೂರ್‌ಸಿಂಗ್ ಹಾಗೂ ಕರ್ಮಚಂದ್-ಜತೆಜತೆಯಲ್ಲಿ ಓಡುತ್ತಿದ್ದರು. ಈ ನಡುವೆ ಒಂದು ಗುಂಡು ಕರ್ಮಚಂದನನ್ನು ಸೀಳಿಕೊಂಡು ದಾಟಿತ್ತು. ಅವನು ಅಲ್ಲೇ ಧೊಪ್ಪನೆ ಬಿದ್ದ.

ಬಾಬಾಜಿಯವರ ಕಣ್ಣುಗಳಲ್ಲಿ ಆ ದೃಶ್ಯ ಮುಂದೆ ಸರಿದುಹೋಯಿತು. ಅಳುತ್ತಿದ್ದ ಮುಗ್ಧ ಮಗುವನ್ನು ಕರ್ಮಚಂದನ ಎದೆಯಿಂದ ಎತ್ತಿಕೊಂಡು ಅವರು ತಮ್ಮ ಎದೆಗೆ ಅಪ್ಪಿಕೊಂಡರು. ಕೂಡಲೇ ಅವರ ಪತ್ನಿ ವೀರಾವತಿ ಮಗುವನ್ನು ಎತ್ತಿಕೊಂಡು, ತನ್ನೆದೆಗೆ ಅವಚಿಕೊಂಡಳು. ಮಗು ಶಾಂತವಾಯಿತು. ಮತ್ತೆ ಅವರು ಓಡತೊಡಗಿದರು!

ಈಗ ಧರ್ಮದಾಸನಿಗೆ ೩೪-೩೫ ವರ್ಷ. ಧರ್ಮದಾಸನ ತಂದೆ ಭರ್‌ಪೂರ್‌ಸಿಂಗ್, ತಾಯಿ ವೀರಾವತಿ. ಧರ್ಮದಾಸನ ಹೆಂಡತಿ ವಿಮಲೆಯ ಜೊತೆಗೆ ಇಬ್ಬರು ಮಕ್ಕಳು ಸಹ ಇಷ್ಟೆ. ಇಷ್ಟಾದರೂ ಧರ್ಮದಾಸ ಉಳಿದ ಯಾವ ನೆಂಟ-ಗಂಟರನ್ನು ಹಚ್ಚಿಕೊಂಡಿರಲಿಲ್ಲ.

ಸ್ವಲ್ಪ ಸಮಯದ ನಂತರ, ಯಾರೋ ಬರುತ್ತಿರುವ ಶಬ್ದವನ್ನು ಕೇಳಿ ಭರ್‌ಪೂರ್‌ಸಿಂಗ್ ತನ್ನ ತಲೆಯಿಂದ, ಎರಡೂ ಕೈಗಳನ್ನು ಮೇಲೆತ್ತಿದ. ಧರ್ಮದಾಸ ಅವನತ್ತ ಬರುತ್ತ, "ಸರಿಯಪ್ಪ ನಾನು ಹೋಗ್ತೇನೆ. ಹೋರಿಗಳನ್ನು ತಂದುಕಟ್ಟಿದೆ. ಗುರುಪಾಲ್ ಕೋಪದಿಂದ ಧಾಣ-ಡಂಗುರ ಹೊಡೆಸಿಬಿಡ್ತಾನೆ, ನಾನು ಬಹುಶಃ ಇವತ್ತು ರಾತ್ರೀಗೇ ಗೋಧಿ ಮಾರೋದಿಕ್ಕೆ ಪೇಟೆಯಲ್ಲಿ ಇರಬೇಕಾಗುತ್ತದೆ. ಗೋಧಿಯಲ್ಲಿ ಇನ್ನೂ ತೇವ ಇದೆ ಅಂತ ಇನ್ಸ್‌ಪೆಕ್ಟರ್ ಹೇಳ್ತಾನೆ. ನಮ್ಮ ಒಣಗಿಸಿದ ಗೋಧೀಲಿ ತೇವ ಹೇಗೆ ಬಂತೂಂತ ಗೊತ್ತಾಗೋಲ್ಲ. ವರ್ಷಗಟ್ಲೇ ಎಷ್ಟೇ ಒಣಗಿಸಿದರೂ ತೇವ ನಿಂತುಬಿಡುತ್ತೆ! ಇಲ್ಲಿ ಬದುಕೋದಕ್ಕೆ ಆಗುತ್ತೇ! ಅಪ್ಪಾ. ನೀನು ನನ್ನನ್ನೂ ಕೆನಡಾಗೆ ಕಳಿಸಿಬಿಡು," ಎನ್ನುತ್ತಾನೆ.

"ಧರ್ಮಾ!" ಅವರಪ್ಪನಿಗೆ ಅಳುವಂತಾಯಿತು– "ಕೆನಡಾಕ್ಕೆ ಹೋಗೋ ವಿಷಯ ಇನ್ನು ಮುಂದೆ ಆಡಬೇಡ. ನನಗೆ ನಿನ್ನನ್ನು ಸಹ ಗುರುದೀಪನ ಹಾಗೆ ಕಳ್ಕೊಳ್ಳೋದಕ್ಕೆ ಆಸೆಯಿಲ್ಲ. ಇಂತಹ ವಿಷಯ ಇನ್ಮೇಲೆ ಮಾತಾಡಬೇಡ"

"ಆಗಲಿ ಅಪ್ಪಾ, ಎಂದಿಗೂ ಹೇಳೋದಿಲ್ಲ. ಈಗ ಕ್ಷಮಿಸಿಬಿಡು." ಕ್ಷಮೆ ಕೇಳಿ, ಆಶ್ವಾಸನೆ ಕೊಟ್ಟು ಧರ್ಮದಾಸ ಹಿಂದಿರುಗಿ ಹೋಗುತ್ತಾನೆ.

ಬಿಳಿಯರು ಹಾಗೂ ಕಪ್ಪುಜನರಲ್ಲಿ ಭೇದ ಮಾಡಿ, ದಡ್ಡ ಜನ ಬರ-ಬರುತ್ತಾ ದಕ್ಷಿಣ ಆಫ್ರಿಕದಂತೆ ಉತ್ಸಾಹಿಸುತ್ತಿದ್ದಾರೆ. ಅಂತಹ ಕೆನಡಾಕ್ಕೆ ಭರ್‌ಪೂರ್‌ಸಿಂಗರ ಮಗ ಗುರುದೀಪನನ್ನು

ಯಾರೋ ಕೂಲಿ ಮಾಡಿದ್ದರು. ಏಳು ವರ್ಷಗಳ ಮೇಲೆ ಅವನು ಮೊದಲ ಬಾರಿ ದೇಶಕ್ಕೆ ಹಿಂದಿರುಗಬೇಕಿತ್ತು. ಆದರೆ ಅವನು ಅದಕ್ಕೆ ಎರಡು ದಿನ ಮೊದಲೇ ಈ ಪ್ರಪಂಚದಿಂದ ಹಾರಿಹೋದ. ಭೆರ್‌ಪೂರ್‌ಸಿಂಗರ ಮಗ ಹಿಂದಿರುಗಿ ಬರಲೇ ಇಲ್ಲ. ಧರ್ಮದಾಸ್ ಮತ್ತೆ ಹರ್‌ಪಾಲ್‌ಸಿಂಗರಿಗೆ ಸಂಪೂರ್ಣವಾಗಿ ವಿದ್ಯಾಭ್ಯಾಸ ಮಾಡಿಸಲಾಗಲಿಲ್ಲ. ಪರಿಸ್ಥಿತಿಯೂ ಹಾಗೇ ಇತ್ತು. ಗುರುದೀಪ್ ಸಿಂಗ ಬಿ. ಎ. ಮುಗಿಸಿದ್ದ. ಆದರೆ ಬಹಳ ವರ್ಷ ಎಲ್ಲಿಯೂ ಎಷ್ಟು ಪ್ರಯತ್ನಪಟ್ಟರೂ ಕೆಲಸ ಸಿಗದಿದ್ದರಿಂದ, ಕೂಲಿ ಮಾಡಲು ಕೆನಡಾಕ್ಕೆ ಹೋದ.

ಭಾರತದಿಂದ ಕೆನಡಾನವರೆವಿಗೆ ತಿರಸ್ಕಾರದ ಛಾಯೆ ಬಹಳ ಅಗಾಧ. ಕತ್ತಲೆಯ ತೀಕ್ಷ್ಣತೆ ಬಹಳ ಗಾಢ! ೧೯೪೭ರಿಂದ ೧೯೮೨ ರ ವರೆಗೆ ಎಲ್ಲಿಹೋದರೂ, ಯಾವುದಾದರೂ "ಸ್ತಾನ" ಅಥವಾ 'ಶೈತಾನ' ವ್ರಣವಾಗಿ ಬೆಳೆಯುತ್ತಿತ್ತು. ನಿತ್ಯ ಹೊಸ ಸಂಗತಿ ಹುಟ್ಟುತ್ತದೆ. ಪ್ರತಿ ನಿತ್ಯ ನೋವು ಅಲುಗಾಡಿಸುತ್ತದೆ.

ಬಾಬಾ ಭೆರ್‌ಪೂರ್‌ಸಿಂಗರು ಕುರ್ಚಿಯಲ್ಲಿ ಬಹಳ ಹೊತ್ತು ಕುಳಿತೇ ಬೆಂಕಿಯಂತೆ ಹರಡಿದ ಬಿಸಿಲಿನಲ್ಲಿ ಹಾಳು ಭೂಮಿಯನ್ನು ನೋಡುತ್ತಿದ್ದರು. ಸ್ವಲ್ಪ ಮನಸ್ಸಿಗೆ ನೆಮ್ಮದಿ ಸಿಕ್ಕಲೆಂದು ಎದ್ದು ಬೆತ್ತಹಿಡಿದುಕೊಂಡು ತಿರುಗಲು ಹೊರಟರು.

ತಮ್ಮ ಹೊಲಗದ್ದೆಗಳನ್ನು ಸುತ್ತಿಕೊಂಡು ಬಂದ ನಂತರ ಅವರು ಗುರುದ್ವಾರಕ್ಕೆ ಹೋದರು. ಆ ವೇಳೆಗೆ ಸಂಜೆಯ ಹೊಗೆಯ ಬಣ್ಣ ಕಪ್ಪಿಟ್ಟಿತು. ಅವರು 'ಗುರು ಗ್ರಂಥಸಾಹಬ್' ಪ್ರಕಟವಾದ ನಂತರ 'ರಹ್‌ರಾಸ್'ನ ಪಾಠ ಮಾಡಿ ಮನೆಗೆ ಬಂದರು. ಊಟ ಮಾಡಿ, ಯೋಚನೆಯಲ್ಲಿಯೇ ಮಲಗಿದರು. ಗುರುಪಾಲ ಇನ್ನೂ ತನ್ನ ಆರಕ್ಷಣ ವಿರೋಧೀ ಸಭೆಯಿಂದ ಹಿಂದಿರುಗಿ ಬರಲಿಲ್ಲ. ಧರ್ಮದಾಸ ಇಂದು ರಾತ್ರಿಯನ್ನು ಪೇಟೆಯಲ್ಲಿಯೇ ಕಳೆಯಬೇಕಾಗುತ್ತದೆ. ಸೊಸೆಯಂದಿರು ತಮ್ಮ ತಮ್ಮ ಕೊಠಡಿಗಳಿಗೆ ಹೋಗಿದ್ದಾರೆ. ಪಕ್ಕದ ಚಾಪೆಯ ಮೇಲೆ ವೀರಾವತಿ ಅನಾರೋಗ್ಯದಿಂದ ನರಳುತ್ತ ಬಿದ್ದಿದ್ದಳು. ಅವಳು ಬರ-ಬರುತ್ತಾ ನಿಶ್ಶಕ್ತಳಾಗುತ್ತಿದ್ದಳು. ಬಾಬಾಜಿ ಅವಳನ್ನು "ಮಲಗಿದ್ದೀಯೇನು?" ಎಂದರು.

ವೀರಾವತಿ ತನ್ನನ್ನು ಯಾರಾದರೂ ಕರೆಯಲಿ ಎಂದು ನಿರೀಕ್ಷಿಸುತ್ತಿದ್ದಳು. ಇದ್ದಕ್ಕಿದ್ದಂತೆ, "ನಿದ್ದೆಗೆ ಬೆಂಕಿ ಹಾಕಿದೆ. ಇಡೀ ರಾತ್ರಿ ಹಾಗೇನೇ ಕಳೀಬೇಕು, ನಿದ್ದೆಯೇ ಬರೋಲ್ಲ. ಹೊರಳಾಡಿಕೊಂಡು ಮಲಗಲು ಶರೀರ ಸ್ವಸ್ಥವಿಲ್ಲ," ಎಂದಳು.

"ಹೌದು. ತವೆಯ ಮೇಲೆ ರೊಟ್ಟಿಯಿದೆ, ಕೆಳಗೆ ಬೆಂಕಿಯಿದೆ, ಉರೀತಾ ಇದೆ."

"ನೀವು ಈಗೀಗ ಒಂದು ಪದ್ಯಾನೂ ಹೇಳೋದೇ ಇಲ್ಲ. ಮೊದಲು ಅರ್ಧ ರಾತ್ರೀವರೆವಿಗೂ ಮಾತೇ ಮುಗೀತಾ ಇರಲಿಲ್ಲ."

"ನೀನೆಲ್ಲೋ ಹುಚ್ಚಿ! ಮೊದಲು ಇಲ್ಲಿ ಬಹಳಷ್ಟು ಜನ ಸೇರ್ತಾ ಇದ್ರು. ಆದರೆ ಈಗ ನಾನು ಯಾರಿಗೆ ಹೇಳಲಿ ಪದ್ಯಾನಾ?"

"ಹರ್‌ಪಾಲ್ ದೇವರ ಹತ್ರ ಸೇರಿದ ಮೇಲೆ, ನೀವು ಕಲ್ಲಿನ ಹಾಗೆ ಆಗಿದ್ದೀರಿ."

"ನೋಡಿದ್ಯಾ, ಗುರುದೀಪ್ ಆದ ಮೇಲೆ, ಹರದೀಪ್ ಸಹ ಹೊರಟು ಹೋದ, ಆದರೆ ಅದು ನನ್ನ ಸರದಿಯಾಗಿತ್ತು."

"ದೂರ ಹೋಗಬೇಡಾಂತ ನಾನು ಹರ್‌ದಾಲ್‌ನಿಗೆ ಎಷ್ಟು ಹೇಳ್ದೆ? ಕೆಲಸ ಸಿಗ್ದೆ ಇದ್ರೇ ಏನು, ಜೀವನ ನಡೆಸೋಕೆ ಒಳ್ಳೇ ಜಮೀನು ಇದ್ದೇ ಇದೆ ಅಂತ! ಆದರೆ ಅವನಿಗೆ ಉದ್ರೇಕ ಏರಿತ್ತು. ವ್ಯಾಪಾರ ಮಾಡಬೇಕು, ಹಣ ಸಂಪಾದಿಸಬೇಕು. ಆದರೆ ಸಾಂಪ್ರದಾಯಿಕ ದಂಗೆಗಳು ನನ್ನ ಪಾಲನನ್ನು ನುಂಗಿಕೊಂಡವು. ಇಡೀ ಪೇಟೇನೇ ಸುಟ್ಟು ಬೂದಿಯಾಯ್ತು, ಅದರಲ್ಲಿ ಅವನು ಉರಿದು ಹೋದ. ನಿಜ ಹೇಳೋದಾದ್ರೆ ಅವನ ಸಂಕಟ ನನಗಿನ್ನೂ ಬಾಧಿಸ್ತಾ ಇದೆ."

"ಹೌದು, ನಮ್ಮ ಸ್ನೇಹಿತ ಗೋವರ್ಧನ್, ದರ್ಶನಸಿಂಗನ ಮನೇನ ಖಾಲಿ ಮಾಡಿದ್ದಾನೆ! ಈಗ ಹಿಂದುಗಳು ಇರೋ ಕಡೆ ಹೋಗ್ತೇನೇಂತ ಹೇಳೋದು ನಿನಗೂ ಗೊತ್ತಿರಬೇಕು?"

"ಏನು ಹೇಳ್ತಾ ಇದೀರಿ? ಗೋವರ್ಧನ್ ಹೊರಟುಹೋದನೆ? ಇಲ್ಲಿ ಅವನಿಗೇನು

ತೊಂದರೆ ಇತ್ತು? ಅಣ್ಣ-ತಮ್ಮಂದಿರಿಗೆ ಯಾರಾದರೂ ಹೆದರಿಸ್ತಾರೇನು ?"

ಕೊಠಡಿಯಲ್ಲಿ ಮೌನವಾವರಿಸಿತು. ಕತ್ತಲೆ ಮೊದಲೇ ಆವರಿಸಿತ್ತು. ಅವರಿಬ್ಬರೂ ಕತ್ತಲೆಯಲ್ಲಿ ದಿಟ್ಟಿಸಿದರಾದರೂ ಏನೂ ಕಾಣಲಿಲ್ಲ. ಈಗ ಕಣ್ಣಿನ ದೃಷ್ಟಿಯೂ ಬಹಳ ದುರ್ಬಲಗೊಂಡಿತ್ತು.

ಪಕ್ಕದ ಆರಾಮ ಕೋಣೆಯ ಬಾಗಿಲು ಶಬ್ದವಾಯಿತು. ಯಾರೋ ಸ್ವಿಚ್ ಹಾಕಿದಾಗ ಗೋಡೆಯ ಸಂದಿಯಿಂದ ಮಂಕಾದ ಬೆಳಕು ಕೊಠಡಿಯಲ್ಲಿ ಹರಡಿತು. ಯಾರೋ ಚಿತ್ರಗೀತೆಯನ್ನು ಗುಣುಗುಣಿಸುವ ಶಬ್ದ ಕೇಳಿಸಿತು. ಅವನು ಮತ್ತಾರೂ ಆಗಿರದೆ ಗುರುಪಾಲನೇ ಆಗಿದ್ದ. ಬಂದವನೇ ರೇಡಿಯೋ ಹಾಕಿದ್ದ. ಸುದ್ದಿ ಪ್ರಸಾರವಾಗುತ್ತಿತ್ತು:

'ಇಂದು ಮಧ್ಯಾಹ್ನದ ನಂತರ ಖಾಲಿಸ್ತಾನದ ಸಮರ್ಥಕರು ಬಿಚ್ಚುಗತ್ತಿಗಳನ್ನು ತೆಗೆದುಕೊಂಡು ಮೆರವಣಿಗೆ ಹೊರಟರು. ನಮ್ಮ ವಾರ್ತಾಹಾರರ ವರದಿಯಂತೆ ಮೆರವಣಿಗೆಯಲ್ಲಿ ಐದುನೂರಕ್ಕಿಂತ ಹೆಚ್ಚು ಜನರಿರಲಿಲ್ಲ. ಆದರೆ ಪ್ರದರ್ಶನಕಾರರ ಪ್ರತಿನಿಧಿಗಳೊಬ್ಬರು ಈ ಸಂಖ್ಯೆಯನ್ನು ಐದು ಸಾವಿರವೆಂದು ತಿಳಿಸಿದರು. ಖಾಲಿಸ್ತಾನದ ಬೇಡಿಕೆ...'

ಈ ಸುದ್ದಿ ಬಾಬಾ ಖರ್‌ಪೂರ್‌ಸಿಂಗರ ಮನ



"ಡಾಕ್ಟ್ರೆ, ನಿಮ್ಮ ವಾಹನ ಚಕ್ರದ ಟ್ಯೂಬನ್ನು ಯಾರೋ ಅಕ್ಯುಪಂಕ್ಚರ್ ಮಾಡಿಬಿಟ್ಟಿದ್ದಾರೆ."

ಸ್ಸಿನಲ್ಲಿ ಮತ್ತಷ್ಟು ಗಾಬರಿಯನ್ನುಂಟುಮಾಡಿತು. ಅವನನ್ನು ಕೂಗುತ್ತಾ, "ಮಗು, ಸ್ವಲ್ಪ ರೇಡಿಯೋ ಶಬ್ದ ಕಡಿಮೆ ಮಾಡು," ಎಂದರು. "ಆಗಲಿ ಅಪ್ಪಾ!" ಎಂದವನೇ ಗುರುಪಾಲ್ ರೇಡಿಯೋವನ್ನು ಅಷ್ಟಕ್ಕೇ ನಿಲ್ಲಿಸಿಯೇ ಬಿಟ್ಟ.

*

ಮಾರುದಿನ ಧಾನ್ಯವೆಲ್ಲಾ ಮಾರಾಟವಾಯಿತು. ದಳ್ಳಾಳಿ ಎಲ್ಲ ಹಣವನ್ನೂ ಭರ್‌ಪೂರ್‌ಸಿಂಗನ ಲೆಕ್ಕಕ್ಕೆ ಕಟ್ಟಿದ್ದಾಯ್ತು. ೧೪೬೦ ರೂ.ಗಳು ವಸೂಲಿಯಾಗಿ, ೮೩೬ ರೂಪಾಯಿ, ೩೫ ಪೈಸೆಗಳು ಬಾಕಿಯಾಗಿಯೇ ಉಳಿಯಿತು.

ರಾತ್ರಿ ಊಟವಾದ ಮೇಲೆ ಜಾನುವಾರುಗಳಿಗೆ ಆಹಾರ ಕೊಟ್ಟು, ಒಳಗೆ ಕಟ್ಟಿ ಧರ್ಮದಾಸ್ ಎಂದಿನಂತೆ ಅಪ್ಪನ ಮಂಚದ ಮೇಲೆ ಬಂದು ಕೂತ. ಕೂರುತ್ತಲೇ, "ಅಪ್ಪಾ, ನಿನ್ನೆ ಪೇಟೆಯಲ್ಲಿ ವಿಶೇಷವಾಗಿ ಜನ ಸೇರಿತ್ತು. ೧೫–೨೦ ಜನ ಘೋಷಣೆ ಹಾಕ್ತಾ ಪೇಟೆಗೆ ಬಂದ್ರು, 'ನಮಗೆ ಬೇಕು ಖಾಲಿಸ್ತಾನ್. ಖಾಲಿಸ್ತಾನ್ ನಮಗೆ ಬೇಕು!' ಅಂತ ಅವರೆಲ್ಲರೂ ಅಲ್ಲಿಯೇ ಕೆಳಗೆ ಕೂತರು. ಒಬ್ಬ ಮನುಷ್ಯ ಭಾಷಣಕ್ಕೆ ಆರಂಭಿಸಿದ. ಬಹಳಷ್ಟು ಜನ ತಮ್ಮ ಕೆಲಸ, ಅದು– ಇದು ಬಿಟ್ಟು ಅಲ್ಲಿ ಸೇರಿದರು. ನಾನೂ ಹೋದೆ. ಆತ ಜೋರಾಗಿ, 'ನಾವು ಅಸಾಮಿಗಿಂತ ಕಡಿಮೆ ಇಲ್ಲ. ಇಲ್ಲಿ ಖಾಲಿಸ್, ಖಾಲಿಸ್ತಾನವಾಗುತ್ತೆ' ಎಂದ ನನ್ನ ಜತೆ ನಿಂತಿದ್ದ ಬಿಹಾರಿನಿಂದ ಬಂದ ಕೂಲಿಕಾರನೊಬ್ಬ ಕೇಳಿದ, 'ಸರ್‌ದಾರ್‌ಜೀ, ಈ ಖಾಲಿಸ್ತಾನ್ ಏನು?' 'ನನಗೇನೂ ಗೊತ್ತಿಲ್ದೆ ಇರೋವಾಗ, ನಾನೇನು ಹೇಳ್ಲಿ? ಅಪ್ಪಾ ನೀವು ಪೇಪರ್ ಓತ್ತೀರಿ, ಈ ಖಾಲಿಸ್ತಾನ ಏನೂಂತ ಸ್ವಲ್ಪ ಹೇಳಿ?"

ಬಾಬಾ ಭರ್‌ಪೂರ್‌ಸಿಂಗ್‌ನ ಎದುರಿಗೆ ಸಮಸ್ತ ಇತಿಹಾಸವೇ ಸುತ್ತುತ್ತಿತ್ತು. ಗುರು ಗೋವಿಂದಸಿಂಗರು ಸಮಸ್ತ ಮಾನವ ಸಮಾಜವನ್ನು ಒಂದೇ ಕ್ರಮದಲ್ಲಿ ಜೋಡಿಸಿ ಜಾತಿ–ಪಂಥ ಮತ್ತು ಮೇಲು–ಕೀಳನ್ನು ಹೋಗಲಾಡಿಸುವ ಸಲುವಾಗಿ ಖಾಲಸಾ ಅಣಿಗೊಳಿಸಿದ್ದರು. ಅದು ಪ್ರತಿಯೊಂದು ಅನ್ಯಾಯ–ಅತ್ಯಾಚಾರದ ವಿರುದ್ಧ ಹೋರಾಡುತ್ತಿತ್ತು. ಆದರೆ ಈ ಖಾಲಿಸ್ತಾನ? ಅವರು ಹೇಳಿದರು, "ಮಗು ಖಾಲಿಸ್ತಾನದ ಬಗ್ಗೆ ಈಗ ವೃತ್ತಪತ್ರಿಕೆಗಳಲ್ಲಿ ಸಾಕಷ್ಟು ಗಲಾಟೆಯಾಗಿದೆ. ಮತ್ತೆ ಯಾವಾಗ್ಲಾದ್ರೂ ನಿನಗೆ ಹೇಳ್ತೀನೆ. ಈಗ ನನಗೆ ನಿದ್ದೆ ಬರ್‍ತಾ ಇದೆ. ನನಗಿವತ್ತು ಆಯಾಸವಾಗಿದೆ, ನಡಿ, ನಿದ್ದೆ ಮಾಡು. ಮನೆಗೆ ಬಂದು ಮೂರು ದಿನವಾಯ್ತು; ನೊಸೆ ಎದುರು ನೋಡ್ತಾ ಇರಬಹುದು."

ಬಾಬಾ ಭರ್‌ಪೂರ್‌ಸಿಂಗ್‌ನಿಗೆ ರಾತ್ರಿ ಇಡೀ ನಿದ್ದೆ ಹತ್ತಲಿಲ್ಲ. ರಾತ್ರಿಯೆಲ್ಲಾ ಯೋಚಿಸುತ್ತಿದ್ದರು. ಆದರೆ ಯಾವ ಯೋಚನೆಗೂ ಯಾವುದೇ ಪರಿಹಾರ ಸಿಗಲಿಲ್ಲ. ಲಾಯಲ್‌ಪುರ. ಅಲೀಗಢ್ ಕೆನಡಾ,...ಕೆನಡಾ. ಅಲೀಗಢ. ಲಾಯಲ್‌ಪುರ್! ಇಷ್ಟೇ ಹೊಳೆಯುತ್ತಿದ್ದವು. ಇಷ್ಟರಲ್ಲಿ ತಲೆ ಓಡುತ್ತಿತ್ತು.

ಮಾರುದಿನ ಧರ್ಮದಾಸ ಹೊಲದಿಂದ ಹಿಂದಿರುಗಿ ಬಂದು ಕೈಕಾಲು ಮುಖ ತೊಳೆದು ಅಪ್ಪನ ಎದುರಿಗೆ ಹೋಗಿ ಕುಳಿತು ಮೆಲ್ಲಗೆ, "ಅಪ್ಪಾಜಿ, ನನ್ನಪ್ಪ ಯಾರು?" ಎಂದ.

"ಯಾಕಪ್ಪ? ಏನ್ಸಮಾಚಾರ? ನಿಮ್ಮಪ್ಪನ ನೆನಪು ನಿನಗೆ ಹೇಗೆ ಮರೆತು ಹೋಯ್ತು?", ಎಂದರು.

"ಒಂದ್ವೇಳೆ, ನೀವು ನನ್ನ ಅಪ್ಪನಾದ್ರೆ ಕರ್ಮಚಂದ್ ಯಾರು?"

"ಕರ್ಮಚಂದ್! ನಿನಗೆ ಯಾರು ಹೇಳಿದರು?"

"ಇವತ್ತು ಹೊಲದ ಹತ್ರ ಧರ್ಮರಕ್ಷಾ ಸಮಿತಿಯವರು ಬಂದಿದ್ದರು. ಅವರು ನನಗೆ ಅನೇಕ ವಿಷಯ ತಿಳಿಸಿದರು."

"ಮಗು, ಇವತ್ತು ರಾತ್ರಿ ನಿನಗೆಲ್ಲಾ ಹೇಳ್ತೀನಿ. ನೀನು ಉಳಿದ ಕೆಲ್ಸಾನೆಲ್ಲಾ ಮುಗಿಸಿ ಬಿಡು ಸ್ನಾನ ಗೀನ..."

ಅಂದಿನ ರಾತ್ರಿಯಾದ ಮೇಲೆ ಧರ್ಮದಾಸ ಮೌನವಾಗಿದ್ದ. ಮನ ಕಿತ್ತು ನಂದಿಹೋದಂತೆ ಆಯಿತು. ಅವನೊಳಗೇ ಬಹಳ ಕ್ರಿಯೆಯಾಗಿ, ಇಳಿದು ಸುಸಜ್ಜಿತವಾಗಿ ಕೊನೆಗೆ ಒಡೆದೇ ಹೋಯಿತು. ಬಹಳ ದಿನಗಳವರೆಗೆ, ರಾತ್ರಿ



ನಕ್ಕೆ ಆಹ್ವಾನವಿತ್ತು. ನನ್ನಾಕೆ ವಾಹನ ಏರಲು ನಿರಾಕರಿಸಿದ ಕಾರಣ ನಡೆದು ನಡೆದು ಏದು ಬಂತು, ಗುಡ್ಡ ಇಳಿದು, ಗುಡ್ಡ ಹತ್ತಿ ಅವರ ಮನೆಗೆ ಹೋದೆವು. ಗುಪ್ತೆಯವರಿಗೆ ವಾಹನವಿತ್ತಲ್ಲ. ಗತ್ತಾಗಿ ಹೆಂಡತಿಯನ್ನು ಕೂಡಿಸಿಕೊಂಡು ಬರಲು ನಿರ್ಧರಿಸಿದ್ದರು. ಅವರ ವಾಹನವೂ ಗುಡ್ಡ ಇಳಿದು, ಹತ್ತಿ ನಮ್ಮನ್ನು ಆಹ್ವಾನಿಸಿದ್ದವರ ಮನೆಗೆ ಬಂತು. ಜಬರಾಗಿ ನಿಲ್ಲಿಸಿ, 'ಉತರೋ ಜಿ' ಎಂದರು. ಅಲ್ಲೇ ನಿಂತಿದ್ದ ನಾನು, 'ಕೌನ್ ಭಾಯಿಸ್' ಎಂದೆ. ವಾಹನ ನಿಲ್ಲುಗಡೆಗೆ ತಂದ ಗುಪ್ತೆ ಹಿಂತಿರುಗಿ ನೋಡಿ ತಬ್ಬಿಬ್ಬಾಗಿ, ಮಾತು ಬಾರದೇ ತಡವರಿಸಿದರು. ಮನೆಯಿಂದ ಹೊರಟಾಗ ವಾಹನದ ಹಿಂಬದಿ ಏರಿ ಕುಳಿತಿದ್ದ ಹೊಸ ಪತ್ನಿ 'ಗಾಯಬ್.' ಮೋಟರ್ ಸೈಕಲ್‌ನ ಶಬ್ದದಲ್ಲಿ ಏನಾಗಿದೆ ಎಂದು ಅವರಿಗೆ ತಿಳಿದಿರಲಿಲ್ಲ. ಆ ಮನೆಯಲ್ಲಿ ಹತ್ತಿದ್ದ ಪತ್ನಿ ಈ ಮನೆಗೆ ಬರುವ ವೇಳೆಗೆ ಮಾಯ ! ಪಾಪ ಗುಪ್ತೆ ಗುಡ್ಡ ಇಳಿದು, ಹತ್ತಿ ಎಂದೆನಲ್ಲ, ನನಗೆ ಅರ್ಥವಾಗಿತ್ತು. ಅವರ ಗಾಡಿ ಗುಡ್ಡ ಹತ್ತುವಾಗ ಬಹುಶಃ ಬಂದ ವೇಗದಲ್ಲಿ, ಸ್ವಲ್ಪ ಅಜಾಗರೂಕತೆಯಿಂದ ಕುಳಿತಿದ್ದ ಪತ್ನಿ ಕೆಳಗೋ ಜಾರಿ ಬಿದ್ದಿರಬೇಕು! ತಕ್ಷಣ ಆತ ಬಂದ ದಾರಿಯಲ್ಲೇ ಧಾವಿಸಿದೆವು. ಸುಮಾರು ಎರಡು ಮೂರು ಫರ್ಲಾಂಗುಗಳಷ್ಟು ಹಿಂದಕ್ಕೆ ಹೋದರೆ ಅಲ್ಲಿ, ರಸ್ತೆಯ ಬದಿಯಲ್ಲಿ, ಆ ಹೊಸ ಹೆಂಡತಿ ಬಿಕ್ಕಳಿಸುತ್ತ ಕುಳಿತಿದ್ದಾಳೆ. ಚೀರಿದಳು, ಕೂಗಿದಳು—ಕೇಳಿಸಬೇಕಲ್ಲ? ಊಹುಂ. ಗಂಡ ಗಾಡಿಯಲ್ಲಿ ಮುಂದೆ ಹೊರಟೇ ಹೋದ. ದಿಗ್ಭ್ರಮೆಯಿಂದ ಆಕೆ ರಸ್ತೆಯ ಪಕ್ಕಕ್ಕೆ ಬಂದು ಕುಳಿತಳು. ಹೊಸ ಊರು, ಹೊಸ ಜಾಗ, ಭಾಷೆ ತಿಳಿಯದು. ಇನ್ನು ಅಳುವುದಷ್ಟೇ ಆಕೆಗೆ ಉಳಿದದ್ದು. ನಂತರ ಎಲ್ಲಾ ಸರಿಹೋಯಿತು. ಅನ್ನಿ. ಆ ಘಟನೆ ನನ್ನ ಸ್ಮೃತಿಯಿಂದ ಇನ್ನೂ ಅಚ್ಚಳಿಯದೇ ಇದೆ.

ಉದಕಮಂಡಲದಿಂದ ನಾನು, ನನ್ನ ಮಿತ್ರ ಡಾ. ರಿತ್ತಿ ಧಾರವಾಡಕ್ಕೆ ಹೋದೆವು. ಇಪ್ಪತ್ತು ವರ್ಷಗಳ ಹಿಂದೆ. ರಿತ್ತಿಯವರು ಆಗಿನ್ನೂ ಬ್ರಹ್ಮಚಾರಿ. ಆದರೆ ನನಗಾಗಲೇ ಇಬ್ಬರು ಹೆಣ್ಣುಮಕ್ಕಳು. ನನ್ನ ಸಂಸಾರವನ್ನೂ ನಮ್ಮ ಸಾಮಾನುಗಳನ್ನೂ ಬಸ್ಸಿನಲ್ಲಿ ಮೈಸೂರಿನ ವರೆಗೆ ಸಾಗಿಸಬೇಕೆಂದೂ ಅಲ್ಲಿಂದ ಧಾರವಾಡಕ್ಕೆ ರೈಲಿನಲ್ಲಿ ಹೋಗಬೇಕೆಂದೂ, ಲ್ಯಾಂಬ್ರೆಟ್ಟಾವನ್ನು ಹಾಗೆಯೇ ಸಾಗಿಸಬೇಕೆಂದೂ ನಿರ್ಧರಿಸಿದೆವು. ಆಗಿನ್ನೂ ಕೆ. ಎಸ್. ಆರ್. ಟಿ. ಸಿ. ಎಂಬ ಖ್ಯಾತಿವೆತ್ತ ಸಂಸ್ಥೆ ಇರಲಿಲ್ಲ. ರಾಜಲಕ್ಷ್ಮೀ ಬಸ್ಸಿನಲ್ಲಿ ಎಲ್ಲವನ್ನೂ



ಸಾಗಿಸಿದ್ದಾಯಿತು. ನಂತರ ದಾಸಪ್ರಕಾಶ ಹೋಟೇಲಿನ ನಮ್ಮ ಮಿತ್ರರಾದ ಭಟ್ಟರು ಮತ್ತು ಉಪಾಧ್ಯಾಯರಿಂದ ಬೀಳ್ಕೊಡಲ್ಪಟ್ಟು, ಆದರೆ ಅಲ್ಲಿ ಬಿಟ್ಟ ಊಟ ಹೊಡೆದು, ನಿಧಾನವಾಗಿ ಗಾಡಿ ಚಾಲೂ ಮಾಡಿದೆವು. ಪತ್ನಿ ನಿರಾಕರಿಸಿದಂದಿನಿಂದ ನನ್ನ ಲ್ಯಾಂಬ್ರೆಟ್ಟಾಗೆ ರಿತ್ತಿಯವರೆ 'ಪಿಲಿಯನ್ ರೈಡರ್'! ಆ ವೇಳೆಗೆ ಬಸ್ ಹೊರಟು ಒಂದು ಘಂಟೆ ಕಾಲ ಆಗಿತ್ತು. ಮುಂದೆ ಹೋದವರನ್ನು ಹಿಡಿಯುತ್ತೇವೆ ಎಂಬ ಕೆಟ್ಟ ಧೈರ್ಯ. ಉಪಕಮಂಡಲದಿಂದ ಮೈಸೂರಿಗೆ ಒಂದು ನೂರು ಮೈಲುಗಳು. ಸುಮಾರು ೩೦ ಮೈಲುಗಳು ಬರುವ ವೇಳೆಗೆ ಇಂಜಿನ್ನು ತುಂಬ ಕಾದು ಹೋದ ಕಾರಣ ಅಲ್ಲೊಂದು ಕಡೆ ಇಳಿದು ಅರ್ಧ ಗಂಟೆ ಅದಕ್ಕೆ ವಿಶ್ರಾಂತಿ ಬೇರೆ ಕೊಡಬೇಕಾಯಿತು. ಬಸ್ಸು ಹೊರಟದ್ದು ೧ ಘಂಟೆಗೆ. ನಾವು ಹೊರಟಾಗ ೨ ಘಂಟೆಗೂ ಮೇಲೆ ಆಗಿತ್ತು. ಆಗಲೇ ೪ ಘಂಟೆಗಳಾಗುತ್ತ ಬಂದಿದೆ. ಈಗಿನಂತೆ ಆಗ ಕಾಡು ಕಡಿಯುವ ಕಳ್ಳ ಉದ್ಯಮಕ್ಕೆ ನಮ್ಮ ಜನ ಇನ್ನೂ ಕೈ ಹಾಕಿರಲಿಲ್ಲ. ಆದ್ದರಿಂದ ದಟ್ಟವೆನ್ನಬಹುದಾದ ಕಾಡು. ಒಂದೆರಡು ಘಂಟೆಗಳಲ್ಲಿ ಅಲ್ಲಿ





ಕತ್ತಲು ಕವಿಯುತ್ತದೆ. ಈಗ ನಮ್ಮ ಆತಂಕ ಆರಂಭವಾಯಿತು.

ಆತಂಕ ಹೆಚ್ಚಿದಂತೆಲ್ಲಾ ಗಾಡಿಯ ವೇಗವೂ ಹೆಚ್ಚುತ್ತಿತ್ತೆನ್ನಬೇಕು. ಮನಸ್ಸೆಲ್ಲಾ ಮೈಸೂರನ್ನು ಬೇಗ ಸೇರಬೇಕೆನ್ನುವದರಲ್ಲೇ ಮಗ್ನವಾಗಿತ್ತು. ಆಗಿನ ಮದರಾಸು ಮತ್ತು ಮೈಸೂರುಗಳ ನಡುವಣ ಗಡಿಯಲ್ಲೂ ಒಂದು ಚೆಕ್ ಪೋಸ್ಟ್ ಇದ್ದು ರಸ್ತೆಗೆ ಅಡ್ಡವಾಗಿ ಸ್ವಲ್ಪ ಎತ್ತರದಲ್ಲಿ ಮರದ ದಿಮ್ಮಿಯನ್ನು ಅಡ್ಡ ಹಾಕಿದ್ದರು. ಸಾಮಾನ್ಯವಾಗಿ ಅಲ್ಲಿ ಎಲ್ಲ ವಾಹನಗಳೂ ನಿಂತು ಆ ದಿಮ್ಮಿಯನ್ನು ಮೇಲೆತ್ತಿ ಮುಂದಕ್ಕೆ ಕಳುಹಿಸುತ್ತಿದ್ದರು. ಅಲ್ಲಿಯೇ ರಸ್ತೆಯಲ್ಲಿ ಮದರಾಸಿನ ಕಡೆ ಒಂದು ತಿರುವೂ ಇದೆ. ನಾವು ಜೋರಾಗಿ ಬರುತ್ತಿದ್ದೆವು. ಆ ಅಡ್ಡ ದಿಮ್ಮಿಯನ್ನು ನಾನು ಗಮನಿಸಲೇ ಇಲ್ಲ. ಆದರೆ ಅಲ್ಲಿದ್ದ ಕಾವಲುಗಾರ ನಮ್ಮ ಹುಚ್ಚನ್ನು ಗಮನಿಸಿದ. ೨–೩ ನಿಮಿಷಗಳಲ್ಲಿ ನಾವು ಅದನ್ನು ದಾಟಬೇಕು. ನಿಲ್ಲುವ ಲಕ್ಷಣಗಳೇ ಇಲ್ಲ. ವೇಗವೂ ಕಡಿಮೆ ಆಗಲಿಲ್ಲ. ಭೂತದರ್ಶನವಾದಂತಾಯಿತೇನೋ! ಆ ಕಾವಲುಗಾರ ಇದ್ದಕ್ಕಿದ್ದಂತೆ ಆ ಅಡ್ಡ ತೊಲೆಯನ್ನು ಕ್ಷಣಾರ್ಧದಲ್ಲಿ ಮೇಲೆತ್ತಿ ಬಿಟ್ಟ. ಆಗಲೇ ನನಗರಿವಾದದ್ದು.

ಮಾತ್ರದ ಅಘಾತದಿಂದ ಪಾರಾದೆವೆಂದು. ಆತ ಹಾಗೆ ಮಾಡದಿದ್ದರೆ ಆ ತೊಲೆಗೆ ನಮ್ಮ ಲ್ಯಾಂಬ್ರೆಟ್ಟಾ ಢಿಕ್ಕಿ ಹೊಡೆದು...... ದೇವರೇ ಯೋಚಿಸಲೂ ಅಸಾಧ್ಯ. ಆ ಕ್ಷಣ ಆ ಕಾವಲುಗಾರ ದೇವದೂತನಂತೆ ಕಾಣಿಸಿದ್ದ. ಸ್ವಲ್ಪ ಮುಂದೆ ಹೋಗಿ ಗಾಡಿ ನಿಲ್ಲಿಸಿದೆ. ನಮ್ಮ ಬಾಯಿ ಬಿದ್ದು ಹೋಗಿತ್ತು. ಆತನ 'ಸಹಸ್ರನಾಮ'ವನ್ನು ತೆಪ್ಪಗೆ ಕೇಳಿಸಿಕೊಂಡರೂ, ಮನಸಲ್ಲಿ, ಸ್ವಲ್ಪ ಕಾಲದ ಬಳಿಕ ಕೃತಜ್ಞಾಪೂರ್ವಕವಾಗಿ ಬಾಯಿಂದಲೂ, 'ಸದಕ್ಷಿಣ' ವಂದನೆಗಳನ್ನು ಸಲ್ಲಿಸಿದೆವು. ಅಲ್ಲೇ ಅರ್ಧ ಘಂಟೆ ಕುಕ್ಕರಿಸಿದೆವು. ಮುಂದಿನದು ಇಲ್ಲಿ ಸಲ್ಲ!

ಧಾರವಾಡದ ಎರಡು ಘಟನೆಗಳು. ಅಲ್ಲಿಗೆ ಹೋದ ಹೊಸದರಲ್ಲಿ ಮಾಳಮಡ್ಡಿಯಲ್ಲಿ ಕೆಲ ದಿನಗಳ ವಾಸ. ಅಲ್ಲಿಂದ ವಿಶ್ವವಿದ್ಯಾಲಯಕ್ಕೆ ಗೋಪಾಲಪುರದ ಮೂಲಕ ಅಲ್ಲಿದ್ದ ಕಾಲುವೆಗೆ ಹಾಕಿದ್ದ ಸಣ್ಣ ಸೇತುವೆ ದಾಟಿ ಸಪ್ತಾಪುರದ ರಸ್ತೆ ಸೇರಬೇಕು. ಆ ಸೇತುವೆಯ ಪಕ್ಕಕ್ಕೆ ಮೂರು ಉದ್ದನೆಯ ಕಂಬಗಳನ್ನು ನೆಟ್ಟಿದ್ದರು. ವಾಹನಗಳು ಹೋಗದಿರಲೆಂದೋ ಏನೋ! ಆದರೂ ಅಲ್ಲಿದ್ದಿರಬಹುದಾದ ನಾಲ್ಕನೆಯ ಕಂಬವನ್ನು ಯಾರೋ 'ಷಾರ್ಟ್‌ಕಟ್'ಗಾಗಿಯೋ ಕಿತ್ತಿರಬೇಕು. ನಾವೂ ಅಲ್ಲಿಯೇ ನುಗ್ಗುತ್ತಿದ್ದೆವು. ಅಲ್ಲಿಗೆ ಬಂದಾಗ ಜಾಗರೂಕತೆಯಿಂದಲೇ ಆ ಜಾಗದಲ್ಲಿ ತೂರಿ ಹೋಗುತ್ತಿದ್ದೆವು. ಹಿಂದುಗಡೆ ಕುಳಿತಿರುತ್ತಿದ್ದ ನನ್ನ 'ಕಂಡಕ್ಟರ್' ಯಾವಾಗಲೂ ಎಚ್ಚರಿಕೆ ನೀಡುತ್ತಲೇ ಇರುತ್ತಿದ್ದರು. 'ಮುಂದೆ ನೋಡ್ರಿ' 'ಪಕ್ಕದಲ್ಲಿ ರಾಡಿ', 'ಹೌರಗ್ರಿ' ಇತ್ಯಾದಿ ಕಾಮೆಂಟರಿ ನಡೆಯುತ್ತಲೇ ಇರುತ್ತಿತ್ತು. ಒಂದು ದಿನ ಎಂದಿನಂತೆ ಆ ಜಾಗಗೆ ಬಂದೆವು. ಇನ್ನೇನು ಆ ಸಂದಿನಲ್ಲಿ ತೂರಬೇಕು ಎನ್ನುವಾಗ ಕಂಡಕ್ಟರ ಎಚ್ಚರಿಕೆಯ ಕೂಗು— ಯಾವದೋ ಗಮನದಲ್ಲಿದ್ದ ನನ್ನ ಸಮತೋಲನ ತಪ್ಪಿತು. ಏನಾಯಿತು ಎಂದು ತಿಳಿಯುವ ಮೊದಲೇ ಗಾಡಿ ಕಂಬಗಳ ಪಕ್ಕದಲ್ಲಿ ಹಾದು ಕಾಲುವೆಯಲ್ಲಿ ಬಿದ್ದಿತ್ತು: 'ನಾವು ಬಿದ್ದೆವು' ಎಂದೇನೂ ಬೇರೆಯಾಗಿ ಹೇಳಬೇಕಾಗಿಲ್ಲವಲ್ಲ. ಆದರೆ ಅಷ್ಟೇ ಅಲ್ಲ. ನಮ್ಮ ಬಟ್ಟೆಗಳು ಹೊಲಸಾಗಿ ಅಸಹ್ಯವಾದವು. ಕಾಲೇಜಿನ ಸಮಯ. ಹುಡುಗರು ಗುಂಪು ಗುಂಪಾಗಿ ಅದೇ ಮಾರ್ಗದಲ್ಲಿ ಬರುತ್ತಿದ್ದ ವೇಳೆ. ಆ ವರ್ಷಗಳಲ್ಲಿ ಕಾಲೇಜಿನ, ಅದರಲ್ಲೂ ವಿಶ್ವವಿದ್ಯಾಲಯದ, ಅಧ್ಯಾಪಕರಿಗೆ, ಆ ಊರಲ್ಲಿ ಹೆಚ್ಚಿನ ಗೌರವ ಇರುತ್ತಿತ್ತು (ಸಾಕಷ್ಟು ಉದ್ದರಿ ಸಿಗುತ್ತಿದ್ದುದೇ ಅದಕ್ಕೆ ಸಾಕ್ಷಿ). ಹುಡುಗರ ಮುಂದೆ ಅವಮಾನವಾಗತ್ತಲ್ಲ ಎಂದು ಆತಂಕ. ಹಿಂದುಗಡೆ ಬರುತ್ತಿದ್ದ ಗೌಡಪ್ಪನೊಬ್ಬನ ನೆರವಿನಿಂದ ಗಾಡಿ ಮೇಲಕ್ಕೆತ್ತಿ ಯಾರೂ ನೋಡಿಲ್ಲ – ಗುರುತಿಸಿಲ್ಲ– ಎಂಬ ನಂಬಿಕೆಯಿಂದ ಮನೆಗೆ ಕೂಡಲೇ ಹಿಂತಿರುಗಿದೆವು. ಆದರೆ ಒಂದು ಘಂಟೆಯ ಬಳಿಕ ವಿಶ್ವವಿದ್ಯಾಲಯಕ್ಕೆ ಹೋದಾಗ ಅಲ್ಲೊಬ್ಬರು, 'ಯಾಕ್ರೀ ಸಾಹೇಬ್ರೇ, ಹೆಂಗ ಬಿದ್ರಲ್ಲಾ, ಪೆಟ್ಟಾಗಲಿಲ್ವಾ?' ಎಂದು ಕೇಳಬೇಕೆ ?

ಇನ್ನೊಮ್ಮೆ—ಅದೇ ಮಾಳಮಡ್ಡಿ; ಯಾವದೋ ಮನೆಗೆ, ಎಂದಿನಂತೆ ಇಬ್ಬರೂ ಹೊರಟ



"ವರ ನೀಡು ಕರಬರಾಹು ಮಂಡಳಯಲ್ಲದ್ದಾನೆ."

ದ್ದೆವು. ಕಮಲಾಪುರದ ದವಾಖಾನೆಯ ಪಕ್ಕದ ರಸ್ತೆಯಲ್ಲಿ ಮೇಲೇರಿ ರಾಘವೇಂದ್ರ ಮಠದ ಕಡೆಗೆ ಬರುವ ವೇಳೆಗೆ ಅಲ್ಲಿದ್ದ ಗೂಳಿಯೊಂದು ಇದ್ದಕ್ಕಿದ್ದಂತೆ ನಮ್ಮ ಕಡೆ ತಿರುಗಿ ಗುಟುರು ಹಾಕಿ ನೆಗೆಯಿತು. ವೇಗ ಹೆಚ್ಚಿಸಿದೆ. ನನ್ನ ಪಿಲಿಯನ್ ರೈಡರ್ 'ಹಿಂದೇನೇ ಬಂತ್ರೀ' 'ಆ ಪಕ್ಕಕ್ಕೆ ಹೋಗ್ರಿ' 'ಇನ್ನೊಂದು ರಸ್ತೆ ಹಿಡಿರೀ' ಎಂದರು. ಎಡಕ್ಕೆ ಹೊರಳಿದೆ. ಹಿಂದೆ ಗೂಳಿ, ಸ್ವಲ್ಪ ದೂರ ಹೋಗಿ ಮತ್ತೆ ಎಡದ ರಸ್ತೆ, ಹಿಂದೆ ಗೂಳಿ! ಬಲಕ್ಕೆ ಮತ್ತೊಂದು ರಸ್ತೆಗೆ ತಿರುಗಿದರೂ ಹಿಂದೆಯೇ ಗೂಳಿ. ಸರಿ, ದೇವರ ಧ್ಯಾನಕ್ಕೆ ಆರಂಭ. ಮತ್ತೆ ಎಡ, ಮತ್ತೆ ಬಲ. ಐದನೆಯ ತಿರುವು ತಿರುಗುವ ವೇಳೆಗೆ ಸದ್ಯ ಆ ಗೂಳಿ ನಮ್ಮನ್ನು ಬಿಟ್ಟು ಕೊಟ್ಟಿತ್ತು. ಅದಕ್ಕೇನಾಗಿತ್ತೋ ನಾನು ಕಾಣೆ. ಆದರೆ ಆ ಇಕ್ಕಟ್ಟಾದ ರಸ್ತೆಯ ಬದಿಯ ಮನೆಗಳವರಿಗಂತೂ ನಮಗೆ ಹುಚ್ಚು ಹಿಡಿದಿರುವುದು ಖಾತ್ರಿ ಎನಿಸಿತ್ತೇನೋ, ಆ ವೇಗ, ಆ ಗಾಬರಿ ನೋಡಿ. ಬಚಾವಾದೆವು ಅಂತ ದೃಢಪಡಿಸಿಕೊಂಡು, ಆ ಪ್ರದೇಶ ಬಿಟ್ಟು, ದೂರದಲ್ಲಿನ ಇನ್ನೊಬ್ಬ ಮಿತ್ರನ ಮನೆಗೆ ಹೋಗಿ, 'ವಾರಿ' ತೊಳೆದು, ನೀರು ಕುಡಿದು, ದಣಿವಾರಿಸಿಕೊಂಡರೂ ನಮ್ಮ ಎದೆಯ ಡಬ್ ಡಬ್‌ನ ವೇಗ ಕಡಿಮೆಯಾಗಿಯೇ ಇರಲಿಲ್ಲ, ಇದು ಏಕಾಯಿತು? ವೇಗ ಕಡಿಮೆಯಾಗಿರಲಿಲ್ಲ. ಇದು ಏಕಾಯಿತು? ಈಗಲೂ ಅರ್ಥವಾಗಿಲ್ಲ. ದೈವಪರೀಕ್ಷೆ ಅಂಬೋಣವೇ?

ಆ ಲ್ಯಾಂಬ್ರೆಟ್ಟಾ ಈಗ ನನ್ನ ಬಳಿ ಇಲ್ಲ. ಅದು ಹೋಗಿ ಮತ್ತೊಂದು ಬಂತು. ಅದನ್ನೂ ನಾನು ಬಳಸಬಾರದು ಎಂದು ಡಾಕ್ಟರ ಆದೇಶದ ಕಾರಣದಿಂದ ಅಳಿಯಂದಿರಿಗೆ ಸಾಗ ಹಾಕಿದೆ. ತುಂಬಾ ತೊಂದರೆ ಕೊಡುತ್ತಿತ್ತು ಎಂಬುದು ಈಗಲೂ ಮಗಳು ಅಳಿಯಂದಿರ ಕುತೂಹಲದ ಪ್ರಶ್ನೆ.

ಇನ್ನೊಂದು ಘಟನೆಯನ್ನು ನಿರೂಪಿಸಿ ವಿರಮಿಸುತ್ತೇನೆ. ಇದು ಲ್ಯಾಂಬ್ರೆಟ್ಟಾ ಘಟನೆ ಅಲ್ಲ. ಇತ್ತೀಚೆಗೆ ಕಳೆದ ಏಪ್ರಿಲ್‌ನಲ್ಲಿ (ಏಪ್ರಿಲ್ ೨೫ ಅನ್ನುತ್ತಿದ್ದಾಳೆ ನನ್ನ Record-keeper)



ನನ್ನ ಕೊನೆಯ ತಮ್ಮ ಜಯಕುಮಾರ ಸಂಸಾರದೊಂದಿಗೆ ಸೋಮನಾಥಪುರಕ್ಕೆ ಹೋಗಿ ಅನಿರೀಕ್ಷಿತವಾಗಿ ಸಂಜೆ ಬಂದಿಳಿದ. ಅವನು ಬರೆದ ಕಾಗದ ಅವನು ಇಲ್ಲಿಂದ ಹಿಂದಿರುಗಿದ ದಿನ ಅವನ ಕೈಗೇ ಬಂತು, ಎಂಬುದು ನಮ್ಮ ಅಂಚೆ ಇಲಾಖೆಯ ವ್ಯವಸ್ಥೆಯ ನಿದರ್ಶನ. ಎರಡು ದಿನಗಳಿದ್ದ. ಬಿಳಿಗಿರಿ ರಂಗನ ಜಾತ್ರೆಯ ಸಮಯ. ಅಲ್ಲಿಗೆ ಹೋಗಿ ಬರಲು ಉದ್ದೇಶಿಸಿದೆವು. ಬಾಡಿಗೆ ಕಾರು ನಮ್ಮ ಕೈಗೆಟುಕದಷ್ಟು ದುಬಾರಿ. ಬಸ್ಸಿನಲ್ಲಿ ಇಲ್ಲಿಂದ ಹೊರಟಾಗ ಆಗಲೇ ೧೧ ಘಂಟೆಯಾಗಿತ್ತು. ಮೊದಲು ಚಾಮರಾಜನಗರಕ್ಕೆ ಅಲ್ಲಿಂದ ಮತ್ತೊಂದು ಬಸ್ಸಿನಲ್ಲಿ ಬೆಟ್ಟಕ್ಕೆ. ಆ ಬಸ್ ಆಗಲೇ ಜನರಿಂದ ಕಿಕ್ಕಿರಿದಿತ್ತು. ಚಾಲಕನ ಪಕ್ಕದಲ್ಲೇ, ನಾನು, ಕುಮಾರ ನಿಂತೆವು. ಉಳಿದವರು ಒಳಗೆ ಸೇರಿಕೊಂಡರು. ಗಾಡಿ ಹೊರಟ ಸ್ವಲ್ಪ ಸಮಯದ ನಂತರ ಬೆಟ್ಟದ ಹಾದಿ ಹಿಡಿದು ಏರತೊಡಗಿತು. ಮಳೆ ಇಲ್ಲದ್ದರಿಂದ ಒಣಗಿದ ಬೋಳು ಮರಗಳ ಕಾಡು ಒಂದು ಕಡೆ, ಕಣಿವೆ ಇನ್ನೊಂದು ಕಡೆ. ಇನ್ನೂ ಮೇಲೇರಿತು. ಈಗ ಎರಡೂ ಕಡೆ ಕಾಡು. ಮಳೆ ಬಾರದ್ದುದರ ಪ್ರಸ್ತಾಪ ಮಾಡುತ್ತಲೇ ಇದ್ದ ಚಾಲಕ. 'ನಮ್ಮದು ಹಾಗಿರಲಿ,

ಕಾಡಲ್ಲಿ ಪ್ರಾಣಿಗಳೂ ನೀರಿಲ್ಲದೇ ಪರದಾಡುತ್ತಿವೆ ಸಾರ್,' ಎಂದ. ಸ್ವಲ್ಪ ಹೊತ್ತಿನ ಬಳಿಕ ಮೆಲ್ಲನೆ 'ಸಾರ್, ಆನೆ ನೋಡಿ' ಎಂದ. ಬಲಗಡೆಗೆ ಗೋಣು ತಿರುಗಿಸಿದೆ. ದೊಡ್ಡದೊಂದು ಹೆಣ್ಣಾನೆ ಠೀವಿಯಿಂದ ಬರುತ್ತಿದೆ. ಪಕ್ಕದಲ್ಲೇ ಮುದ್ದು ಮುದ್ದಾದ ಮರಿ. 'ಗಲಾಟೆ ಮಾಡೋದು ಬೇಡ ಸರ್.' ಎಂದು ಹೇಳಿ ಬಸ್ಸನ್ನೂ ನಿಲ್ಲಿಸಿದ. ಆನೆ ಗಂಭೀರವಾಗಿ ಬಲಗಡೆ ಗಿಡಗಳ ಮರೆಯಿಂದ ರಸ್ತೆಗೆ ಬಂತು. ಬಸ್ಸಿನಲ್ಲಿ ಕಿಕ್ಕಿರಿದಿದ್ದ ಜನ, ಮುಂದೆ ಚ್ಯಾಸಿಸ್ ಬಳಿ ಇದ್ದವರು, ನೋಡಿದ ಕೂಡಲೇ ಹೆದರಿದಂತೆ ಕಾಣುತ್ತದೆ. ಒಬ್ಬಾತ ಗಟ್ಟಿಯಾಗಿ, 'ವೆಂಕಟರಮಣ ಸ್ವಾಮಿ ಗೋವಿಂದೋ ಗೋವಿಂದಾ' ಎಂದ. ಅವನು 'ಗೋವಿಂದಾ,' ಎನ್ನುವ ವೇಳೆಗೆ ಇತರರೂ ಅವನೊಂದಿಗೆ ಧ್ವನಿಗೂಡಿಸಿದರು. 'ಸೂಳೇ ಮಕ್ಕಳಾ' ಎಂದ ಡ್ರೈವರ್. ದೊಡ್ಡ ಹೆಣ್ಣಾನೆ, ಇದ್ದಕ್ಕಿದ್ದಂತೆ ಬಹುಶಃ ಈ ರವದಿಂದ ಬೆಚ್ಚಿ, ಎಡಕ್ಕೆ ತಿರುಗಿತು. ಕೆಂಪು ಬಸ್! ಅದಕ್ಕೆ ತನ್ನ ಮಗುವಿನ ರಕ್ಷಣೆ ಮುಖ್ಯವಾಗಿತ್ತು. ಈಗ ಅದಕ್ಕೆ ಧಕ್ಕೆ ಉಂಟಾಯಿತೆನಿಸಿತೆನೋ– ಎರಡು ಹೆಜ್ಜೆ ಮುಂದೆ ಬಂದು ಸೊಂಡಿಲು ಮೇಲಕ್ಕೆತ್ತಿ ಘಟ್ಟಿಯಾಗಿ ಘೀಳಿಟ್ಟಿತು. ಚಾಲಕನ ಕೈಕಾಲುಗಳು ನಡುಗತೊಡಗಿದವು. "ಮುಗೀತು ಸಾರ್, ಮುಗೀತು ಸಾರ್, ಸೂಳೇ ಮಕ್ಕಳು," ಎಂದು ತೊದಲಿದ. ನನ. ನನ್ನ ತಮ್ಮನ, ಇತರರ ಪರಿಸ್ಥಿತಿ ಶೋಚನೀಯನ್ನು ಆ ಬಿಸಿಲಿನಲ್ಲಿ, ಜನ ತುಂಬಿದ್ದ ಬಸ್ಸಿನಲ್ಲಿ. ನನ್ನ ಕೈಕಾಲುಗಳು ತಣ್ಣಗಾದಂತೆನಿಸಿತು. ಆನೆ ಇನ್ನೊಂದು ಹೆಜ್ಜೆ ಮುಂದೆ ಬಂದು. ಆದರೆ ಬಿಳಿಗಿರಿರಂಗ ಕೃಪೆ ಮಾಡಿದನೇನೋ ಎಂಬಂತೆ, ಅಷ್ಟರಲ್ಲಿ ಆನೆಗೆ ಅದರ ಮರಿಯು ನೆನಪಾಗಿ ಹಿಂದಕ್ಕೆ ತಿರುಗಿತು. ಆ ಮರಿ ಏನೂ ಆಗದಿದ್ದಂತೆ ರಸ್ತೆ ದಾಟ ನೇರವಾಗಿ ಎಡ ಭಾಗದ ಗಿಡಗಳೊಳಗೆ ನುಸುಳಿತು. ಮಗು ಸುರಕ್ಷಿತ ಎನಿಸಿರಬೇಕು ಆನೆಗೆ. 'ಹೋಗ್ರೋ ಬಡ್ಡೀ ಮಕ್ಕಳಾ,' ಎಂದುಕೊಂಡಿರಬೇಕು. ತಾನೂ ಹೆಜ್ಜೆ ಹಿಂದೆ ಇಟ್ಟು ಬಲಕ್ಕೆ ತಿರುಗಿ ಮರಿಯನ್ನು ಹಿಂಬಾಲಿಸಿತು. ಎಲ್ಲಾ ಕ್ಷಣಗಳಲ್ಲಿ ನಡೆದ ಘಟನೆ. ಆ ಮರಿ ಆನೆ ರಸ್ತೆಗೇ, ತಾಯಿಯ ಹಿಂದೆ ಬಂದಿದ್ದರೆ ನಮ್ಮ ಗತಿ ಏನಾಗುತ್ತಿತ್ತೋ! ಚಾಲಕ ಚೇತರಿಸಿಕೊಂಡ. ವಾಹನ ಚಲಾಯಿಸಿದ. "ನಾನು ಎಷ್ಟೋ ಸಲ ಈ ರಸ್ತೆಗಳಲ್ಲಿ ಆನೆಗಳನ್ನು ನೋಡಿದ್ದೇನೆ ಸರ್, ಆದರೆ ಆನೆ ಛಾಲೇಂಜ್ ಮಾಡಿದ್ದು ಇದೇ ಮೊದಲು ಸರ್. ದೇವರು ದೊಡ್ಡವನು ಸರ್," ಎಂದೆಲ್ಲಾ ಹೇಳುತ್ತಾ ಗಮ್ಯ ಸ್ಥಾನ ಸೇರಿದ. ನಾವೂ ಉಸಿರು ಬಿಟ್ಟು 'ಗೋವಿಂದೋ ಗೋವಿಂದಾ' ಎಂದೆವು. ನನ್ನ ತಮ್ಮ ಚಾಲಕನಿಗೆ ಬಹುಮಾನ ನೀಡಿದ. ✡



ಇದಂ ಕೃತಮಿದಂ ಕಾರ್ಯಮಿದಮನ್ಯತ್ ಕೃತಾಕೃತಂ ।
ಏವಮೀಹಾಸಮಾಯುಕ್ತಂ ಕೃತಾಂತಃ ಕುರುತೇವಶೇ ॥

ಇದನ್ನು ಮಾಡಿದ್ದೇನೆ, ಇದನ್ನು ಮಾಡಬೇಕು, ಈ ಮತ್ತೊಂದು ಸ್ವಲ್ಪ ಮಾಡಿದೆ, ಇನ್ನೂ ತುಸು ಮಾಡಬೇಕು ಎಂಬ ಆಶೆಯಿಂದ ಕೂಡಿರುವವನನ್ನು ಮೃತ್ಯು ತನ್ನ ವಶಕ್ಕೆ ತೆಗೆದುಕೊಳ್ಳುತ್ತದೆ.

—ಸುಭಾಷಿತ

# ಚೌಚಿಲ್ಲಾವನ್ನು ನಡುಗಿಸಿದ ಘಟನೆ

ಮೂಲ : **ಜೋಸೆಫಾ ಬ್ಲೇಂಕ್**
ಅನುವಾದ : **ಭಾರತಿ**

೧೯೭೬ನೆಯ ಜುಲೈ ೧೫ನೆಯ ತಾರೀಖು. ಸಾಯಂಕಾಲ ಐದು ಘಂಟೆಯಾದರೂ ಕೆಲಿಫೋರ್ನಿಯದ ಚೌಚಿಲ್ಲಾದಲ್ಲಿರುವ ಡೈರಿಲ್ಯಾಂಡ್ ಎಲಿಮೆಂಟರಿ ಸ್ಕೂಲಿನಲ್ಲಿ ಓದುತ್ತಿದ್ದ ತನ್ನ ಹದಿನಾಲ್ಕು ವರ್ಷದ ಮಗ ಮೈಕ್ ಸ್ಕೂಲಿನಿಂದ ಹಿಂದಿರುಗದಿದ್ದುದನ್ನು ಕಂಡು ಕ್ಯಾರೋಲ್ ಮಾರ್ಶಲ್ ತುಂಬ ವಿಹ್ವಲಳಾದಳು.

೫-೩೦ಕ್ಕೆ ಸ್ಕೂಲಿಗೆ ಟೆಲಿಫೋನ್ ಮಾಡಿ ವಿಚಾರಿಸಿದಾಗ ಮೈಕ್ ಎಂದಿನಂತೆ ಸ್ಕೂಲ್ ಬಸ್ಸಿನಲ್ಲಿ ತನ್ನ ಮನೆಯ ಕಡೆ ಹೊರಟಿದ್ದನೆಂದು ತಿಳಿಯಿತು. "ಬಸ್ಸು ಎಲ್ಲಾದರೂ ಕೆಟ್ಟು ಹೋಗಿರಬಹುದು ವಿಚಾರಿಸಿ ತಿಳಿಸುತ್ತೇನೆ" ಎಂದು ಸ್ಕೂಲ್ ಸೆಕ್ರೆಟರಿ ಹೇಳಿದಳು.

ಬಸ್ಸಿಗೆ ಅಪಘಾತವಾಗಿದ್ದರೆ ಎಂದು ಕಳವಳ ಪಡುತ್ತಾ ಕ್ಯಾರೋಲ್ ತನ್ನ ಮನೆಯಿಂದ ಮಗನನ್ನು ಹುಡುಕಲೆಂದು ಕಾರಿನಲ್ಲಿ ಹೊರಟಳು.

ಶೆರೀಫ್ ಎಡ್ ಬೇಟ್ಸ್ ಸ್ಕೂಲ್ ಬಸ್ಸಿಗಾಗಿ ತನಿಖೆ ನಡೆಸುತ್ತಿದ್ದ. ಬಸ್ಸಿನಲ್ಲಿದ್ದ ಮಕ್ಕಳ ತಂದೆ ತಾಯಿಗಳಿಂದ ಚೌಚಿಲ್ಲಾ ಪೋಲೀಸ್ ಸ್ಟೇಶನ್ನಿಗೆ ಒಂದೇ ಸಮನೆ ಕರೆ ಬರುತ್ತಿತ್ತು. ರಸ್ತೆಯಲ್ಲಿ ಹೋಗುತ್ತಿದ್ದ ಹಲವಾರು ಕಾರು ಮತ್ತು ಟ್ರಕ್ ಡ್ರೈವರುಗಳು ದಾರಿಯಲ್ಲೆಲ್ಲಾದರೂ ಸ್ಕೂಲ್ ಬಸ್ಸು ಕಾಣಿಸಿಗುತ್ತದೆಯೊ ಎಂದು ತಲೆ ಹೊರಗೆ ಹಾಕಿ ನೋಡುತ್ತಿದ್ದರು.

ನಗರದಿಂದ ದಕ್ಷಿಣಕ್ಕೆ ಸುಮಾರು ೮ ಕಿ. ಮೀಟರ್ ದೂರದ ಕಣಿವೆಯೊಂದರಲ್ಲಿ ಸ್ಕೂಲ್ ಬಸ್ಸೊಂದು ಕಾಣಿಸುತ್ತಿದೆಯೆಂದು ಒಬ್ಬ ಪೈಲೆಟ್ ಸುದ್ದಿ ತಿಳಿಸಿದ. ಕೂಡಲೆ ಶೆರೀಫ್ ಬೇಟ್ಸ್ ಆ ಸ್ಥಳಕ್ಕೆ ಹೊರಟ.

ಅಲ್ಲೊಂದು ಖಾಲಿ ಬಸ್ಸು ನಿಂತಿತ್ತು. ರಸ್ತೆ ಬಿಟ್ಟು ೩೦ ಮೀಟರ್ ದೂರದಲ್ಲಿರುವ ಸುಮಾರು ನಾಲ್ಕೂವರೆ ಮೀಟರ್ ಎತ್ತರ ಬೆಳೆದಿದ್ದ ಬಿದಿರುಗಳ ಮಧ್ಯೆ ಆ ಬಸ್ಸನ್ನು ಅಡಗಿಸಲಾಗಿತ್ತು. ಬಸ್ಸು ದೊರೆತ ಸಮಾಚಾರ ತಿಳಿದೊಡನೆ ಪೋಲೀಸರು ಮಕ್ಕಳ ತಾಯಂದಿರು ಮತ್ತು ಇತರರು ಆ ಸ್ಥಳಕ್ಕೆ ಧಾವಿಸಿದರು. ಶೆರೀಫ್ ಬೇಟ್ಸ್ ಬಸ್ಸಿನೊಳಗೆ ನೋಡಿದಾಗ ಆತನಿಗೆ ಅಲ್ಲಿ ಮಕ್ಕಳ ಸ್ನಾನದ ಉಡುಗೆ ಟವೆಲ್, ಪುಸ್ತಕ, ನೋಟ್‌ಪುಸ್ತಕ ಮೊದಲಾದವುಗಳು ಕಾಣಿಸಿಕ್ಕಿದುವು. ಬಸ್ಸಿನ ಹೊರಗೆ ಮಾತ್ರ ಮಕ್ಕಳ ಹೆಜ್ಜೆಯ ಗುರುತುಗಳಿರಲಿಲ್ಲ. ಆದರೆ ಹತ್ತಿರವೇ ಯಾವುದೋ ಒಂದು ವಾಹನವನ್ನು ತಂದು ನಿಲ್ಲಿಸಿದಂತೆ ಟಯರಿನ ಗುರುತುಗಳು ಕಾಣಿಸುತ್ತಿದ್ದುವು.

ಸ್ಕೂಲ್ ಬಸ್ಸಿನಿಂದ ಒಟ್ಟು ೨೬ ಮಂದಿ ವಿದ್ಯಾರ್ಥಿಗಳು ಕಾಣೆಯಾಗಿದ್ದರು. ಅವರಲ್ಲಿ ೧೯

(ಆಧಾರ : ರೀಡರ್ಸ್ ಡೈಜೆಸ್ಟ್)



ಹುಡುಗಿಯರು ಮತ್ತು ಏಳು ಹುಡುಗರು ಅವರೆಲ್ಲಾ ೫ ರಿಂದ ೧೪ ವರ್ಷಗಳ ವಯಸ್ಸಿನವರಾಗಿದ್ದರು. ಎಲ್ಲ ಸಾಮಾನ್ಯ ಕುಟುಂಬದವರೆ. ೫೫ ವರ್ಷ ಪ್ರಾಯದ ಡ್ರೈವರ್ ಎಡ್ವರ್ಡ್ ರೇ ಪ್ರಾಮಾಣಿಕ ನಂಬಿಕಸ್ತ. ಈ ಸಮಾಚಾರವನ್ನೆಲ್ಲಾ ಸಂಗ್ರಹಿಸಿದ ಜೇಟ್ಸ್ ಮಕ್ಕಳನ್ನು ಡ್ರೈವರನನ್ನೂ ಯಾರೋ ಭಯಪಡಿಸಿ ಬಲಾತ್ಕಾರದಿಂದ ಕರೆದು ಕೊಂಡು ಹೋಗಿರಬಹುದೆಂದು ಖಚಿತಪಡಿಸಿಕೊಂಡ.

●

ಆ ದಿವಸ ೩-೫೦ಕ್ಕೆ ಒಟ್ಟು ೩೧ ಮಂದಿ ವಿದ್ಯಾರ್ಥಿಗಳು ರೇನ ಬಸ್ಸಿನಲ್ಲಿ ಹತ್ತಿ ಕುಳಿತಿದ್ದರು. ಅವರಲ್ಲಿ ಕೆಲವರು ಈಜುಡುಪಿನಲ್ಲಿಯೇ ಬಸ್ಸಿಗೆ ಹತ್ತಿದ್ದರು. ಸಾಮಾನ್ಯ ೨೦ ನಿಮಿಷ ಬಸ್ಸು ನಡೆಸಿದ ರೇ ೫ ಮಂದಿ ಮಕ್ಕಳನ್ನು ಅವರ ಮನೆ ಬಳಿ ಇಳಿಸಿದ್ದ. ಅನಂತರ ಬಸ್ಸು ಮುಂದಕ್ಕೆ ನಡೆಸುತ್ತಾ ಅವೆನ್ಯೂ ೨೧ನೇ ರಸ್ತೆಗೆ ತಿರುಗಿದ್ದ. ಅಲ್ಲಿಂದ ನೂರು ಮೀಟರ್ ದೂರದಲ್ಲಿ ಅವನಿಗೊಂದು ಬಿಳಿ ಬಣ್ಣದ ಚಿಕ್ಕ ಬಸ್ಸು ನಿಂತಿರುವುದು ಕಾಣಿಸಿತು.

ಸ್ಕೂಲ್ ಬಸ್ಸು ಆ ಚಿಕ್ಕ ಬಸ್ಸಿನ ಬಳಿ ಬಂದೊಡನೆ ಮುಸುಕು ಹಾಕಿದ ವ್ಯಕ್ತಿಯೊಬ್ಬ ಒಂದು ಕೈಯಲ್ಲಿ ಪಿಸ್ತೂಲನ್ನೂ ಇನ್ನೊಂದು ಕೈಯಲ್ಲಿ ನಳಿಗೆ ಕತ್ತರಿಸಿದ ಕೋವಿಯನ್ನು ಹಿಡಿದುಕೊಂಡು ರಸ್ತೆಯಲ್ಲಿ ಸ್ಕೂಲ್ ಬಸ್ಸಿಗೆದುರಾಗಿ ಬಂದು ನಿಂತ. ಭಯಗೊಂಡ ರೇ ತಕ್ಷಣ ಬ್ರೇಕ್ ಒತ್ತಿ ತನ್ನ ಬಸ್ಸನ್ನು ನಿಲ್ಲಿಸಿದ. ಕೂಡಲೇ ಮುಸುಕು ಧರಿಸಿದ ಆ ವ್ಯಕ್ತಿ ಡ್ರೈವರನ ಕಿಟಕಿ ಬಳಿ ಬಂದು



"ಬಾಗಿಲು ತೆರೆ" ಎಂದು ಗದರಿಸಿದ. ರೇ ಬಾಗಿಲು ತೆರೆಯಲು ಮತ್ತಿಬ್ಬರು ಮುಸುಕು ಧರಿಸಿದ ವ್ಯಕ್ತಿಗಳು ಆ ಚಿಕ್ಕ ಬಸ್ಸಿನಿಂದ ಕೆಳಗಿಳಿದು ಸ್ಕೂಲ್ ಬಸ್ಸಿನ ಒಳಗೆ ಬಂದರು.

ಮಕ್ಕಳೆಲ್ಲಾ ಬಸ್ಸನ್ನೇರಿದ ಆ ಮುಸುಕಿನ ವ್ಯಕ್ತಿಗಳನ್ನೇ ದಿಟ್ಟಿಸಿ ನೋಡುತ್ತಿದ್ದರು. ಪಿಸ್ತೂಲು ಹಿಡಿದ ವ್ಯಕ್ತಿ ಡ್ರೈವರ್ ರೇಯನ್ನು ಕರೆದು ಬಸ್ಸಿನ ಹಿಂದಿನ ಸೀಟಿನಲ್ಲಿ ಹೋಗಿ ಕುಳಿತುಕೊಳ್ಳಲು ತಿಳಿಸಿದ. ಕೈಚೀಲ ಧರಿಸಿದ ಇನ್ನೊಬ್ಬ ವ್ಯಕ್ತಿ ಆ ಬಸ್ಸನ್ನು ಬಿಳಿ ಬಸ್ಸಿನ ಹಿಂದೆಯೇ ನಡೆಸತೊಡಗಿದ. ಹೀಗೆ ಆ ರಸ್ತೆಯಲ್ಲಿ ಸುಮಾರು ಐನೂರು ಮೀಟರ್ ದೂರ ಹೋದ ನಂತರ ಅವೆರಡೂ ಒಂದು ಮಣ್ಣಿನ ದಿಬ್ಬದ ಕಡೆಗೆ ತಿರುಗಿದವು. ಅಲ್ಲಿ ಇನ್ನೊಂದು ಹಸಿರು ಬಣ್ಣದ ಚಿಕ್ಕ ಬಸ್ಸು ನಿಂತಿರುವುದು ರೇನಿಗೆ ಕಾಣಿಸಿತು.

ಬಿಳಿ ಬಸ್ಸಿನ ಬಾಗಿಲನ್ನು ತೆರೆದು ಅದನ್ನು ಸ್ಕೂಲ್‌ಬಸ್ಸಿನ ಬಾಗಿಲಿಗೆದುರಾಗಿ ನಿಲ್ಲಿಸಲಾಯಿತು. ಪಿಸ್ತೂಲ್ ಹಿಡಿದ ಮನುಷ್ಯನ ಅಪ್ಪಣೆ ಪ್ರಕಾರ ಮಕ್ಕಳು ಸ್ಕೂಲ್ ಬಸ್ಸಿನ ಮೆಟ್ಟಿಲುಗಳಿಂದ ನೇರವಾಗಿ ಬಿಳಿ ಬಸ್ಸಿಗೆ ಹತ್ತಿದರು. ಆರು ವರ್ಷದ ಲೇರಿಪಾರ್ಕ್ ಸ್ವತಃ ಭಯಗೊಂಡಿದ್ದರೂ ಅವರನ್ನೆಲ್ಲ ಬೆದರಿಸುವಂತೆ ದೊಡ್ಡ ಸ್ವರದಲ್ಲಿ ಹೇಳಿದ: "ನನ್ನ ಅತ್ತೆ ಸಿಲ್‌ವಿಯಾ ನನ್ನನ್ನು ಕರೆದುಕೊಂಡು ಹೋಗಲು ೪-೩೦ಕ್ಕೆ ಬರುತ್ತಾಳೆ. ನನ್ನನ್ನು ಕಾಣದಿದ್ದರೆ ಆಕೆಗೆ ಬಹಳ ಕೋಪ ಬಂದೀತು. ನಿಮಗೆ ಅವಳ ಕೈಯಲ್ಲಿ ಶಿಕ್ಷೆ ಸಿಗುವುದು ಖಂಡಿತ."

ಇನ್ನೊಬ್ಬ ವಿದ್ಯಾರ್ಥಿ ಹೆದರಿ ಹೆದರಿ ಕೇಳಿದ "ನೀವು ನಮ್ಮನ್ನೆಲ್ಲ ಏನು ಮಾಡಬೇಕೆಂದಿದ್ದೀರಿ?"

ಆಗ ಪಿಸ್ತೂಲ್ ಹಿಡಿದ ವ್ಯಕ್ತಿ ಗದರಿಸಿ ಹೇಳಿದ. "ಯಾರಿಗೂ ಏನೂ ತೊಂದರೆಯಾಗುವುದಿಲ್ಲ ಮಾತನಾಡದೆ ಸುಮ್ಮನೆ ಕುಳಿತಿರಿ."

ಹನ್ನೆರಡು ಮಂದಿ ಮಕ್ಕಳು ಬಿಳಿ ಬಸ್ಸಿಗೆ ಹತ್ತಿದರು. ಆ ಬಸ್ಸು ಅಲ್ಲಿಂದ ಆಚೆಗೆ ಹೋದೊಡನೆ ಹಸಿರು ಬಣ್ಣದ ಬಸ್ಸು ಅದೇ ಸ್ಥಳದಲ್ಲಿ ನಿಂತಿತು. ರೇ ಮತ್ತು ಉಳಿದ ೧೪ ಮಕ್ಕಳು ಆ ಚಿಕ್ಕ ಬಸ್ಸಿನಲ್ಲಿ ಕುಳಿತರು. ಅನಂತರ ಆ ಎರಡು ಚಿಕ್ಕ ಬಸ್ಸುಗಳೂ ಮುಂದ ಮುಂದೆ ಹೋದವು. ಮಕ್ಕಳಲ್ಲಿ ಕೆಲವರು ಅಳತೊಡಗಿದರು. ಕೆಲವರು ತಮ್ಮ ಅಮ್ಮನ ಬಳಿಗೆ ಹೋಗಬೇಕೆಂದು ಹಟ ಹಿಡಿಯತೊಡಗಿದರು. ಆ ಚಿಕ್ಕ ಬಸ್ಸುಗಳ ಕಿಟಕಿ ಕನ್ನಡಿಗಳಿಗೆ ಕಪ್ಪುಬಣ್ಣ ಬಳಿದಿದ್ದರಲ್ಲದೆ ಕಿಟಕಿಗಳನ್ನೆಲ್ಲಾ ಮುಚ್ಚಿದ್ದರು. ಹಾಗಾಗಿ ಒಳಗೆ ತುಂಬಾ ಬಿಸಿಯಾಗುತ್ತಿತ್ತು. ಹೀಗೆ ಒಂದು ಘಂಟೆ ಕಳೆದಾಗ ಕೆಲವರು ಹುಡುಗಿಯರಂತೂ ಮೂರ್ಛೆ ಹೋದರು.

ಅಸಹಾಯಕನಾದ ರೇನಿಗೆ ಏನು ಮಾಡಲೂ ತೋಚಲಿಲ್ಲ. ಮಕ್ಕಳೆಲ್ಲಾ ಆತನನ್ನು ಮುಸುಕಿನ ವ್ಯಕ್ತಿಗಳು ಹೀಗೇಕೆ ಕರೆದೊಯ್ಯುತ್ತಿದ್ದಾರೆ ಎಂದೆಲ್ಲಾ ವಿಚಾರಿಸುತ್ತಿದ್ದರು. "ನೀವೆಲ್ಲಾ ಧೈರ್ಯದಿಂದಿರಿ, ಎಲ್ಲಾ ಒಳ್ಳೆಯದಾಗುತ್ತದೆ." ಎಂದು ರೇ ನುಡಿಯುತ್ತಿದ್ದ. ಮಕ್ಕಳಿಗಿಂತಲೂ ಸ್ವತಃ ಆತನೇ ಹೆಚ್ಚು ಭಯಗೊಂಡಿದ್ದ.

ರಾತ್ರಿ ೯ ಗಂಟೆಯಾಗುತ್ತಲೇ ಮಕ್ಕಳೆಲ್ಲಾ ತಮಗೆ ಹಸಿವೆಯಾಗುತ್ತಿದೆ. ಬಾಯಾರಿಕೆಯಾಗುತ್ತಿದೆ, ಮೂತ್ರ ಮಾಡಲು ಹೋಗಬೇಕು ಎನ್ನತೊಡಗಿದರು. ಆದರೆ ಮುಂದೆ ಕುಳಿತಿದ್ದವರಿಂದ ಏನೊಂದು ಉತ್ತರ ಸಿಗುತ್ತಿರಲಿಲ್ಲ.

ಮಧ್ಯರಾತ್ರಿಯಾಯಿತು. ಬಿಳಿ ಮತ್ತು ಹಸಿರು ಬಣ್ಣದ ಬಸ್ಸುಗಳು ಎಲ್ಲೂ ನಿಲ್ಲದೇ ಓಡುತ್ತಿದ್ದವು. ಮಕ್ಕಳೆಲ್ಲಾ ನಿದ್ರಿಸತೊಡಗಿದರು. ಕೆಲವು ಚಿಕ್ಕ ಮಕ್ಕಳು ರೇನ ತೊಡೆಯ ಮೇಲೆ ತಲೆಯಿರಿಸಿ ನಿದ್ದೆ ಮಾಡಿದರು. ಮಧ್ಯರಾತ್ರಿ ಕಳೆದು ೧–೩೦ ಗಂಟೆಯಾದಾಗ ಆ ಚಿಕ್ಕ ಬಸ್ಸುಗಳು ವೇಗ ಕಡಿಮೆ ಮಾಡಿದವು. ಅವುಗಳ ತಳ ಭಾಗಕ್ಕೆ ಮುಳ್ಳಿನ ಗಿಡಗಳು ತಗಲುತ್ತಿದ್ದವು. ಇದರಿಂದ ಅವು ರಸ್ತೆ ಬಿಟ್ಟು ಹೋಗತೊಡಗಿವೆಯೆಂದು ಗೊತ್ತಾಗುತ್ತಿತ್ತು. ಕೊನೆಗೆ ಆ ಬಸ್ಸುಗಳೆರಡೂ ನಿಂತವು.

ಹಸಿರು ಬಸ್ಸಿನ ಬಾಗಿಲು ತೆರೆಯಿತು. ಮುಸುಕು ಹಾಕಿದ್ದ ವ್ಯಕ್ತಿಯ ಅಪ್ಪಣೆಯಂತೆ ರೇ ಕೆಳಗಿಳಿದ. ಮುಸುಕಿನ ವ್ಯಕ್ತಿ ಅನಂತರ ರೇನ ಹೆಸರು ವಯಸ್ಸು ಕೇಳಿ ಬರೆದುಕೊಂಡು ಪ್ಯಾಂಟು ಮತ್ತು ಶೂಸ್‌ಗಳನ್ನು ಕಳಚಿಟ್ಟು ಹೋಗಲು ತಿಳಿಸಿದ. ಬ್ಯಾಟರಿ ಲೈಟನ್ನು ಕೊಟ್ಟು ಬಸ್ಸು ನಿಂತಲ್ಲೆ ಹತ್ತಿರವೇ ಇರುವ ಒಂದು ನೆಲಮಾಳಿಗೆಯ ಒಳಗೆ ಏಣಿಯೊಂದರ ಮೂಲಕ ಇಳಿದು ಹೋಗಲು ಹೇಳಿದ. ಸಾಮಾನ್ಯ ಎರಡೂವರೆ ಮೀಟರ್ ಕೆಳಗೆ ಇಳಿದಾಗ ರೇನಿಗೆ ತಳ ಸಿಕ್ಕಿತು. ಆಗ ಬೆಳಗಿನ ಝಾವ ಮೂರುವರೆ ಗಂಟೆಯಾಗಿತ್ತು.

ಎರಡೂ ಬಸ್ಸಿನಲ್ಲಿದ್ದ ಮಕ್ಕಳು ತಮ್ಮ ತಮ್ಮ ಹೆಸರು ವಯಸ್ಸುಗಳನ್ನು ತಿಳಿಸಿ ಮುಸುಕಿನ ವ್ಯಕ್ತಿಗಳು ಹೇಳಿದಂತೆ ಉಡುಪನ್ನು ಕಳಚಿಟ್ಟು ಏಣಿ ಇಳಿದು ನೆಲಮಾಳಿಗೆಯೊಳಗೆ ಹೋದರು. ಕೆಲವು ಮಕ್ಕಳು ತಮಗೆ ಇನ್ನೇನು ಅನಾಹುತ ಕಾದಿದೆಯೊ ಎಂಬ ಭಯದಿಂದ ಅಳುತ್ತಿದ್ದರು. ಅಮ್ಮನ್ನು ಮನೆಗೆ ಯಾಕೆ ಕಳುಹಿಸುವುದಿಲ್ಲ ಎಂದು ಇನ್ನು ಕೆಲವು ಮಕ್ಕಳು ವಿಚಾರಿಸುತ್ತಿದ್ದರು.

ಮಕ್ಕಳೆಲ್ಲಾ ನೆಲಮಾಳಿಗೆಯೊಳಗೆ ಹೋದೊಡನೆ ಮುಸುಕಿನ ವ್ಯಕ್ತಿಗಳು ಒಂದು ಟಾಯ್ಲೆಟ್ ಪೇಪರಿನ ಕಟ್ಟನ್ನು ಕೆಳಗೆ ಕೊಟ್ಟು ಏಣಿಯನ್ನು ಮೇಲಕ್ಕೆಳೆದರು. ನೆಲಮಾಳಿಗೆಯ ದ್ವಾರವನ್ನು ಮುಚ್ಚಿದ ಸದ್ದು ರೇನಿ ಕೇಳಿಸಿತು ಆಗ ಮುಸುಕಿನ ವ್ಯಕ್ತಿಗಳನ್ನುದ್ದೇಶಿಸಿ ಲ್ಯಾರಿ ಪಾರ್ಕರ್ ಕೂಗಿ ಹೇಳಿದ "ನನ್ನ ಅತ್ತೆಯಿಂದ ನಿಮಗೆ ತಕ್ಕ ಶಿಕ್ಷೆ ದೊರೆಯದಿರದು." ಆದರೆ ಅದಕ್ಕೆ ಪ್ರತ್ಯುತ್ತರ ಕೊಡಲು ಮೇಲೆ ಯಾರೂ ಇರಲಿಲ್ಲ.

ರೇ ತನ್ನ ಟಾರ್ಚಿನಿಂದ ಬೆಳಕು ಮಾಡುತ್ತಾ ಕೋಣೆಯ ಸುತ್ತ ನೋಡಿದ ಆ ಕೋಣೆ ನಿಜಕ್ಕೂ ಒಂದು ಬಸ್ಸಿನ ಒಳಭಾಗದ ಹಾಗಿತ್ತು. ಸಾಮಾನ್ಯ ಎರಡೂವರೆ ಮೀಟರ್ ಅಗಲ ಎಂಟು ಮೀಟರ್ ಉದ್ದ ಮತ್ತು ಎರಡೂವರೆ ಮೀಟರ್ ಎತ್ತರವಿರುವ ಆ ಕೋಣೆಯ ಪಕ್ಕ ಮತ್ತು ಮೇಲ್ಭಾಗಗಳನ್ನು ಸರಿಗೆಯ ಬಲೆಯಿಂದ ತಯಾರಿಸಲಾಗಿತ್ತು. ಗೋಡೆಯ ಒಂದು ಬದಿಯಲ್ಲಿ ತಿಂದಿ

ಫ್ಲೇಕ್ಸ್ ಬ್ರೆಡ್ ಚಿಪ್ಸ್ ಮತ್ತು ಒಂದು ಡಜನ್ ಪ್ಲಾಸ್ಟಿಕ್ ಕ್ಯಾನುಗಳಲ್ಲಿ ನೀರು ಇವಿಷ್ಟನ್ನು ಇರಿಸಿದ್ದರು. ನೆಲದಲ್ಲಿ ಕೆಲವು ತುಂಡು ಹಾಸಿಗೆಗಳನ್ನು ಹಾಸಲಾಗಿತ್ತು. ಮೂಲೆಯಲ್ಲಿ ಎರಡು ಟಾಯ್ಲೆಟ್‌ಗಳಿದ್ದವು. ಒಳಗೆ ಗಾಳಿ ಬರಲು ಮೇಲ್ಛಾಗದಲ್ಲಿ ಎರಡು ಪ್ಲಾಸ್ಟಿಕ್ ನಳಿಗೆಗಳನ್ನಿರಿಸಿದ್ದರು. ಇವಿಷ್ಟು ನೆಲದಡಿಯಲ್ಲಿದ್ದವು.

ಮಕ್ಕಳು ನೀರು ಕುಡಿದರು. ಟಾಯ್ಲೆಟನ್ನು ಉಪಯೋಗಿಸಿದರು. ತಿಂಡಿಯನ್ನು ಗಬಗಬನೆ ತಿಂದರು. ಕೆಲವು ಮಕ್ಕಳು ಇನ್ನೂ ತಮ್ಮ ತಾಯಂದಿರಿಗಾಗಿ ಅಳುತ್ತಿದ್ದರು. ಅವರನ್ನು ರೇ ಸಮಾಧಾನಪಡಿಸಿದ. ಐದು ವರ್ಷದ ಹುಡುಗಿ ಮೋನಿಕಾ ಆತನ ಬಳಿ ಬಂದು "ಅವರು ನಮ್ಮನ್ನು ಇಲ್ಲಿ ಯಾಕೆ ಸೆರೆಯಿಟ್ಟಿದ್ದಾರೆ?" ಎಂದು ಕೇಳಿದಳು. ಆ ಪ್ರಶ್ನೆಗೆ ಉತ್ತರ ಆತನಲ್ಲಿರಲಿಲ್ಲ.

ಮೋನಿಕಾ ಅನಂತರ ಹತ್ತು ವರ್ಷದ ಜೆಫ್ರಿ ಬ್ರೌನನ ಬಳಿ ಹೋಗಿ ಆತನ ತೊಡೆಯ ಮೇಲೆ ಕುಳಿತುಕೊಂಡಳು. ಆಕೆಯನ್ನು ಸಮಾಧಾನಪಡಿಸುತ್ತಾ ತಾನು ಖಂಡಿತವಾಗಿಯೂ ಆಕೆಯನ್ನು ತಂದೆಯ ಬಳಿಗೆ ತಲಪಿಸಿ ಬಿಡುತ್ತೇನೆ ಎಂದು ಆತ ಆಶ್ವಾಸನವನ್ನಿತ್ತ.

ಮಕ್ಕಳನ್ನೇ ನೋಡುತ್ತಾ ಚಿಂತಾಕ್ರಾಂತನಾದ ರೇ ತಾನು ಪಿಸ್ತೂಲ ಹಿಡಿದ ವ್ಯಕ್ತಿಯು ಎದುರು ಬಂದಾಗ ಬಸ್ಸನ್ನು ನಿಲ್ಲಿಸದೇ ಸೀದಾ ಮುಂದೆ ಓಡಿಸಬೇಕಾಗಿತ್ತೇನೋ ಎಂದು ತನ್ನಲ್ಲೆ ಹೇಳಿಕೊಂಡ. ೨೩ ವರ್ಷಗಳಿಂದ ಬಸ್ಸು ಡ್ರೈವರನಾಗಿ ಕೆಲಸ ಮಾಡುತ್ತಿದ್ದ ರೇಯ ಮನಸ್ಸಿನಲ್ಲಿ ಇಂತಹ ಒಂದು ಘಟನೆ ನಡೆಯಬಹುದೆಂಬ ಸಂಶಯವೇ ಮೂಡಿರಲಿಲ್ಲ.

ಒಂದು ಘಂಟೆಯೊಳಗೆ ಅಲ್ಲಿದ್ದ ತಿಂಡಿಗಳೆಲ್ಲಾ ಮುಗಿದುಹೋದವು. ಮೂರು ಕ್ಯಾನ್ ನೀರು ಮಾತ್ರ ಉಳಿದಿತ್ತು. ಸ್ವಲ್ಪ ಹೊತ್ತಿನಲ್ಲಿ ಅವೂ ಮುಗಿದು ಹೋಗಲು ಸಾಧ್ಯವಿದೆ ಅನಂತರ ಮಕ್ಕಳಿಗೆ ಬಾಯಾರಿಕೆಯಾದರೆ ಏನು ಮಾಡುವುದು ?

ಮೈಕ್ ಮಾರ್ಶಲ್‌ನಿಗೆ ಮೇಲಿನ ಭಾರದಿಂದಾಗಿ ಮಾಡು ಬಿರುಕು ಬಿಡುತ್ತಿದೆಯೆಂದು ಅನಿಸತೊಡಗಿತು. ಬಿರುಬಿರನೆ ಸ್ವಲ್ಪ ಮಣ್ಣು ಕೂಡ ಒಳಗೆ ಬೀಳುತ್ತಿರುವುದನ್ನು ಆತ ಗಮನಿಸಿದ.

•

ಮೂರನೆ ದಿವಸ ಅಂದರೆ ೧೬ನೇ ತಾರೀಕು ನಂದು ಚೌಚಿಲ್ಲಾದಲ್ಲಿ ಗುಪ್ತಚಾರರು ವಿದ್ಯಾರ್ಥಿಗಳ ತಂದೆತಾಯಿಗಳಿಗೆ ಫೋನ್ ಮಾಡಿ ಮಕ್ಕಳ ಫೋಟೋ ಬಟ್ಟೆ ಮತ್ತು ಬೇರೆ ಕೆಲವು ಸಾಮಾನುಗಳನ್ನು ತರಿಸಿಕೊಂಡರು. ಬೇಟೆ ನಾಯಿಗಳಿಗೆ ಈ ವಸ್ತುಗಳ ವಾಸನೆಯನ್ನು ತಿಳಿಸಿ ಅವುಗಳ ಮೂಲಕ ಮಕ್ಕಳಿರುವ ಸ್ಥಳವನ್ನು ಗುರುತು ಹಚ್ಚಲು ಸಾಧ್ಯವೇ ಎಂಬುದು ಅವರ ಪ್ರಯತ್ನವಾಗಿತ್ತು.

ಪೋಲೀಸರು ಅಗ್ನಿಶಾಮಕದಳದವರು ಇತ್ಯಾದಿ ಸಾವಿರಾರು ೩೦೦ ಮಂದಿ ಕಾಣೆಯಾದ ಮಕ್ಕಳನ್ನು ಹುಡುಕಲು ಹೊರಟಿದ್ದರು. ಅವರಿಗೆ ಚೌಚಿಲ್ಲಾದವರು ತುಂಬಾ ಸಹಾಯ ಮಾಡಿದರು. ಕೆಲವರು ತಿಂಡಿ ತಂದು ಕೊಟ್ಟರು. ಪಾರನೆಸಿಯ ಹೊಟೆಲಿನಿಂದ ಪೆಟ್ಟಿಗೆಗಳಲ್ಲಿ ತಿಂಡಿ ತುಂಬಿಸಿ ಕೊಟ್ಟರು. ಯುವಕ ಜಾರ್ಜ್ ಎಂಬಾತ ಶೆರೀಫ್ ಬೇಟ್ಸನನ್ನು ಕರೆದು ಆತನಿಗೆ ಬಿಳಿ ಪೆಟ್ಟಿಗೆಯನ್ನು ಕೊಟ್ಟ. ಅದರೊಳಗೆ ಒಂದು ಸುಂದರವಾದ ಕೇಕ್ ಇತ್ತು. ಆ 'ಕೇಕಿನ ಮೇಲೆ ಸುಖ ಸಂತೋಷಕರವಾದ ಹದಿನಾರನೇ ಹುಟ್ಟು ಹಬ್ಬ– ಜಾರ್ಜ್' ಎಂಬುದಾಗಿ ಬರೆದಿತ್ತು. ಆ ಕೇಕಿನಿಂದ ಒಂದು ಚೂರನ್ನೂ ತಿನ್ನದೆ ಇಡೀ ಕೇಕನ್ನೇ ಆತ ಶೆರೀಫ್ ಮತ್ತು ಅವನ ಜನರಿಗಾಗಿ ಕೊಟ್ಟಿದ್ದ.

•

"ನಾವು ಇಲ್ಲಿಂದ ತಪ್ಪಿಸಿಕೊಂಡು ಹೋಗಲು ಪ್ರಯತ್ನಿಸೋಣವೇ?" ಎಂದು ಮೈಕ್ ಮಾರ್ಶಲ್ ರೇನನ್ನು ಕೇಳಿದ. ಆದರೆ ಮೇಲೆ ನೆಲಮಾಳಿಗೆಯ ಬಾಗಿಲಲ್ಲಿ ಪಿಸ್ತೂಲು ಹಿಡಿದ ಕಾವಲುಗಾರರು ನಿಂತಿದ್ದರೆ ಏನು ಮಾಡುವದು ಎಂದು ಅವರಿಗೆ ಭಯವಾಗುತ್ತಿತ್ತು.

ಮುಸುಕಿನ ವ್ಯಕ್ತಿಗಳು ನೆಲಮಾಳಿಗೆಯ ಬಾಗಿಲಲ್ಲಿ ಕಬ್ಬಿಣದ ಒಂದು ಭಾರದ ತುಂಡನ್ನು ಇಟ್ಟಿದ್ದರು. ಆ ದಿನ ಸಾಯಂಕಾಲ ನಾಲ್ಕು ಗಂಟೆಗೆ ರೇ ಮೈಕನನ್ನು ಕರೆದು "ಇನ್ನು ನಾವು ಜಾಸ್ತಿ

ಹೊತ್ತು ಹೀಗೆ ಸುಮ್ಮನೆ ಕುಳಿತು ಪ್ರಯೋಜನವಿಲ್ಲ. ಬಾಗಿಲು ತೆರೆಯಲು ಸಾಧ್ಯವೋ ಪ್ರಯತ್ನಿಸೋಣ" ಎಂದ. ಹೀಗೆ ಅವರೆಲ್ಲಾ ಸೇರಿ ಅಲ್ಲಿದ್ದ ಹಾಸಿಗೆಗಳನ್ನೆಲ್ಲಾ ಮಡಚಿ ಒಂದರ ಮೇಲೊಂದನ್ನಿಟ್ಟು ನೆಲಮಾಳಿಗೆಯ ಬಾಗಿಲು ಕೈಗೆ ಎಟುಕುವಂತೆ ಮಾಡಿದರು. ಅದರ ತುದಿಯಲ್ಲಿ ನಿಂತು ರೇ ಮತ್ತು ಮೈಕ್ ಆ ಬಾಗಿಲನ್ನು ಜೋರಾಗಿ ದೂಡತೊಡಗಿದರು. ಆದರೆ ಏನೂ ಪ್ರಯೋಜನವಾಗಲಿಲ್ಲ. ರೇನಿಗೆ ಮಾಡಿನಲ್ಲಿ ಸಿಕ್ಕಿಸಿದ ಮರದ ಕೋಲೊಂದು ಕಾಣಿಸಿತು. ಆ ಕೋಲಿನ ಮೂಲಕ ಆತನಿಗೆ ಬಾಗಿಲನ್ನು ಸ್ವಲ್ಪ ಸರಿಸಲು ಸಾಧ್ಯವಾಯಿತು. ತನ್ನ ಕೈಗಳಿಂದ ಆ ಬಾಗಿಲಿನ ಹೊರಗೆ ಏನಿದೆ ಎಂದು ಮುಟ್ಟಿ ನೋಡಿದಾಗ ಅಲ್ಲಿ ಸಾಮಾನ್ಯ ೨೦ ಕಿಲೋ ಭಾರದ ಬ್ಯಾಟರಿ ಇರುವಂತೆ ತೋರಿತು. ಬಾಗಿಲನ್ನು ಮುಂದಕ್ಕೆ ದೂಡಿ ಆತ ಒಂದೊಂದಾಗಿ ಆ ಬ್ಯಾಟರಿಗಳನ್ನು ಕೋಣೆಯೊಳಕ್ಕೆ ಬರುವಂತೆ ಮಾಡಿದ. ಅನಂತರ ಇತರ ಮಕ್ಕಳ ಸಹಾಯದಿಂದ ಅವನ್ನು ಕೆಳಗಿರಿಸಿದ. ಈಗ ಕೋಣೆಯ ಬಾಗಿಲನ್ನು ಅರ್ಧದಷ್ಟು ಹೊರಗೆ ತೆರೆಯಲು ಸಾಧ್ಯವಾಗುತ್ತಿತ್ತು.

ರೇ ತನ್ನ ಟಾರ್ಚ್ ಲೈಟಿನ ಬೆಳಕಿನ ಮೂಲಕ ಆ ಬಾಗಿಲಿನ ಮೇಲ್ಗಡೆ ಒಂದು ಚೌಕಾಕಾರದ ಮರದ ಪೆಟ್ಟಿಗೆಯಿರುವುದನ್ನು ಗಮನಿಸಿದ ಆತ. ಮೈಕ್ ಮತ್ತು ಹತ್ತು ವರ್ಷದ ರಾಬರ್ಟ್ ಗೋನ್ಸ್, ಜಾಬೆಡ್ಸ್ ಈ ಮೂವರೂ ಸೇರಿ ಆ ಕೋಣೆಯಲ್ಲಿ ಬಿದ್ದಿದ್ದ ಒಂದು ಸರಿಗೆಯ ಮೂಲಕ ಆ ಪೆಟ್ಟಿಗೆಯಲ್ಲಿ ತೂತು ಮಾಡಿದರು. ಅದರಿಂದ ಸ್ವಲ್ಪ ಮಣ್ಣು ಕೆಳಗೆ ಸುರಿಯಿತು.

ಇಷ್ಟೆಲ್ಲಾ ಕೆಲಸ ಮಾಡಿದ ರೇನಿಗೆ ಆಯಾಸವಾಗಿ ಪ್ರಜ್ಞೆ ತಪ್ಪುವಂತಾಯಿತು. ಅವನು ಕೆಳಗಿಳಿದು ಸ್ವಲ್ಪ ಹೊತ್ತು ಆಯಾಸ ಪರಿಹರಿಸಿಕೊಂಡು ಅನಂತರ ಪುನಃ ಮೇಲೆದ್ದು ಮೈಕ್ ಮತ್ತು ರಾಬರ್ಟನ ಜತೆ ಸೇರಿ ಇನ್ನೂ ದೊಡ್ಡ ತೂತನ್ನು ಕೊರೆದ. ಮೇಲಿದ್ದ ಮಣ್ಣೆಲ್ಲಾ ಕೆಳಗೆ ಬೀಳಲು ಮೇಲಿನಿಂದ ಬೆಳಕು ಒಳಗೆ ಬರತೊಡಗಿತು. ಮಕ್ಕಳಿಗೆಲ್ಲಾ ತುಂಬಾ ಸಂತೋಷವಾಯಿತು. ಮೊಳೆ ಹೊಡೆದು ಸೇರಿಸಿದ ಆ ಪೆಟ್ಟಿಯನ್ನು ಅವರೆಲ್ಲಾ ಸೇರಿ ಹೊರಗೆ ದೂಡಿದರು. ಎಂಜಿನ್ ಇಲ್ಲದ ಒಂದು ಹಳೇ ಬಸ್ಸನ್ನು ನೆಲದಡಿಯಲ್ಲಿ ಹುಗಿದು ಅವರಿದ್ದ ಆ ನೆಲಮಾಳಿಗೆಯನ್ನು ತಯಾರಿಸಲಾಗಿತ್ತು. ತರಗೆಲೆ ಕಸ ಕಡ್ಡಿ ಇತ್ಯಾದಿಗಳಿಂದ ಅದರ ಮೇಲ್ಭಾಗವನ್ನು ಮುಚ್ಚಲಾಗಿತ್ತು. ಅದರ ಸುತ್ತಲೂ ಎತ್ತರವಾದ ಮರಗಳಿದ್ದವು. ಹೊರಗಿನಿಂದ ನೋಡುವವರಿಗೆ ಅದೊಂದು ಬರಿಯ ಗುಪ್ಪದಂತೆ ಕಾಣಿಸುತ್ತಿತ್ತು. ಅಲ್ಲಿಂದ ಸ್ವಲ್ಪ ದೂರದಲ್ಲಿರುವ ರಸ್ತೆಯಲ್ಲಿ ಕೆಲವು ಟ್ರಕ್ಕುಗಳು ನಿಂತಿದ್ದುವು. ಆಗ ಸಾಯಂಕಾಲ ಏಳು ಗಂಟೆಯಾಗಿತ್ತು.

ಮಕ್ಕಳು ಮತ್ತು ರೇ ನೆಲಮಾಳಿಗೆಯಿಂದ ಮೇಲೆ ಬಂದರು. ಕಷ್ಟಪಟ್ಟು ಕಸ, ಮಣ್ಣುಗಳನ್ನು ತುಳಿದು ರಸ್ತೆಯಿರುವಲ್ಲಿಗೆ ಬಂದರು. ಅಲ್ಲಿಂದ ಸುಮಾರು ನೂರು ಮೀಟರ್ ದೂರದಲ್ಲಿ ವೆಲ್ಡಿಂಗ್ ಶಾಪ್ ಇತ್ತು. ರೇ ಮಕ್ಕಳನ್ನು ಕೂಡಿಕೊಂಡು ಅಲ್ಲಿಗೆ ಹೋಗಿ ಅಲ್ಲಿಯ ಕೆಲಸಗಾರನಿಗೆ ತಮ್ಮ ಪರಿಚಯ ಮಾಡಿಕೊಟ್ಟ. ಕೆಲಸಗಾರ ಅವರನ್ನು ಪ್ರೀತಿಯಿಂದ ಒಳಗೆ ಬರಹೇಳಿದ. ಅದು ಲಿವರ್‌ಮೋರ್ ಎಂಬ ಊರಾಗಿತ್ತು. ಅದು ಚೌಚಿಲ್ಲಾದಿಂದ ಉತ್ತರಕ್ಕೆ ೧೫೦ ಕಿಲೋಮೀಟರ್ ದೂರದಲ್ಲಿತ್ತು. ಮಕ್ಕಳನ್ನು ಅಪಹರಿಸಿದ ಜನರು ಯಾರಿಗೂ ತಿಳಿಯಬಾರದೆಂದು ಚೌಚಿಲ್ಲಾದಿಂದ ಎರಡೂವರೆ ಗಂಟೆಯಲ್ಲಿ ತಲುಪುವ ಈ ಸ್ಥಳಕ್ಕೆ ಮಧ್ಯರಾತ್ರಿ ಬಂದು ತಲುಪುವಂತೆ ಅಷ್ಟು ಹೊತ್ತು ಸುತ್ತು ತಿರುಗುತ್ತಿದ್ದರು.

ರೇ ಮತ್ತು ಮಕ್ಕಳು ನೆಲಮಾಳಿಗೆಯ ಸೆರೆಮನೆಯಿಂದ ಹೊರ ಬಂದು ಹತ್ತು ನಿಮಿಷಗಳಾಗುವಷ್ಟರಲ್ಲಿ ಶೆರೀಫ್ ಇಲಾಖೆಯವರ ಬಸ್ಸು ಲಿವರ್‌ಮೋರಿಗೆ ಬಂತು. ಅನೇಕ ಗುಪ್ತಚಾರರು ಕೂಡ ತಮ್ಮ ಕಾರುಗಳಲ್ಲಿ ಆ ಸ್ಥಳಕ್ಕೆ ಬಂದರು. ಮಕ್ಕಳನ್ನೂ ಡ್ರೈವರನನ್ನೂ ವೈದ್ಯಕೀಯ ತಪಾಸಣೆಗೋಸ್ಕರ ಆ ಊರಿನ ಆಸ್ಪತ್ರೆಗೆ ಕರೆದುಕೊಂಡು ಹೋದರು. ಅಲ್ಲಿ ಅವರಿಗೆ ತಿಂಡಿ ತಿನಿಸುಗಳನ್ನೂ ಕೊಟ್ಟರು. ಗುಪ್ತಚಾರರು ಅವರನ್ನು ಪ್ರಶ್ನಿಸಿ ಸಮಾಚಾರ ತಿಳಿದುಕೊಂಡರು.

ಶನಿವಾರ ಮುಂಜಾನೆ ನಾಲ್ಕು ಗಂಟೆ ಹೊತ್ತಿಗೆ ಡ್ರೈವರ್ ಮತ್ತು ಮಕ್ಕಳನ್ನು ಹೊತ್ತ ಬಸ್ಸು

ಚೌಚಿಲ್ಲಾದ ಪೋಲೀಸ್ ಸ್ಟೇಶನ್ ಬಳಿ ಬಂತು. ನೂರಾರು ಜನರು ಅವರನ್ನು ಸಂತೋಷದಿಂದ ಸ್ವಾಗತಿಸಿದರು.

ಕ್ಯಾರೋಲ್ ಮಾರ್ಶಲ್ ಮತ್ತು ಇನ್ನಿತರರ ತಂದೆ ತಾಯಿಗಳು ಮಕ್ಕಳನ್ನು ಕಂಡು ಸಂತೋಷ ದಿಂದ ಕಣ್ಣೀರು ಸುರಿಸಿದರು. ತಾಯಿಯನ್ನು ನೋಡಿದ ಮೈಕ್ ಮನೆಗೆ ಹೋಗಿ ತಾನು ನಿದ್ದೆ ಮಾಡಬೇಕು ಎಂದು ಹೇಳಿದ.

*

ಈ ರೀತಿಯ ಮಕ್ಕಳ ಅಪಹರಣದ ಘಟನೆ ಜಗತ್ತಿನಲ್ಲಿ ಹಿಂದೆಂದೂ ನಡೆದಿರಲಿಲ್ಲ.

ಕ್ಯಾಲಿಫೋರ್ನಿಯಾದ ಒಂದು ಕಲ್ಲು ಜಲ್ಲಿಯ ಕಂಪನಿಯವರು ೧೯೭೫ನೆಯ ನವೆಂಬರ್ ೨೦ ರಂದು ತಮ್ಮ ಮೂವಿಂಗ್‌ವ್ಯಾನನ್ನು ಸ್ಯಾನ್ ಫ್ರಾನ್ಸಿಸ್ಕೋದ ಪೋರ್ಟೋಲಾ ವೇಲಿಯಲ್ಲಿ ವಾಸಿಸುವ ಫ್ರೆಡ್ ವುಡ್ಸ್ ಎಂಬಾತನಿಗೆ ಮಾರಿ ದ್ದರು. ವುಡ್ಸನ ತಂದೆ ಕ್ಯಾಲಿಫೋರ್ನಿಯಾದ ಕಲ್ಲು ಜಲ್ಲಿ ಕಂಪನಿಯೊಂದರಲ್ಲಿ ಅಧಿಕಾರಿಯಾಗಿದ್ದ.

ವುಡ್ಸ್ ಮತ್ತು ಆತನ ಸಹೋದ್ಯೋಗಿಗಳಿ ಬ್ಬರು ೧೯೭೫ನೇ ನವೆಂಬರ್ ಮತ್ತು ಡಿಸೆಂಬರ್ ತಿಂಗಳುಗಳಲ್ಲಿ ಆ ಜಲ್ಲಿ ಕಾರ್ಖಾನೆಯಿರುವ ಸ್ಥಳದ ಹತ್ತಿರವೇ ರಾತ್ರಿಯೆಲ್ಲಾ ಕೆಲಸ ಮಾಡುತ್ತಿದ್ದು ದನ್ನು ಕೆಲವರು ಗಮನಿಸಿದ್ದರು. ಅವರೊಂದು ಬುಲ್‌ಡೋಸರ್ ತಂದು ಅಲ್ಲಿ ದೊಡ್ಡ ಹೊಂಡ ತೋಡಿದ್ದರು ಎಂದು ಸೆಕ್ಯೂರಿಟಿಗಾರ್ಡನ ಮೂಲಕ ಶೆರೀಫ್ ಇಲಾಖೆಗೆ ತಿಳಿಯಿತು.

ಶೆರೀಫನ ಇಲಾಖೆಯವರು ವುಡ್ಸನ ಕುಟುಂಬದವರು ವಾಸಿಸುವ ಸ್ಥಳಕ್ಕೆ ಹೋಗಿ ತನಿಖೆ ನಡೆಸಿದರು. ಅಲ್ಲಿ ಅವರಿಗೆ ಅರ್ಧಕೋಟಿ ಡಾಲರ್ ಹಣವನ್ನು ಅಪಹರಣಕಾರರಿಗೆ ಕೊಡ ಬೇಕೆನ್ನುವ ಬೇಡಿಕೆ ಪತ್ರವೂ, ಒಂದು ಪೇಪರ್ ಲಕೋಟೆಯೊಳಗೆ ರೇ ಮತ್ತು ಮಕ್ಕಳನ್ನು ಯಾವ ರೀತಿಯಲ್ಲಿ ಮಣ್ಣಿನೊಳಗೆ ಹೂತಿಡಲಾ ಯಿತು ಎಂಬುದನ್ನು ವಿವರವಾಗಿ ಬರೆದಿರುವ ಕಾಗದವೂ ದೊರಕಿತು. ಅಲ್ಲದೆ ಸೇನೋಸೆ ವೇರ್ ಹೌಸಿನಿಂದ ಅಪಹರಣಕಾರರು ಎರಡು ಚಿಕ್ಕ ಬಸ್ಸುಗಳನ್ನು ಬಾಡಿಗೆಗೆ ತೆಗೆದುಕೊಂಡಿದ್ದರೆಂದೂ ಮಾಹಿತಿ ದೊರೆಯಿತು.

ವುಡ್ಸನ ಜತೆ ಸೇರಿದವರಲ್ಲಿ ಜೇಮ್ಸ್ ಶೆಹೊ ಯಿನ್ ಪೆಲ್ಡ್ ಎಂಬವನೊಬ್ಬ ಮತ್ತು ಆತನ ಸಹೋದರ ರಿಚಾರ್ಡ್ ಎಂಬವನಿನ್ನೊಬ್ಬ ಜುಲೈ ೨೨ ಅಂದರೆ ಅಪಹರಣವಾಗಿ ಒಂದು ವಾರದ ನಂತರ ದಿನಪತ್ರಿಕೆಗಳಲ್ಲಿ ಮೇಲಿನ ಮೂವರ ಹಲ ವಾರು ಸಂಗತಿಗಳನ್ನು ಕೊಡಲಾಯಿತು. ಮಾರನೆ ದಿನ ರಿಚಾರ್ಡ್ ತನ್ನ ತಂದೆ ಮತ್ತು ವಕೀಲನ ಜೊತೆ ನ್ಯಾಯಾಲಯಕ್ಕೆ ಹೋದ. ಜುಲೈ ೨೯ ರಂದು ಆತನ ಸಹೋದರ ಜೇಮ್ಸನನ್ನು ಅರೆಸ್ಟ್ ಮಾಡಿದರು. ಅದೇ ದಿನ ಬೆಳಿಗ್ಗೆ ಗುಪ್ತಚಾರರು ವುಡ್ಸನಿಗೆ ವ್ಯಾಂಕೋವರ್ ಪೋಸ್ಟ್ ಆಫೀಸಿಗೆ ಒಂದು ಅಕ್ಷೆ ಆತನಿಗಾಗಿ ಕಾದಿರುವ ಒಂದು ಪಾರ್ಸೆಲನ್ನು ತೆಗೆದುಕೊಳ್ಳಬೇಕೆಂದು ಫೋನ್ ಮೂಲಕ ತಿಳಿಸಿದರು. ವುಡ್ಸ್ ಪೋಸ್ಟ್ ಆಫೀಸಿಗೆ ಬಂದೊಡನೆ ಗುಪ್ತಚಾರರು ಆತನನ್ನು ಬಂಧಿಸಿದರು.

ಈ ಮೂವರು ಕೈದಿಗಳೂ ಜೇಲಿನಲ್ಲಿ ಹತ್ತು ಲಕ್ಷ ಡಾಲರ್ ಜಾಮೀನಿನ ಮೂಲಕ ತಮ್ಮನ್ನು ಬಿಡಿಸಲು ಯಾರು ಬರುವರೆಂದು ದಾರಿ ಕಾಯತೊಡಗಿದರು. ಮಕ್ಕಳನ್ನು ಕದ್ದೊಯ್ದು ತುಂಬಾ ಶ್ರೀಮಂತರಾಗಬಹುದೆಂದು ಅವರು ಭಾವಿಸಿದ್ದಿರಬಹುದು. ಹಿಂದೆಂದೂ ಅವರು ಈ ತರಹ ಕೆಟ್ಟ ಕೆಲಸಗಳನ್ನು ಮಾಡಿರಲಿಲ್ಲ.

ಚೌಚಿಲ್ಲದ ಹೊರಗಿನವರಿಗೆಲ್ಲಾ ಅಪಹರಣದ ಘಟನೆಯು ಈ ರೀತಿ ಯಾರಿಗೂ ಪೆಟ್ಟಾಗದೆ ಕೊನೆಗೊಂಡುದರಿಂದಾಗಿ ಬಹಳ ಸಂತೋಷವಾಗಿ ರಬಹುದು. ಆದರೆ ಚೌಚಿಲ್ಲಾದಲ್ಲಿರುವ ಎಷ್ಟೋ ಮಕ್ಕಳ ತಂದೆ ತಾಯಿಯರು ತಮ್ಮ ಮಕ್ಕಳಿಗಾಗಿ ಅವರು ಸಮಯಕ್ಕೆ ಸರಿಯಾಗಿ ಮನೆಗೆ ತಲುಪಿ ದಿದ್ದೊಡನೆ ಇವತ್ತಿಗೂ ಕಳವಳಪಡುತ್ತಿದ್ದಾರೆ. ಅಪಹೃತರಾದ ಮಕ್ಕಳಲ್ಲಿ ಕೆಲವರು ಈಗಲೂ ಒಬ್ಬಂಟಿಗರಾಗಿರಲು ಭಯಪಡುತ್ತಾರೆ. ಬಸ್ಸಿನಲ್ಲಿ ಸಿಕ್ಕಿ ಬಿದ್ದ ಹುಡುಗರಲ್ಲಿ ಒಬ್ಬನಂತೂ ಆ ದಿನದ ಘಟನೆಗಳಿಂದಾಗಿ ಮೂಕನಾಗಿಬಿಟ್ಟಿದ್ದ. ಆತನಿಗೆ ಪುನಃ ಮಾತನಾಡಲು ಬರುವಂತೆ ಕೆಲವು ತಿಂಗಳುಗಳೇ ಬೇಕಾದವು.

✡

ರಂಗ ಕೃಷ್ಣ ಅಸುಂಡಿ

# ನಮ್ಮ ಕವಿತೆಯು

ಲೇಖಕರು ನಮ್ಮ ದೇಶದ ಅಗ್ರಮಾನ್ಯ ಭೌತವಿಜ್ಞಾನಿಯಾಗಿ ಬಾಳಿದವರು. ಆದರೆ ವಿಜ್ಞಾನದಲ್ಲಿದ್ದಷ್ಟೇ ಗಾಢ ಆಸಕ್ತಿ ಅವರಿಗೆ ಸಾಹಿತ್ಯದಲ್ಲೂ ಇತ್ತು, ಆಧ್ಯಾತ್ಮದಲ್ಲೂ ಇತ್ತು. ನವೋದಯ ಕನ್ನಡ ಸಾಹಿತ್ಯ ಭ್ರೂಣಾವಸ್ಥೆಯಲ್ಲಿದ್ದ ಕಾಲದಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘದ ಮುಖಪತ್ರಿಕೆಯಾಗಿದ್ದ 'ವಾಗ್ಭೂಷಣ'ದಲ್ಲಿ ಬಂದ ಅವರ ಈ ಲೇಖನವನ್ನು ನೋಡಿದರೆ ಅವರ ಕಾವ್ಯಚಿಂತನ ಅದೆಷ್ಟು ಪ್ರಬಲವಾಗಿತ್ತು ಎಂಬುದರ ಕಲ್ಪನೆ ಬಂದೀತು.

ಕ್ರೈಸ್ತಶಕ ೧೯ನೇ ಶತಮಾನದ ಪೂರ್ವದಲ್ಲಿ ನೂರಿನ್ನೂರು ವರುಷಗಳ ತನಕ ಆಂಗ್ಲ ಕವಿತೆಯು ಸಹಜತ್ವದಲ್ಲಿ ಕುಂದುತ್ತ ಹೋಗಿ ಕೃತ್ರಿಮತ್ವದಲ್ಲಿ ಹೆಚ್ಚುತ್ತ ನಡೆಯಿತು. ಕವಿಗಳು ಸ್ವಾಭಾವಿಕ ವಸ್ತುಗಳನ್ನು ಸಹ ಕೃತ್ರಿಮ ವಸ್ತುಗಳಿಗೆ ಹೋಲಿಸತೊಡಗಿದರು. ಉನ್ನತ ವಿಚಾರಗಳನ್ನು ಕೂಡ ಪ್ರಾಪಂಚಿಕ ಪದ್ಧತಿಯಲ್ಲಿಯೇ ಹೇಳಹತ್ತಿ, ಅವುಗಳ ಗಾಂಭೀರ್ಯವನ್ನು ಸವಿಸಹತ್ತಿದರು. ಸಾರಾಂಶ. ಕೃತ್ರಿಮ ವಸ್ತುಗಳಿಂದಲೇ ಅವರು ಸ್ಫೂರ್ತಿಯನ್ನೇರಿ ಕವಿತ್ವದ ಜೀವನವಾದ ಸರಳತನವನ್ನು ಕಳೆಯಲಾರಂಭಿಸಿದರು. ಕೇವಲ ವಿದ್ವತ್ತೆಯು ಮಾಟಿನಿಂದಲೇ ಕವಿತ್ವದ ಮೇಲ್ಮೆಯನ್ನು ಅಳೆಯಲುಜ್ಜುಗಿಸಿದರು. ಹೀಗಾಗಿ ಕವಿಗಳಿಗೆ ಮುಖ್ಯವಾಗಿ ಬೇಕಾದ ಉತ್ಕಟ ಕಲ್ಪನಾಶಕ್ತಿಯು ಕಳೆಗುಂದುತ್ತ ನಡೆಯಿತು. ಅಳತೆಯಿಲ್ಲದಂಥ ಪರಮಾತ್ಮನಿಂದ ಉತ್ಪತ್ತಿಯಾದಂಥ ಸೃಷ್ಟಿ ಸೌಂದರ್ಯವನ್ನು ತಳೆದೂ, ಮೇರೆಗಟ್ಟಿದ್ದೂ ಮಾನವನಿಂದ ಉಂಟಾದದ್ದೂ ಆದ ಕೃತ್ರಿಮ ಸೊಬಗಿನಲ್ಲಿಯೇ ಆಡಬಿಟ್ಟ ಅಂತಃಕರಣವು ಕೋಮಲತ್ವವನ್ನಗಲಿ ಕಲ್ಪನಾಶಕ್ತಿಯಲ್ಲಿ ಕೀಳು ತರದ್ದಾದರೇನಾಶ್ಚರ್ಯ!

ಕೊನೆಗೆ ೧೯ನೇ ಶತಮಾನದ ಆದಿಭಾಗದಲ್ಲಿ ವರ್ಡ್ಸ್‌ವರ್ಥ್, ಕೋಲರಿಜ್, ಬೈರನ್, ಶೆಲಿ, ಕೀಟ್ಸ್ ಮೊದಲಾದ ಕವಿವರ್ಯರು ಜನ್ಮತಾಳಿ, ತಮ್ಮ ಪ್ರನೂತನವಾದ ಶೈಲಿಯಿಂದ ಇಡೀ ಆಂಗ್ಲ ಕವಿತೆಯ ಸ್ವರೂಪವನ್ನೇ ಬದಲು ಮಾಡಿಬಿಟ್ಟರು. ಈ ನವೀನ ಪರಂಪರೆಯ ಕವಿಗಳು ಸೃಷ್ಟಿಸೌಂದರ್ಯಕ್ಕೆ ಮನಸೋತು, ಅದರಿಂದಲೇ ಸ್ಫೂರ್ತಿಯನ್ನೂ ಪ್ರತಿಭೆಯನ್ನೂ ಹೊಂದಿದ್ದರಿಂದ ಅವರ ಕಲ್ಪನಾಶಕ್ತಿಯು ಬೆಳೆಯುವದಕ್ಕೆ ಸಾಕಷ್ಟು ಅನುಕೂಲವಾಯಿತು. ಈ ಎರಡು ತರದ ಕವಿಗಳಲ್ಲಿದ್ದ ವ್ಯತ್ಯಾಸವು ಮುಂದಿನ ಉದಾಹರಣೆ

ದಿಂದ ಒಡೆದು ಕಾಣುವದು. ಹದಿನೇಳನೆಯ ಶತಮಾನದವನಾದ ಪೋಪನು ಚಂದ್ರನನ್ನು ರಾತ್ರಿಯಲ್ಲಿ ಹೊಳೆಯುವ ದೀಪಕ್ಕೆ ಹೋಲಿಸುತ್ತಾನೆ, ಅದೇ ಹೊಸ ಮಾದರಿಯವನಾದ ಶೆಲಿಯು, ಚಂದ್ರನಿಗೆ ತೇಜಸ್ಸಿನಿಂದ ಹೊಳೆಯುವ ನಭೋ ಮಂಡಲದ ಕನ್ನಿಕೆಯ ಉಪಮೆಯನ್ನು ಕೊಡುತ್ತಾನೆ.

ಹೀಗೆ ಬಲಪಡುತ್ತ ಆಂಗ್ಲಕವಿಗಳ ಕಲ್ಪನಾಶಕ್ತಿಯು ಸ್ವಲ್ಪಾವಧಿಯಲ್ಲಿಯೇ ಪಕ್ವ ದಸೆಯನ್ನು ಹೊಂದಹತ್ತಿತು. ಹಾಗು ಈ ಪ್ರವೃತ್ತಿಗೆ ತಕ್ಕಂತೆ ಕವಿಗಳು ಉದ್ದನ್ನ ಐತಿಹಾಸಿಕ ಕಾವ್ಯಗಳ ಬದಲು ಚುಟುಕಿಗಳನ್ನೂ ಚಿಕ್ಕ ಕಾವ್ಯಗಳನ್ನೂ ರಚಿಸಿ ತಮ್ಮ ಕಲ್ಪನಾಶಕ್ತಿಯ ಪ್ರೌಢಿಮೆಯಿಂದ ರಸಿಕರ ಚಿತ್ತವನ್ನು ಎಡೆಬಿಡದೆ ಎಳೆಯಹತ್ತಿದರು. ಅದರಲ್ಲಿಯೂ ಶೆಲಿಯು ಕಲ್ಪನಾಶಕ್ತಿಯಲ್ಲಿ ಮಿಕ್ಕೆಲ್ಲ ಕವಿಗಳನ್ನೂ ಹಿಮ್ಮೆಟ್ಟಿಸುತ್ತಾನೆ. ಆತನ ಕಲ್ಪನೆಯೆಂಬ ಖಗವು ವ್ಯೋಮ್ನಿಕ ಸ್ಫೂರ್ತಿಯನ್ನೇ ಪಕ್ಕವಾಗಿ ಮಾಡಿಕೊಂಡು ಕಾವ್ಯಗಿರಿಯ ಅತ್ಯುಚ್ಚ ಶಿಖರದಲ್ಲಿ ಹರುಷದಿಂದ ಹಾರಾಡುತ್ತದೆ. ಅವನು ಒಂದೆಡೆಯಲ್ಲಿ, "ಮುಗಿಲು ಹರಿದು ಬಿದ್ದರೆ, ನಮಗೆ ತಿರಿಥವು ಸಿಗುವದಿಲ್ಲ!" ಎಂದುಸುರಿ ಕಲ್ಪನೆಯ ಸೀಮಾಂತವನ್ನೇ ಮುಟ್ಟಿರುವನು. ಇದರಂತೆಯೇ ಬೈರನ್ನನಾದರೂ ಒಮ್ಮೊಮ್ಮೆ ಕಲ್ಪನಾಶಕ್ತಿಯಲ್ಲಿ ಶೆಲಿಯನ್ನು ಸರಿಗಟ್ಟುವನು. ಒಮ್ಮೆ ಆತನು "The Holy Wine" (ಪವಿತ್ರವಾದ ಆಸವ) ವೆಂಬ ಬೈಬಲ್ಲಿನ ಸರಾಯಿಯನ್ನು ಕುರಿತು ಕವಿತೆಯನ್ನು ಬರೆಯಬೇಕೆಂದು ಪರೀಕ್ಷಕರು ಹೇಳಲು ಇಡೀ ಮೂರು ತಾಸು ಸುಮ್ಮನೆ ಅತ್ತಿತ್ತ ನೋಡುತ್ತ ಕಳೆದು, ಕೊನೆಗೆ ಗಂಟೆಯಾದ ಬಳಿಕ "ಉದಕವು ತನ್ನೊಡೆಯನನ್ನು ನೋಡಿ ಉಕ್ಕೇರಿತು" (The water saw its Lord and blushed) ಎಂಬ ಒಂದೇ ಒಂದು ಪಂಕ್ತಿಯನ್ನು ಬರೆದುಕೊಟ್ಟು ಇನಾಮನ್ನು ಪಡೆದದ್ದು ಆತನ ಜೀವನ ಚರಿತ್ರದಲ್ಲಿ ನೆನಪಿಡತಕ್ಕ ಸಂಗತಿಯಾಗಿದೆ.

ಇಷ್ಟರಿಂದ ನಮ್ಮ ವಾಚಕರಿಗೆ ಆಂಗ್ಲಕವಿತೆಯು ಇಷ್ಟು ಲೋಕಪ್ರಿಯವಾಗಲಿಕ್ಕೆ ಕಾರಣವೇನೆಂಬುದು ಸ್ಪಷ್ಟವಾಗಿರಲಿಕ್ಕೆ ಸಾಕು. ಅವರು ತಮ್ಮ ಮನಸ್ಸಿನಲ್ಲಿ ಆಂಗ್ಲಕವಿತಾವಳಿಗಳ ಬಗ್ಗೆ ಅತ್ಯುಚ್ಚ ಆದರವನ್ನು ಬೆಳೆಸಿರಬಹುದು. ಶೆಲಿಯ ಹಾಗೂ ಬೈರನ್ನನ ಕಲ್ಪನಾಶಕ್ತಿಗೆ ತಲೆದೂಗಿ ಅಹಹ! ಆಂಗ್ಲಭಾಷೆಯು ಏನು ಧನ್ಯವೊ! ಆಂಗ್ಲಭೂಮಿಯು ಎಷ್ಟು ಮಾನ್ಯವೋ ಎಂಬ ವಿಚಾರತರಂಗಗಳಲ್ಲಿ ಅವರು ತೇಲಾಡುತ್ತಿರಬಹುದು. ಆದರೆ ವಾಚಕರೇ. ಇಂಥ ಕಲ್ಪನಾಶಕ್ತಿಯು ನಮ್ಮ ಕವಿಗಳಲ್ಲಿಯೂ ಸಿಗುತ್ತದೆ. ಬೈರನ್, ಕೀಟ್ಸ್, ಶೆಲಿ ಮುಂತಾದವರಿಗಿಂತ ಹೆಚ್ಚಿನ ಪ್ರಭುತ್ವದಿಂದ ನಮ್ಮ ಹಲವು ಕವಿಗಳು ಕಲ್ಪನಾಶಕ್ತಿಯ ಅತ್ಯುತ್ತಮೋತ್ತಮವಾದ ನಿರ್ಮಾಣಗಳನ್ನು ವ್ಯಕ್ತಪಡಿಸಿರುವರು, ಎಂಥ ಕವಿತೆಯನ್ನು ಬರೆಯಲಿಕ್ಕೆ ಆಂಗ್ಲಕವಿಗಳು ಬುದ್ಧಿಪೂರ್ವಕವಾಗಿ ಪ್ರಯತ್ನಮಾಡುವರೋ ಅಂಥ ಕವಿತೆಯನ್ನು ಬರೆಯುವದು ಹಿಂದೂ ಕವಿಗಳಿಗೆ ಹುಟ್ಟುಗುಣವಾಗಿದೆ. ಇದೆಲ್ಲವನ್ನು ಲಕ್ಷಕ್ಕೆ ತಂದರೆ ಈಗಿನ ನಮ್ಮ ಕವಿತೆಯಲ್ಲಿ ಕಂಡು ಬರುವ ಕುಂದುಗಳಿರಲಿಕ್ಕೆ ಕಾರಣವೇನು, ಅವುಗಳನ್ನು ದೂರ ಮಾಡುವ ಬಗೆಯೆಂತು ಎಂಬಿವೇ ಪ್ರಶ್ನೆಗಳಿಗೆ ಸಮರ್ಪಕ ಉತ್ತರವು ದೊರೆಯಬಹುದು.

ಕವಿತ್ವವು ಆಧ್ಯಾತ್ಮಿಕವೇ ಹೊರತು ಆದಿಭೌತಿಕವಾಗಲಾರದು. ಆಧ್ಯಾತ್ಮಿಕ ವಿಚಾರಗಳ ಬಳಕೆಯ ಪ್ರಮಾಣದಿಂದಲೇ ಕವಿತೆಯ ಹೆಚ್ಚಳವನ್ನು ಕಂಡುಹಿಡಿಯಬೇಕು. ಕ್ಷಣಿಕವಾದ ಐಹಿಕ ವಿಚಾರಗಳು ಎಷ್ಟು ಉದಾತ್ತವಾದ ರೀತಿಯಿಂದ ವ್ಯಕ್ತವಾದರೂ ಅವು ಕವಿತ್ವವನ್ನು ಒಂದು ಹೆಜ್ಜೆಸಹ ಮುಂದೆ ಒಯ್ಯಲಾರವು. ಸದ್ಯಕ್ಕೆ ಆಂಗ್ಲಕವಿತೆಯಲ್ಲಿ ಉಂಟಾದ ಕ್ರಾಂತಿಯಾದರೂ ಈ ಸಿದ್ಧಾಂತದ ದ್ಯೋತಕವೇ ಸರಿ. ಆಂಗ್ಲೇಯರಲ್ಲಿ ತತ್ತ್ವಜ್ಞಾನಿಗಳಾಗಿ ಹೋದರು. ಅವರು ತತ್ತ್ವಜ್ಞಾನವನ್ನು ವಿಚಾರ ಮಾತ್ರದಲ್ಲಿ ಸಾಧಿಸುತ್ತಿದ್ದರಲ್ಲದೆ, ತಮ್ಮ ವಿಚಾರದ ಮನವರಿಕೆಗಳನ್ನು ಆಚರಣದಲ್ಲಿ ಸಾಧಿಸಿ ಅನುಭವ ಪಡೆಯುವ ಉದ್ಯೋಗಕ್ಕೆ ಇದುವರೆಗೆ ಕೈಹಾಕಿದ್ದಿಲ್ಲ. ಆದರೆ ಇತ್ತಿತ್ತ ಅವರಲ್ಲಿಯಾದರೂ ಪರಮಾರ್ಥದ ಬಗ್ಗೆ

ನವಜೀವನವು ಉಂಟಾದ್ದರಿಂದ ಇಂಥ ಹೊಸ ಚೇತನವನ್ನನುಸರಿಸಿಯೇ ಆಂಗ್ಲಕವಿತೆಯು ಐಹಿಕ ಮಂಡಲದಿಂದ ಆಧ್ಯಾತ್ಮಿಕ ಮಂಡಲಕ್ಕೆ ಏರ ಹತ್ತಿದೆ. ಹತ್ತೊಂಬತ್ತನೇ ಶತಮಾನದ ಹೊಸ ಪ್ರವೃತ್ತಿಯು ಈ ಬಗೆಯ ಸೋಪಾನದ ಒಂದು ದಾವಟಿಗೆಯು.

ಆದರೆ ಹಿಂದೂಸ್ಥಾನದ ಮಾತೇ ಬೇರೆ. ಇಲ್ಲಿಯ ಸ್ಫೂರ್ತಿಯೆಂದರೆ ನೈಸರ್ಗಿಕ ಹಾಗು ಆಧ್ಯಾತ್ಮಿಕ ಸ್ಫೂರ್ತಿಯೇ. ನಿಸರ್ಗದೇವತೆಯು ಆಳುವ ಸಾಮ್ರಾಜ್ಯವೇ ಇಲ್ಲಿಯ ಕವಿಗಳ ಕಲ್ಪನಾ ಸಾಮ್ರಾಜ್ಯವು. ಅಂದ ಬಳಿಕ ಐಹಿಕ ವಿಚಾರಗಳು ಎಷ್ಟು ಮನೋವೇಧಕಗಳಿದ್ದರೂ ಹಿಂದೂ ಕವಿಗಳು ಅವುಗಳನ್ನು ಹೀಯಾಳಿಸಿ ತಮ್ಮ ಅಂತಃಕರಣದ ಪ್ರವೃತ್ತಿಯನ್ನು ಆಧ್ಯಾತ್ಮಿಕದಲ್ಲಿಯೇ ಹರಿಬಿಟ್ಟದ್ದರಿಂದ ಅವರ ಸ್ಫೂರ್ತಿಯೂ ಕಲ್ಪನಾಶಕ್ತಿಯೂ ಮೊದಲೇ ಮೇಲು ತರಗತಿಯವಾಗಿವೆಂಬುದು ಏನು ಸೋಜಿಗವು! ಇನ್ನು ಇಂಥ ಸ್ಫೂರ್ತಿಯನ್ನು ಹೊಂದಿದ್ದ ಕವಿಗಳು ನಮ್ಮಲ್ಲಿ ಕೆಲವರು ಆಗಿಹೋಗಿರುವರೆಂಬ ಮಾತು ಸುಳ್ಳಲ್ಲ. ನಾವು ನೆನಪಿಡತಕ್ಕ ಒಂದೇ ಸಂಗತಿಯೆಂದರೆ, ಇಂಥ ಕವಿಗಳು ನಮ್ಮಲ್ಲಿದ್ದರೂ ಅವರ ಕವಿತ್ವವು ನಮ್ಮನ್ನು ಪ್ರೇರಿಸಲಾರದು, ಅವರ ಕಲ್ಪನಾಶಕ್ತಿಯು ನಮ್ಮನ್ನು ಮೋಹಿಸಲಾರದು. ತನ್ನ ಅರ್ಥಗಾಂಭೀರ್ಯದಿಂದ ನಮ್ಮಲ್ಲಿ ಆತ್ಮವಿಶ್ವಾಸವನ್ನುಂಟುಮಾಡುವಂಥ ಕಲ್ಪನಾಶಕ್ತಿಯಿಂದ, ನಮ್ಮ ಬೊಟ್ಟು ಕಚ್ಚಿಸುವಂಥ ಸ್ಫೂರ್ತಿಯಿಂದ, ನಮ್ಮನ್ನು ತನ್ನ ಸೆಳವಿನ ಸಂಗಡ ಎಳೆದೊಯ್ದು ಮನಸ್ಸು, ಇಂದ್ರಿಯಗಳಿಗೆ ಆನಂದವನ್ನೀಯುವವಲ್ಲದೆ ಆತ್ಮಶಾಂತಿಯನ್ನೂ ಆತ್ಮೋನ್ನತಿಯನ್ನೂ ದೊರಕಿಸಿಕೊಡುವಂಥ ಕವಿತೆಯನ್ನು ಬರೆಯಬೇಕಾದರೆ ಕವಿಯು ಉನ್ನತಾತ್ಮನೇ ಇರಲಿಕ್ಕೆ ಬೇಕು.

(‘ವಾಗ್ಭೂಷಣ’ದ ೧೯೧೯ರ ಸಂಚಿಕೆಯೊಂದರಿಂದ)



**ಭಾಷಾವಿಜ್ಞಾನ ಮತ್ತು ಸಾಹಿತ್ಯ ಹಾಗೂ ಸಾಹಿತ್ಯ ಚರಿತ್ರೆ ಇವುಗಳ ನಡುವೆ ಗಡಿಸೀಮೆಯು ನಂಟು. ಸಾಹಿತ್ಯದ ಇತಿಹಾಸ ಭಾಷಾವಿಜ್ಞಾನದ ನೆರವಿಲ್ಲದೆ ಅಪೂರ್ಣವಾಗುತ್ತದೆ ಎಂಬುದು ಒಂದು ಅಭಿಪ್ರಾಯ; ಭಾಷೆಯ ಸೌಂದರ್ಯ ಮುಖದತ್ತ ಗಮನ ಹಾಯಿಸದಿರುವುದು ಭಾಷಾವಿಜ್ಞಾನದ ಒಂದು ಕೊರತೆ ಎನ್ನುವುದು ಮತ್ತೊಂದು ಅಭಿಪ್ರಾಯ. ಒಂದು ಸ್ತರದಲ್ಲಿ ಇವು ಒಂದಕ್ಕೊಂದು ಪೂರಕ. ಇದಕ್ಕೆ ಕಾರಣ ಎರಡರ ಮೂಲದ್ರವ್ಯವೂ ಭಾಷೆ. ಭಾಷೆಯನ್ನು ಕುರಿತಂತೆ ಕವಿಯ ವಿಚಾರಗಳು ವೈಜ್ಞಾನಿಕ ಚೌಕಟ್ಟಿಗೆ ಸಿಕ್ಕದೆ ಹೋಗಬಹುದು. ಆದರೆ ಈ ವಿಚಾರಗಳು ಭಾಷಾವಿಜ್ಞಾನಿಯ ವಿಚಾರಗಳಿಗೆ ಧಕ್ಕೆಯೊದಗದಂತೆ ಭಾಷೆಯ ಸ್ವರೂಪಕ್ಕೆ ಒಂದು ಹೊಸ ದನಿಯನ್ನೂ ಬಣ್ಣವನ್ನೂ ನೀಡುತ್ತವೆ**

**-ಹಾ. ಮಾ ನಾಯಕ ‘ಸಂವಾದ’ದಲ್ಲಿ**

**ಸದಾಶಿವ ಕೋಟೂರ**
**ಚಿತ್ರಗಳು: ಗೋವಿಂದ ಬಳ್ಳಮೂಲೆ**

ಈ ಜನ
ಎಲ್ಲಿಂದ ಬಂದರು ?
ಮತ್ತು
ಎಲ್ಲಿಗೆ ಹೋದರು?

# ಇಂಕಾ ರಹಸ್ಯಗಳು

ದಕ್ಷಿಣ ಅಮೇರಿಕದಲ್ಲಿ ಶೋಭಿಸಿದ ಹಲವು ನಾಗರಿಕತೆಗಳಲ್ಲಿ ಕೊನೆಯದು "ಇಂಕಾ" ಜನಾಂಗದ ಸಂಸ್ಕೃತಿ, ನಾಗರಿಕತೆ. ಇದಕ್ಕೂ ಮೊದಲು ಅಲ್ಲಿ ನೆಲಸಿದ್ದ ಮಾಯಾ, ಟಾಲ್ಟೆಕ್ಸ್–ಅಸ್ಟೆಕ್ಸ್ ಸಂಸ್ಕೃತಿ ಗಳಿಗಿಂತ ಇವರದು ತುಂಬ ಭಿನ್ನವಾಗಿತ್ತು.



ಶಿಸ್ತುಬದ್ಧ ನಾಗರಿಕ ಜೀವನವನ್ನು ಆ ಜನ ನಡೆಸುತ್ತಿದ್ದರೆಂಬುದನ್ನು ಅವರ ಕುರುಹುಗಳು ಸೂಚಿಸುತ್ತವೆ.

ಪೆರುವಿನ ಉರುಬಾಂಬ ನದಿಯ ಇಕ್ಕೆಲದ ಉತ್ತುಂಗ ಶಿಖರದಲ್ಲಿ ಇಂಕಾ ಜನರ ಮನೆ. ಕೋಟೆ ಗುಡಿಗಳ ಅವಶೇಷಗಳಿರುವ ಇಂಕಾ ನಗರವಿದೆ. ಸಮುದ್ರ ಮಟ್ಟದಿಂದ ೨೫೦೦ ಮೈಲು ಎತ್ತರದ ಈ ಸ್ಥಳವನ್ನು ಹಿರಾಂ ಬಿಂಘಮ್ ಎಂಬಾತ ೧೯೧೧ ರಲ್ಲಿ ಇದನ್ನು ಬೆಳಕಿಗೆ ತಂದ.

ಕ್ರಿಸ್ತಪೂರ್ವ ಒಂದನೆ ಶತಕದ ಉತ್ತರಾರ್ಧದಲ್ಲಿ ಪೆರುವಿನ ಆ್ಯಂಡೀಸ್ ಪರ್ವತದ ತಪ್ಪಲಿನಲ್ಲಿ ಜೀವಿಸತೊಡಗಿದ. ಏಶಿಯಾದಿಂದ ವಲಸೆ ಬಂದ ಇಂಡೋ – ಅಮೇರಿಕನ್ ಪಂಗಡ ಅಲ್ಲಿಯೆ ಹೊಸ ರಾಜ್ಯ ಸ್ಥಾಪಿಸಿತೆಂದು ಇತಿಹಾಸಕಾರರು ತಿಳಿಯುತ್ತಾರೆ.

'ಇಂಕಾ' ಎಂದರೆ ಸೂರ್ಯಪುತ್ರ ಎಂದರ್ಥ. ಅವರು ರಮ್ಯ ಮಂತ್ರಕ್ಕೂ ಅದೇ ಹೆಸರನ್ನಿಟ್ಟರು. ಸೂರ್ಯನನ್ನೇ ಮುಖ್ಯ ಆರಾಧ್ಯದೈವವನ್ನಾಗಿ ಮಾಡಿಕೊಂಡಿದ್ದರು.

ಬೇಟೆ, ಪಶುಪಾಲನಾದಿ ಆಹಾರ,

ಸೇವಿಸುತ್ತಿದ್ದ ಇವರು ಕ್ರಮೇಣ ಕೃಷಿ ಮಾಡುವುದನ್ನು ಕಲಿತುಕೊಂಡರು. ಇವರ ಪ್ರಥಮ ಕೃಷಿ ಜೋಳವಾಗಿತ್ತು. ನಂತರ ಅವರಲ್ಲೊಬ್ಬ ಮುಖಂಡನಾದ; ರಾಜ್ಯ ಸ್ಥಾಪನೆಯಾದ ನಂತರ ಆತ ರಾಜನಾದ. ಆಡಳಿತ ಉನ್ನತ ಮಟ್ಟದ್ದಾಗಿ ಶಿಸ್ತುಬದ್ಧವಾಗಿತ್ತಾದರೂ ಜನರು ಸ್ವತಂತ್ರರಾಗಿದ್ದರು. ಇವರಿಗೆ ಲಿಖಿತ ಭಾಷೆ, ಹಣಕಾಸು ಇರಲಿಲ್ಲ. 'ರುನಾಸಿಸಿ' ಎಂಬ ಭಾಷೆಯಿತ್ತೆಂದು ಚರಿತ್ರೆಯಲ್ಲಿ ಉಲ್ಲೇಖವಿದೆ. ೧೫೬೦ರಲ್ಲಿ ಈ ಭಾಷೆಯಲ್ಲಿ ವ್ಯಾಕರಣ, ಶಬ್ದಕೋಶಗಳನ್ನು ರಚಿಸಲಾಯಿತು. ೧೮ನೆಯ ಶತಮಾನದ ನಂತರ ಈ ಭಾಷೆಯ ಸ್ಥಾನವನ್ನು ಸ್ಪಾನಿಶ್ ಆಕ್ರಮಿಸಿಕೊಂಡಿತು.

ಪಶು ಸಂಗೋಪನವಾಗಲಿ ದೈವತಾರಾಧನೆಯಾಗಲಿ ತುಂಬ ತಡವಾಗಿಯೇ ಆರಂಭವಾದರೂ ಇವರ ಸಂಸ್ಕೃತಿಗೆ ಅದೊಂದು ಮುಖ್ಯ ತಿರುವನ್ನು ಕೊಟ್ಟಿತು. ಆಹಾರಕ್ಕೆಂದು ಬಾತುಕೋಳಿ ಹಾಗೂ ಅದರ ಜಾತಿಗೆ ಸೇರಿದ ಪಕ್ಷಿಗಳನ್ನು ಸಾಕತೊಡಗಿದರು. ಮೃಗದ ರೋಮಗಳಿಂದ ಉಡುಪನ್ನು ಮಾಡತೊಡಗಿದರು. ದೇವರಿಗೆ ಪ್ರಾಣಿಗಳನ್ನು ಬಲಿ ಕೊಡುತ್ತಿದ್ದರು. ಅಪರೂಪಕ್ಕೆಂಬಂತೆ ನರಬಲಿಯನ್ನೂ ಕೊಡುತ್ತಿದ್ದರು. ಸೂರ್ಯನೇ ಮುಖ್ಯ ದೈವವಾಗಿದ್ದ ಇವರಿಗೆ ಸಮುದ್ರ, ಮಿಂಚುಗಳೂ ಪೂಜ್ಯವಾಗಿದ್ದವು. ಮನುಷ್ಯ ಮುಖದ ಸುತ್ತಲೂ ಪ್ರಭಾವಳಿಯುಳ್ಳ ವಿಗ್ರಹವೆ ಸೂರ್ಯದೇವ. ಇವರ ರಾಜಧಾನಿಯಾಗಿದ್ದ 'ಟಿಯಾಹ್ವಾನ್ಕೊ'ದಲ್ಲಿನ ಸೂರ್ಯದ್ವಾರ ಅವರು ಸೂರ್ಯಾರಾಧಕರಾಗಿದ್ದರೆನ್ನುವುದನ್ನು ತೋರಿಸುತ್ತದೆ. ಇವುಗಳ ಹೊರತಾಗಿ ಇವರು ಇತರ ದೇವತೆಗಳನ್ನೂ ಆರಾಧಿಸುತ್ತಿದ್ದರೆಂದು ಅಲ್ಲಿನ ಹಲವು ಶಿಲ್ಪಗಳು ಸೂಚಿಸುತ್ತವೆ. ಮನುಷ್ಯನ ಮುಖಗಳಿರುವ ಇವು ವಿಚಿತ್ರ ಭಂಗಿಯಲ್ಲಿವೆ. ಇವರಿಗೆ ಮನುಷ್ಯನ ಬಗ್ಗೆ ದೈವದ ಬಗ್ಗೆ ಸ್ಪಷ್ಟ ಕಲ್ಪನೆಯಿತ್ತೆಂದು ತಿಳಿಯಬಹುದು.



ಸೂರ್ಯದ್ವಾರ

## ಅಭೇದ್ಯ ರಹಸ್ಯಗಳು

ಕಲ್ಲಿನ ಸುತ್ತಿಗೆ, ನಾರಿನ ಹಗ್ಗ, ಮಿಶ್ರಲೋಹದ ಉಳಿ, ಮರದ ಹಾರೆ, ಪ್ಲಾಟಿನಂ ಲೋಹದ ಕೊಡಲಿ ಮುಂತಾದ ಸಲಕರಣೆಗಳನ್ನು ಆ ಜನ ಬಳಸುತ್ತಿದ್ದು ಸಂತುಷ್ಟ ನಾಗರಿಕ ಜೀವನವನ್ನು ನಡೆಸುತ್ತಿದ್ದರು.

ಕ್ರಿಸ್ತಶಕ ೬೦೦ ರಿಂದ ೧೧೦೦ರವರೆಗೆ ಟಿಟಿಕಾಕ್ ಸರೋವರದ ಬಳಿಯಲ್ಲಿನ ಬೊಲಿವಿಯ ದೇಶದ ಟಿಯಾಹ್ವಾನ್ಕೊ ಈ ಜನರ ರಾಜಧಾನಿಯಾಗಿತ್ತು. ೪೩೦೦ ಮೀಟರ್ ಎತ್ತರದ ದಿನ್ನೆಯೊಂದು 'ಇಲ್ಲಿನ' ಅಪೂರ್ವ ದೃಶ್ಯ.

ಕ್ರಿಸ್ತಶಕ ೧೦೦೦ದಲ್ಲಿ ಉತ್ತರ ಪೆರುವಿನಲ್ಲಿ 'ಚಿಮೋರ್' ರಾಜವಂಶ ಉದಯವಾಯಿತು. ಅದರ ರಾಜಧಾನಿ ಚಂಚನ್ ವಿಸ್ತೀರ್ಣದಲ್ಲಿ ೨೧ ಚದರ ಕಿಲೊಮೀಟರುಗಳಷ್ಟಿದ್ದು, ಆ ಕಾಲದಲ್ಲಿ ಲೋಕದಲ್ಲೇ ಅತ್ಯಂತ ಶ್ರೀಮಂತ ನಗರಗಳಲ್ಲೊಂದಾಗಿತ್ತು.

ಶಕ್ತಿಶಾಲಿಯಾದ ಇಂಕಾ ಸಮೀಪದ ಕೆಲವು ರಾಜ್ಯಗಳನ್ನು ಆಕ್ರಮಿಸಿ ದೊಡ್ಡದಾಯಿತು. ಈ ಜನ ಯುದ್ಧದಲ್ಲಿ ಸೆರೆ ಸಿಕ್ಕ ಸೈನಿಕರಿಂದ ಬೃಹತ್ ಕೋಟೆಗಳನ್ನೂ ದೇವಾಲಯಗಳನ್ನೂ ನಿರ್ಮಾಣ ಮಾಡಿಸಿದರು. ಸೆರೆ ಸಿಕ್ಕವರ ಭಾಷೆ, ಸಂಸ್ಕೃತಿಗಳನ್ನು ಅಭ್ಯಸಿಸಿದರು; ಇದರಿಂದ ಇವರು ಕೈದಿಗಳನ್ನು ಸರಿಯಾಗಿ ನೋಡಿಕೊಳ್ಳುತ್ತಿದ್ದರು ಎಂದು ತಿಳಿಯಬಹುದು. ರಾಜಧಾನಿ 'ಕುಜ್ಕೊ'ವನ್ನು ಕಾಯುವ 'ಸಕ್ಸಾಯ್‌ಹುಮಾನ್' ಕೋಟೆಯನ್ನು ೩೦೦ ಟನ್ನುಗಳಷ್ಟು ಭಾರವಾದ ಗುಂಡುಕಲ್ಲುಗಳಿಂದ ರಚಿಸಲಾಗಿದೆ. ಯಾವುದೇ ಸಾಧನಗಳಿಲ್ಲದೆ ಕಲ್ಲುಗಳನ್ನು ಮೈಲುಗಟ್ಟಲೆ ಹೇಗೆ ಸಾಗಿಸಿದರೆನ್ನುವುದು ಇನ್ನೂ ರಹಸ್ಯವಾಗಿಯೆ ಇದೆ. ಯಾವುದೆ ಗಾರೆಯಿಲ್ಲದೆ ಇದನ್ನು ಎಷ್ಟು ಭದ್ರವಾಗಿ ಕಟ್ಟಲಾಗಿದೆಯೆಂದರೆ ಕತ್ತಿಯ ಅಲಗನ್ನೂ ಇದರೊಳಗೆ ತೂರುವುದು ಅಸಾಧ್ಯ. ಇದೇ ರೀತಿಯಲ್ಲಿ ನಿರ್ಮಿಸಿದ ಕೆಲವು ದೇವಾಲಯಗಳೂ ಇವೆ. ಬರಿ ಮರದ ಹಾರೆ, ಕಲ್ಲಿನ ಸುತ್ತಿಗೆಯಿಂದ ಹೇಗೆ ಈ ರೀತಿಯ ಕೆಲಸಗಳನ್ನು ಮಾಡಿದರೆನ್ನುವುದು ಊಹೆಗೂ ನಿಲುಕದ ವಿಷಯ.

ಕ್ರಿಸ್ತಪೂರ್ವ ೮೫೦ರಲ್ಲಿ ಆ್ಯಂಡೀಸ್ ಪರ್ವತದ ಕೇಂದ್ರಭಾಗ 'ಚಾವಿನ್ ಡಿ ಹಾಂಟರ್'ನಲ್ಲಿ ನಿರ್ಮಿಸಿದ ದೇವಾಲಯದ ಭಿತ್ತಿಗಳು, ಸ್ತಂಭಗಳು ಅಪೂರ್ವ ಶಿಲ್ಪಗಳಿಂದ ತುಂಬಿವೆ. ಅತಿ ಎತ್ತರವಾದ ಪಿರಮಿಡ್ ಇರುವುದು ಇಲ್ಲಿಯೇ; ೩೦೦ ಮೀಟರ್ ಉದ್ದ ಮತ್ತು ೧೫೦ ಮೀಟರ್ ಗಳಷ್ಟು ಅಗಲವಾಗಿದ್ದು ಇದು ಈಗ ೫೦ ಮೀಟರುಗಳಷ್ಟು ಎತ್ತರವಾಗಿದೆ. ಇದಕ್ಕೆ ಒಂದು ಕೋಟಿ ನಲವತ್ತು ಲಕ್ಷ ಇಟ್ಟಿಗೆಗಳನ್ನು ಉಪ



ಆರಾಧ್ಯ ದೇವತೆಗಳು

ಜೋಡಿಸಲಾಗಿದೆ. ಇವರ ಭಿತ್ತಿಗಳಲ್ಲಿ ಅಶ್ಲೀಲ ಹಾಗೂ ಲೈಂಗಿಕ ಚಿತ್ರಗಳ ಜಿಪಾನ ರಾಜನ, ದಯನೀಯ ಭಿಕ್ಷುಕರ ಶಿಲ್ಪಗಳಿವೆ. ಗರಿಗಳಿಂದ ಮಾಡಿದ ಕಸೂತಿ. ರೇಶ್ಮೆ ವಸ್ತ್ರವೆ ಮೊದಲಾದ ೧೫೦ ವಿಧ ಅಮೂಲ್ಯ ವಸ್ತ್ರ ಪರದೆಗಳಿವೆ.

ಅಲ್ಲಲ್ಲಿ ಹಲವು ಪಿರಮಿಡ್ಡುಗಳು ಇರುವುದರಿಂದ ಇವರು ಶವಗಳನ್ನು ಜೋಪಾನ ಮಾಡಿಟ್ಟು



ಪಿರಮಿಡ್

ಕೊಳ್ಳುತ್ತಿದ್ದರೋ ಎಂಬ ಸಂದೇಹವುಂಟಾಗುತ್ತದೆ. ಕಲ್ಲಿನಿಂದ ರಚಿಸಿದ ಪಿರಮಿಡ್ಡಿಗೆ. ಗೌರವ ಸೂಚಕವಾಗಿ ಅದರ ಮೇಲ್ಭಾಗದಲ್ಲಿ ಸೂರ್ಯನ ರೂಪವನ್ನೂ ಕೆಳಗೆ ಆನೆಯ ರೂಪವನ್ನೂ ಚಿತ್ರಿಸುತ್ತಿದ್ದರು. ಪಿರಮಿಡ್ಡಿನ ಗೋಡೆಗಳೆಲ್ಲಲ್ಲಾ ವಿಚಿತ್ರ ರೇಖೆಗಳಿವೆ.

ಪೆರುವಿನ ಬಳಿಯಲ್ಲಿ ೬ ಅಡಿ ಆಳ, ೨೩ ಇಂಚು ವ್ಯಾಸದ ೨೦೯ ಕುಣಿಗಳಿವೆ. ಇವು ಕಣಜಗಳಾಗಿದ್ದಿರಬಹುದೆ? ಅಥವಾ ಇವು ಇವರ ಯುದ್ಧ ತಂತ್ರವನ್ನು ಪ್ರತಿಬಿಂಬಿಸುವುದೆ?

ನಾಜ್ಕಾದ ಬಳಿ ಮೈಲಿಗಟ್ಟಲೆ ಹಬ್ಬಿದ ವಿಶಾಲವಾದ ಭೂಮಿಯ ಮೇಲೆ ಆಳವಾದ ರೇಖೆಗಳಿಂದ ರಚಿಸಿದ ಹಲವು ಪ್ರಾಣಿಗಳ ಚಿತ್ರವಿದೆ. ಈ ರೇಖಾ ವಿನ್ಯಾಸಗಳು ಸೂರ್ಯ ಚಂದ್ರ ಗ್ರಹಗಳ–ಸೌರ ವ್ಯೂಹದ ಚಲನೆಯನ್ನು ಸೂಚಿಸುತ್ತವೆಯೆಂದು ವಿಜ್ಞಾನಿಗಳು ಅರ್ಥವಿಸುತ್ತಾರೆ. ವ್ಯೋಮ ಯಾತ್ರಿಕನಿಗೆ ಸ್ಥಳವನ್ನು ಗುರುತಿಸಲು ಅನುವಾಗಲೆಂದು ಇದನ್ನು ರಚಿಸಿದ್ದಿರಬಹುದೆ?

ಕ್ರಿಸ್ತಪೂರ್ವ ೨೦೦ರಲ್ಲಿ ಸಿಕ್ಕಿದ ಮಣ್ಣಿನ ಪಾತ್ರೆಗಳು ಪೂರ್ವ ಏಶಿಯಾದ ಕೃತಿಗಳನ್ನು ಹೋಲುತ್ತವೆ. ಇವರಿಗೆ ಏಶಿಯಾದೊಂದಿಗೆ ಸಂಪರ್ಕವಿದ್ದಿರಬಹುದೆಂದು ನಾವು ಊಹಿಸಬಹುದು. ಹಾಗಿದ್ದರೆ ಅವರೇಕೆ ಅಲ್ಲಿನ ಭಾಷೆಯನ್ನು ವಿನಿಮಯ ಮಾಡಿಕೊಳ್ಳಲಿಲ್ಲ? ಆರನೆಯ ಶತಮಾನದಲ್ಲಿ ಪೆರುವಿನಲ್ಲಿ ಸಿಕ್ಕಿದ ಮುಖ ಪ್ರತಿಗಳು ಯಾಕೆ ಪಾಶ್ಚಿಮಾತ್ಯರನ್ನು ಹೋಲುತ್ತಿವೆ? ಮರುಭೂಮಿಯ ಕಪ್ಪು ಕಲ್ಲುಗಳಿಂದ, ಕೆಂಪು ಮಣ್ಣಿನಿಂದ ರಚಿಸಿದ ಹಲವು ಚಿತ್ರಗಳು ಇನ್ನೂ ಅಚ್ಚಳಿಯದೆ ಉಳಿದಿದ್ದು ಹೇಗೆ? ಇವೇ ಮುಂತಾದ ಇನ್ನೂ ಭೇದಿಸಲಾಗದ ಹಲವು ಸಾಂಸ್ಕೃತಿಕ ಕುರುಹುಗಳು ಇವೆ. ಈ ಜನಾಂಗದ ದಿನನಿತ್ಯದ ಬದುಕು ತುಂಬ ಸ್ವಾರಸ್ಯಕರವಾಗಿತ್ತು.

ರಾಜವಂಶ ಪಾರಂಪರ್ಯವಾಗಿ ಬರುತ್ತಿತ್ತು. ರಾಜ ತನ್ನ ಸಹೋದರಿಯನ್ನೆ ಮಹಾರಾಣಿಯನ್ನಾಗಿಸುತ್ತಿದ್ದ.

ಜನಸಂಖ್ಯೆಯನ್ನು ೧೦ ಭಾಗಗಳಾಗಿ ಮಾಡಿ ಪ್ರತಿ

ಯೊಂದಕ್ಕೂ ವಿವಿಧ ಕೆಲಸಗಳನ್ನು ಕೊಡಲಾಗುತ್ತಿತ್ತು. ದೃಢಕಾಯದ ಪ್ರತಿಯೊಬ್ಬನೂ ಸಿಪಾಯಿಯಾಗುತ್ತಿದ್ದ. ಇಂಕಾ ಜನರು ಕೃಷಿ ಉತ್ಪನ್ನಗಳನ್ನು ಸರಿಯಾಗಿ ದಾಸ್ತಾನು ಮಾಡುತ್ತಿದ್ದರು. ಪ್ರಕೃತಿ ವಿಕೋಪಗಳಿಂದಾದ ನಷ್ಟಕ್ಕೆ ನೆರೆ ರಾಜ್ಯದಿಂದ ಸಹಾಯ ಪಡೆಯುತ್ತಿದ್ದರು. ಧಾರ್ಮಿಕ ಕಾರ್ಯಗಳಿಗೆ, ಸೈನ್ಯಕ್ಕೆ ಧನವನ್ನು ಶೇಖರಿಸುತ್ತಿದ್ದರು.

ಯಾರೂ ಬಡತನದ ಜೀವನ ನಡೆಸುತ್ತಿರಲಿಲ್ಲ; ಹಾಗೆಯೇ ಐಷಾರಾಮಿ ಬದುಕೂ ಅವರದಾಗಿರಲಿಲ್ಲ. ಯಾವ ಕೃಷಿ ಮಾಡಬೇಕು, ಯಾವ ಉಡುಪು ತೊಡಬೇಕು, ಯಾರನ್ನು ಮದುವೆಯಾಗಬೇಕು ಎಂಬುದನ್ನು ಪ್ರಜೆಗಳಿಗೆ ತಿಳಿಸಲಾಗುತ್ತಿತ್ತು. ಸೋಮಾರಿತನ, ಅತ್ಯಾಚಾರಗಳನ್ನು ದಿಢೀರ್ ಭೇಟಿಯಿಂದ ತಿಳಿದು ಶಿಕ್ಷಿಸಲಾಗುತ್ತಿತ್ತು. ಅತ್ಯಂತ ಸುಂದರಿಯನ್ನಾಯ್ದು ದೇವರಿಗೆ ಬಿಡುವ ಸಂಪ್ರದಾಯವಿತ್ತು.

ಇವರ ಗಣಿತ ಜ್ಞಾನ ಅಷ್ಟುತ್ಕೃಷ್ಟ, ಭಾಷೆಯೂ ಅಷ್ಟು ಪ್ರಬುದ್ಧವಾಗಿದ್ದ ಹಾಗೆ ಕಾಣುವುದಿಲ್ಲ. ಆದರೂ ಇವರು ಸುಸೂತ್ರವಾಗಿ ಆಡಳಿತ ಮಾಡಿದ್ದು ಆಶ್ಚರ್ಯ. ಬಣ್ಣಗಳಿಂದ ಗಣಿತವನ್ನೂ, ಬಾಯಿ ಮಾತಿನಿಂದ ಸಂಪರ್ಕವನ್ನೂ ಎಷ್ಟು ಚೆನ್ನಾಗಿ ಮಾಡುತ್ತಿದ್ದರೆಂದರೆ ಅತ್ಯಲ್ಪ ಕಾಲದಲ್ಲಿ ಸೈನ್ಯವನ್ನು ಸೇರಿಸುವುದು, ಆಹಾರ, ಆಯುಧ ಪೂರೈಕೆ ಮಾಡುವುದು ಇವರಿಗೆ ಸಾಧ್ಯವಾಗುತ್ತಿತ್ತು.

೧೫೩೨ರಲ್ಲಿ ೧೮೦ ಜನ ಸ್ಪೇನಿಷ್ ಸೈನಿಕರು ಒಂದು ೮ ವರ್ಷಗಳ ವರೆಗೆ ಯುದ್ಧ ಮಾಡಿ ಇಂಕಾವನ್ನು ನಾಮಾವಶೇಷ ಮಾಡಿದರು. ಕೆಲವು ಇಂಕಾ ಸೈನಿಕರು ವಿರೋಧಿಗಳೊಂದಿಗೆ ಕೂಡಿದ್ದು ಅವರ ಸೋಲಿಗೆ ಒಂದು ಕಾರಣ.

ಹೀಗೆ ಹಲವು ವರ್ಷಗಳ ಕಾಲ ಸುವ್ಯವಸ್ಥಿತವಾಗಿ ಬಾಳಿದ ಜನಾಂಗವೊಂದು ಇತಿಹಾಸದ ಪುಟಗಳಲ್ಲಿ ಸೇರಿಹೋಯಿತು. ಇಂದು ನಾವು ಉಪಯೋಗಿಸುವ ಬಟಾಟೆ, ಟೊಮೆಟೋಗಳನ್ನು ಪರಿಚಯಿಸಿಕೊಟ್ಟವರೇ ಇಂಕಾದ ಜನ. ✡



**ತನ್ನ ಗಂಡ ಜೋರಾಗಿ ಗೊರಕೆ ಹೊಡೆಯುತ್ತಾನೆಂದು ಹೆಂಡತಿ ವಿವಾಹ ವಿಚ್ಛೇದನವನ್ನು ಪಡೆಯುತ್ತಾಳೆಂದರೆ ನಂಬುತ್ತೀರಾ? ನಂಬಿದರೆ ನಂಬಿ, ಬಿಟ್ಟರೆ ಬಿಡಿ, ಹೀಗಾದದ್ದಂತೂ ನೂರಕ್ಕೆ ನೂರರಷ್ಟು ಸತ್ಯ. ಹೀಗೆ ವಿವಾಹ ವಿಚ್ಛೇದನವನ್ನು ಪಡೆದ ದುರ್ದೈವಿಯ ಹೆಸರು ಹ್ಯಾನ್ಸ್ ಬೇಯರ್ಸ್. ಅವನ ಈ ಭಯಂಕರವಾದ ಗೊರಕೆಯಿಂದಾಗಿ ಬೇಯರ್ಸ್ ಮೇಲಿಂದ ಮೇಲೆ ಮನೆಗಳನ್ನು ಬದಲಿಸಬೇಕಾಗುತ್ತಿತ್ತು. ಈತನ ಗೊರಕೆಯ ಖ್ಯಾತಿ ಎಲ್ಲೆಡೆ ಹಬ್ಬಿ ಕೊನೆಗೆ ಅವನಿಗೆ ಬಾಡಿಗೆಯ ಮನೆ ದೊರೆಯುವುದೇ ಕಷ್ಟವಾಗತೊಡಗಿತು. ಇದೆಲ್ಲದರಿಂದ ಬೇಸತ್ತ ಹ್ಯಾನ್ಸ್ ಒಂದು ರಾತ್ರಿ ರಸ್ತೆಯ ಅಂಚಿನಲ್ಲಿ ಕಾರು ನಿಲ್ಲಿಸಿ ಅಲ್ಲಿಯೆ ನಿದ್ದೆಹೋದ. ಆದರೆ ಬೆನ್ನು ಹತ್ತಿದ ವಿಧಿ ಅಲ್ಲಿಯೂ ಅವನ ಕೈಬಿಡಲಿಲ್ಲ. ಇವನ ಗೊರಕೆಯನ್ನು ಸಹಿಸಲಾರದೆ ಸುತ್ತುಮುತ್ತಲಿನ ಮನೆಗಳಲ್ಲಿ ವಾಸಿಸುತ್ತಿದ್ದವರು ನಿದ್ರಾಭಂಗವಾಗುತ್ತದೆಂದು ಪೋಲೀಸರಿಗೆ ದೂರಿತ್ತುದರಿಂದ ಪೋಲೀಸರು ಅವನನ್ನೆಬ್ಬಿಸಿ ಠಾಣೆಗೆ ಕರೆದುಕೊಂಡು ಹೋದರು. ಅಲ್ಲಿನ ಶಬ್ದನಿರೋಧಕವಾದ ಕೋಣೆಯಲ್ಲಿ ಅವನಿಗೆ ಮಲಗುವ ವ್ಯವಸ್ಥೆ ಮಾಡಿದ್ದರಿಂದ ಆ ರಾತ್ರಿಯ ಮಟ್ಟಿಗಾದರೂ ಆತ ನಿಶ್ಚಿಂತೆಯಿಂದ ನಿದ್ದೆ ಮಾಡುವಂತಾಯಿತು.**

**–ಎಸ್. ಆರ್. ಉಡುಪಿ**

# ಹ್ಯಾನಿಬಾಲ್

**ರಾ. ಅನಂತ ನಾರಾಯಣ**

ಇಟಲಿ ದೇಶದ ಈಗಿನ ರಾಜಧಾನಿಯಾದ ರೋಂ ಪಟ್ಟಣವನ್ನು ಕ್ರಿಸ್ತಪೂರ್ವ ೭೫೩ ರಲ್ಲಿ ರೋಮ್ಯುಲಸ್ ಮತ್ತು ರೀಮಸ್ ಎಂಬ ಸೋದರರು ನಿರ್ಮಿಸಿದರು ಎಂಬುದೊಂದು ಐತಿಹ್ಯ. ಅಲ್ಲಿಯ ಜನರು ತಮ್ಮ ಶಕ್ತಿ ಸಾಹಸಗಳಿಂದ ನೆರೆಯವರನ್ನು ಗೆದ್ದು, ಸ್ವಲ್ಪ ಕಾಲದಲ್ಲೇ ಇಡೀ ಇಟಲಿ ದೇಶವನ್ನು ತಮ್ಮ ಆಡಳಿತಕ್ಕೆ ತಕ್ಕೊಂಡರು. ತೀರ ಪ್ರದೇಶದಲ್ಲಿದ್ದ ಯವನರೂ ಅವರಿಗೆ ಅಡಿಯಾಳಾದರು. ಹೇರಳವಾಗಿ ಧಾನ್ಯ ಬೆಳೆಯುತ್ತಿದ್ದ ಸಿಸಿಲಿ ದ್ವೀಪವನ್ನೂ ಅವರು ಆಕ್ರಮಿಸಿದರು. ತಮಗೆ ಶರಣು ಬಂದ ಜನಾಂಗಗಳನ್ನು ಹಿಂಸಿಸದೆ ರೋಮನ್ನರು ವ್ಯಾಪಾರ ಮುಂತಾದವುಗಳಿಗೆ ಬೇಕಾದ ಸೌಕರ್ಯಗಳನ್ನು ಕಲ್ಪಿಸಿಕೊಟ್ಟರು. ರೋಂ ನಗರದಲ್ಲಿದ್ದಂತೆ ಇತರ ಪಟ್ಟಣಗಳಲ್ಲೂ ಪ್ರಜಾ ಸರ್ಕಾರವನ್ನೇ ಸ್ಥಾಪಿಸಿದರು. ಭೂಮಧ್ಯ ಸಮುದ್ರದ ಪೂರ್ವ ಭಾಗದಲ್ಲಿ ಯವನರ ನಾಗರಿಕತೆಯು ಸಣ್ಣ ಪುಟ್ಟ ಪಟ್ಟಣಗಳಲ್ಲಿ ಬೆಳೆದು ಅಲೆಗ್ಸಾಂಡರನ ಚಕ್ರಾಧಿಪತ್ಯದಲ್ಲಿ ಕೊನೆಗೊಂಡ ಹಾಗೆಯೇ, ಅದರ ಪಶ್ಚಿಮ ಭಾಗದಲ್ಲಿ ರೋಮನ್ನರು ಒಂದು ದೊಡ್ಡ ರಾಷ್ಟ್ರವನ್ನು ಕಟ್ಟಿದರು. ಯವನರೋ ನಾಜೂಕಿನ ಜನ. ರೋಮನ್ನರದೋ ಸ್ವಲ್ಪ ಒರಟು ಸ್ವಭಾವ. ಯವನರು ಅಂದ ಚಂದಕ್ಕೆ ಮನಸೋತು ಬೆರಗಾಗುವರು. ರೋಮನ್ನರು ಪ್ರತಿಯೊಂದರಲ್ಲಿಯೂ ಸೊಬಗಿಗಿಂತ ಪ್ರಯೋಜನವನ್ನೇ ಅರಸುವರು. ಆದರೆ ಯವನರನ್ನು ಗೆದ್ದ ರೋಮನ್ನರು ಬರಬರುತ್ತಾ ಯವನರ ಮತ ಧರ್ಮ, ಅವರ ಕಲೆ, ತತ್ವಶಾಸ್ತ್ರ ಇವುಗಳನ್ನು ಕಲಿತರು. ಗಂಗೆ ಯಮುನೆಗಳಂತೆ, ಯವನ ಮತ್ತು ರೋಮನ್ನರ ಸಂಸ್ಕೃತಿಗಳು ಒಂದಾದವು. ಪಾಶ್ಚಾತ್ಯರ ನಾಗರಿಕತೆಗೆ ಇವೆರಡೂ ತಾಯಿಬೇರು.

ಯವನರ ಅಜನ್ಮ ವೈರಿಗಳಾದ ಪಾರಸಿಕರ ಹಾಗೆಯೇ, ರೋಮ್ ನಗರದ ಬಳಿಗೆ ಕಾರ್ಥೇಜಿನ ಫಿನಿಶಿಯನ್ನರು ಅಡ್ಡ ಬಂದರು. ಭೂಪಟದಲ್ಲಿ ರೋಂ ನಗರಕ್ಕೆ ನೇರವಾಗಿ ಆಫ್ರಿಕದ ಉತ್ತರ ತೀರದಲ್ಲಿ ನೋಡಿದರೆ ಕಾರ್ಥೇಜನ್ನು ಗುರ್ತಿಸಬಹುದು. ಸಿರಿಯಾ ಪ್ರಾಂತ್ಯ ಫಿನಿಶಿಯನ್ನರ ದೇಶ. ಅವರು ಜಾಣಾಕ್ಷರು, ಧೀರರು. ವ್ಯಾಪಾರದ ಸೌಕರ್ಯಕ್ಕಾಗಿ ಅವರು ಅಲ್ಲಲ್ಲಿ ವಸತಿಗಳನ್ನು ಮಾಡಿದ್ದರು. ಅಂತಹದೊಂದು ವಸತಿಯಾದ ಕಾರ್ಥೇಜ್ ನಗರದವರು ಸುತ್ತ ಮುತ್ತಲಿನ ಜನರನ್ನು ಆಳಿ, ಅವರನ್ನೇ ಬಲವಂತದಿಂದ ತಮ್ಮ ಸೈನ್ಯದಲ್ಲಿ ಮತ್ತು ಹಡಗುಗಳಲ್ಲಿ ಯೋಧ

ರನ್ನಾಗಿ ಸೇರಿಸಿಕೊಂಡು ದೊಡ್ಡ ಸಾಮ್ರಾಜ್ಯವನ್ನೇ ಸ್ಥಾಪಿಸಿಬಿಟ್ಟರು. ಅವರ ಕಡಲು ಪಡೆಗಳು ನಾಲ್ಕು ದಿಕ್ಕುಗಳಿಗೂ ಹೋಗಿ ಗುಲಾಮರನ್ನೂ ವಿವಿಧ ಪದಾರ್ಥಗಳನ್ನೂ ಮಾರುತ್ತಿದ್ದವು. ಅವರು ಜಿಬ್ರಾಲ್ಟರ್ ಜಲಸಂಧಿಯನ್ನು ದಾಟಿ, ಬ್ರಿಟನ್, ಪಶ್ಚಿಮ ಆಫ್ರಿಕ ಮುಂತಾದ ದೇಶಗಳಿಗೂ ಹೋಗುತ್ತಿದ್ದರು. ಭೂಮಧ್ಯ ಸಮುದ್ರದಲ್ಲಿ ಅವರನ್ನು ಎದುರಿಸಲು ಯಾರಿಗೂ ಕೆಚ್ಚಿರಲಿಲ್ಲ. ಆದರೆ ರೋಂ ನಗರವು ಅಭಿವೃದ್ಧಿಗೆ ಬಂದ ಹಾಗೆ, ಈ ಎರಡು ನಗರಗಳಿಗೂ ಘೋರವಾದ ಕದನವು ಅನಿವಾರ್ಯವಾಯಿತು. ಅಷ್ಟು ಚಿಕ್ಕ ಸಮುದ್ರದಲ್ಲಿ, ಎರಡೂ ಬಲಾಢ್ಯರಾಗಿ, ಆ ಎರಡು ನಗರಗಳು ಶಾಂತಿಯಿಂದ ಇರಲು ಹೇಗೆ ತಾನೆ ಸಾಧ್ಯ?

ಕ್ರಿಸ್ತಪೂರ್ವ ೨೬೪ ರಲ್ಲಿ ಸಿಸಿಲಿ ದ್ವೀಪದಲ್ಲಿ ನೆಲಸಿದ್ದ ರೋಮನ್ನರಿಗೂ ಫಿನಿಶಿಯನ್ನರಿಗೂ ಯುದ್ಧವು ಮೊದಲಾಗಿ ಭಯಂಕರ ರೂಪವನ್ನು ತಾಳಿತು. ೨೩ ವರ್ಷಗಳ ಕಾಲ ಇಬ್ಬರೂ ಹೋರಾಡಿದರು. ಈ ಹೋರಾಟದಲ್ಲಿ ರೋಮನ್ನರ ನೂರಾರು ಹಡಗುಗಳು ನೀರು ಪಾಲಾದವು, ಆಫ್ರಿಕದ ಅನೇಕ ಸೈನ್ಯಗಳು ಮುರಿದು ಬಿದ್ದವು. ಕೊನೆಗೆ ಸಿಸಿಲಿ ದ್ವೀಪವನ್ನು ಸಂಪೂರ್ಣವಾಗಿ ರೋಮನ್ನರಿಗೆ ಬಿಟ್ಟುಕೊಟ್ಟು, ಹ್ಯಾಮಿಲ್ಕರ್ ಎಂಬ ಸೇನಾಧಿಪತಿಯು ಕಾರ್ಥೇಜಿಗೆ ಹಿಂತಿರುಗಬೇಕಾಯಿತು.

ತನ್ನ ದೇಶಕ್ಕೆ ಬಂದೊದಗಿದ ವಿಪತ್ತನ್ನು ಹ್ಯಾಮಿಲ್ಕಾರನು ತನ್ನದೆಂದೇ ತಿಳಿದಿದ್ದ. ಕಾರ್ಥೇಜಿನವರು ಮನಸೋತು, ಕುಗ್ಗಿ ಕುಳಿತಿರುವುದನ್ನು ಕಂಡು ಅವನು ಅಸಹ್ಯಪಟ್ಟ. ಇನ್ನೊಬ್ಬರ ನೆರವಿಲ್ಲದಿದ್ದರೂ ತಾನೊಬ್ಬನೇ ಈ ಅಪಮಾನವನ್ನು ಪರಿಹರಿಸಿಕೊಳ್ಳಬೇಕೆಂದು ನಿಶ್ಚಯಿಸಿದ. ಆಫ್ರಿಕವನ್ನು ಬಿಟ್ಟು, ಸ್ಪೇನ್ ದೇಶಕ್ಕೆ ತೆರಳಿ, ಅಲ್ಲಿಯ ಅನಾಗರಿಕ ಜನರನ್ನು ಯುದ್ಧದಲ್ಲಿ ಸುಲಭವಾಗಿ ಸೋಲಿಸಿ ರಾಜ್ಯವನ್ನು ಕಟ್ಟಿ, ತುಂಬಿದ ಒಂದು ಸೈನ್ಯವನ್ನು ಅಣಿಮಾಡಿ, ಹಠಾತ್ತನೆ ಇಟಲಿಗೆ ನುಗ್ಗಿ, ರೋಮನ್ನರ ದರ್ಪವನ್ನು ಪುಡಿ ಮಾಡುವುದೇ ತನ್ನ ಮುಂದಿನ ಕಾರ್ಯಕ್ರಮವೆಂದು ಆತ ನಿರ್ಧರಿಸಿದ. ಈ ವೀರ ಸಂಕಲ್ಪವನ್ನು ಆತ ಗೈದದ್ದು ಕಾರ್ಥೇಜಿನ ದೇವಾಲಯದಲ್ಲಿ, ಆಗ ಹತ್ತಿರವೇ ನಿಂತಿದ್ದ ಅವನ ಒಂಭತ್ತು ವರ್ಷದ ಮಗ "ಅಪ್ಪಾ ಏನು ಮಾಡುತ್ತಿರುವೆ ?" ಎಂದು ಕೇಳಿದ. ಹ್ಯಾಮಿಲ್ಕಾರ್‌ನಿಗೆ ದುಃಖವುಕ್ಕರಿಸಿತು. ಅವನು ಮಗನನ್ನು ಎತ್ತಿ ಮುದ್ದಾಡಿ, ದೇವರೆದುರಿಗೆ ನಿಲ್ಲಿಸಿ, "ಬಾ, ದೇವರ ಪ್ರಸಾದದ ಮೇಲೆ ಕೈ ಇಡು. ಜೀವವಿರುವವರೆಗೂ ರೋಮನ್ನರನ್ನು ದ್ವೇಷಿಸುತ್ತೇನೆ ಎಂದು ಪ್ರತಿಜ್ಞೆ ಮಾಡು." ಎಂದು ಆಜ್ಞಾಪಿಸಿದ. ಬಾಲಕ ಹ್ಯಾನಿಬಾಲನು ಹಾಗೆಯೇ ಕೈ ಇಟ್ಟು, ತಂದೆಯ ಮುಖವನ್ನೇ ದಿಟ್ಟಿಸುತ್ತಾ "ನಾನು ರೋಮನ್ನು ಎಂದೆಂದಿಗೂ ದ್ವೇಷಿಸುತ್ತೇನೆ, ದೇವರ ಮೇಲೆ ಆಣೆಯಿರಲಿ" ಎಂದು ಪಣ ತೊಟ್ಟ.

ಸ್ಪೇನ್ ದೇಶದಲ್ಲಿ ತಂದೆಯೊಂದಿಗೆ ಹ್ಯಾನಿಬಾಲನೂ ಯುದ್ಧ, ರಾಜ್ಯ ಭಾರ, ಸೈನ್ಯ ಶಿಕ್ಷಣ, ಇವುಗಳಲ್ಲಿ ಇಪ್ಪತ್ತು ವರ್ಷಗಳನ್ನು ಕಳೆದ. ದೇಶದ ನಾನಾ ಕಡೆಗಳಿಂದಲೂ ವೀರರಾದ ಯೋಧರನ್ನು ಬರಮಾಡಿಕೊಂಡು ಹ್ಯಾಮಿಲ್ಕಾರ್ ತನ್ನ ದಿಗ್ವಿಜಯಕ್ಕೆ ಸಿದ್ಧನಾದ. ಆದರೆ ವಿಧಿವಿಲಾಸವನ್ನು ಬಲ್ಲವರಾರು? ಅಷ್ಟರಲ್ಲೇ ಅವನು ಕಾಲವಾದ್ದರಿಂದ ಆ ಭಾಗ್ಯ ಹ್ಯಾನಿಬಾಲನನ್ನು ಅರಸಿ ಕೊಂಡು ಬಂತು.

ಚರಿತ್ರೆಯಲ್ಲಿ ನಾವು ಎಷ್ಟು ಹುಡುಕಿದರೂ ಹ್ಯಾನಿಬಾಲನಂತಹ ಸೇನಾನಾಯಕ ಸಿಗುವುದು ಅಪರೂಪ. ಅವನ ಗುಣಗಳನ್ನು ಶತ್ರುಗಳಾದ ರೋಮನ್ನರು ಕೂಡಾ ಹೊಗಳಿದರು. ಒಬ್ಬ ರೋಮನ್ ಚರಿತ್ರಕಾರ ಅವನನ್ನು ಈ ರೀತಿ ಪ್ರಶಂಸಿಸಿದ್ದಾನೆ: "ಅವನ ಕೈ ಕೆಳಗಿನ ಭಟರೆಲ್ಲರೂ ಹ್ಯಾನಿಬಾಲನನ್ನು ಸಂಪೂರ್ಣವಾಗಿ ನಂಬಿದ್ದರು. ಎಂಥ ಹೇಡಿಯೂ ಅವನೆದುರಲ್ಲಿ ಶೂರನಾಗುತ್ತಿದ್ದ. ಹ್ಯಾನಿಬಾಲ್ ಯಾವ ಕಷ್ಟವನ್ನೂ ಸಂತೋಷದಿಂದ ಸಹಿಸುತ್ತಿದ್ದ. ಎಂಥ ಸಂಕಟದಲ್ಲೂ ಅವನು ಎದೆಗುಂದುತ್ತಿರಲಿಲ್ಲ. ಅವನ ದೇಹಕ್ಕೂ ಮನಸ್ಸಿಗೂ ಆಯಾಸವೆಂಬುದೇ ಇರಲಿಲ್ಲ. ಬಿರುಗಾಳಿ, ಬಿಸಿಲುಗಳೂ ಒಂದೇ,

ಛಳಿಯೂ ಒಂದೇ. ಅವನು ಊಟವನ್ನು ಮಾಡುತ್ತಿದ್ದುದು ದೇಹವನ್ನು ಪೋಷಿಸುವುದಕ್ಕಾಗಿ, ರುಚಿಯಾದ ಪದಾರ್ಥಗಳನ್ನು ಸವಿದು ಭೋಗಿಸುವುದಕ್ಕಲ್ಲ. ನಿದ್ದೆ ಮಾಡಲು ಹಾಸಿಗೆ ದಿಂಬು ಬೇಕೆಂದಿಲ್ಲ, ಸೈನಿಕರ ನಡುವೆ ತನ್ನ ನಿಲುವಂಗಿಯನ್ನು ಹೊದ್ದೇ ಮಲಗುತ್ತಿದ್ದ. ಕಾಲಾಳುಗಳಲ್ಲಿ, ಕುದುರೆ ಸವಾರರಲ್ಲಿ ಹ್ಯಾನಿಬಾಲನನ್ನು ಮೀರಿಸುವ ಯೋಧರಿರಲಿಲ್ಲ. ರಣರಂಗವನ್ನು ಎಲ್ಲರಿಗೂ ಮುಂದಾಗಿ ಅವನೇ ಪ್ರವೇಶಿಸುವನು. ಎಲ್ಲರಿಗಿಂತ ಹಿಂದಾಗಿಯೇ ರಣರಂಗದಿಂದ ಬರುವನು."

ಕ್ರಿಸ್ತಪೂರ್ವ ೨೧೮ರಲ್ಲಿ ಹ್ಯಾನಿಬಾಲ್ ರೋಮನ್ ಸಾಮ್ರಾಜ್ಯವನ್ನು ನಿರ್ಮೂಲನಗೊಳಿಸಲು ಒಂದು ಲಕ್ಷ ಸೈನಿಕರೊಂದಿಗೆ ಹೊರಟ. ಪೈರೀನ್ಸ್ ಪರ್ವತವನ್ನು ದಾಟಿ, ರೋವ್ ನದಿಯನ್ನು ಹಾದು, ಆಲ್ಪ್ಸ್ ಪರ್ವತಶ್ರೇಣಿಯ ಕಡಿದಾದ ಕಣಿವೆಗಳ ಮಾರ್ಗವಾಗಿ, ಇರುವೆ ಸಾಲಿನಂತೆ, ಆ ಸೈನ್ಯ ಇಟಲಿಯ ಕಡೆ ಸಾಗಿತು. ಅವನ ಸಾಹಸಕ್ಕೆ ಬೆಟ್ಟಗಳೂ ನಡುಗಿದವು. ಮಂಜುಗಡ್ಡೆಗಳಿಂದಲೂ, ಬಂಡೆಗಳಿಂದಲೂ ಕೂಡಿದ ದುಸ್ಸಾಧ್ಯವಾದ ಈ ಕಣಿವೆಗಳಲ್ಲಿ ಆ ಸೈನ್ಯದ ಅರ್ಧಕ್ಕೂ ಹೆಚ್ಚು ಜನ ಸತ್ತು ಹೋದರು. ಕಡೆಗೆ, ಬಳಲಿ ಬೆಂಡಾದ ಸುಮಾರು ೨೬ ಸಾವಿರ ಸೈನಿಕರೊಂದಿಗೆ ಹ್ಯಾನಿಬಾಲ್ ಇಟಲಿಯನ್ನು ಸೇರಿದ.

ರೋಮನ್ನರಿಗೆ ಹ್ಯಾನಿಬಾಲನ ಸೈನ್ಯವನ್ನು ನೋಡಿ ಹೆದರಿಕೆಯಾಗಲಿಲ್ಲ. ಆದರೆ ಎರಡು ದೊಡ್ಡ ದಂಡುಗಳನ್ನು ಹ್ಯಾನಿಬಾಲ್ ನಿರ್ನಾಮ ಮಾಡಿ, ಮಧ್ಯ ಇಟಲಿಗೆ ನುಗ್ಗಿದಾಗ ಅವರು ಕಣ್ದೆರೆದರು. ತತ್‌ಕ್ಷಣವೇ ಹಿಂದಿನ ಸೇನಾನಾಯಕರನ್ನು ತೊರೆದು ಫೇಬಿಯಸ್ ಮ್ಯಾಕ್ಸಿಮಸ್ ಎಂಬವನಿಗೆ ಸರ್ವಾಧಿಕಾರವನ್ನು ಕೊಟ್ಟರು. ಫೇಬಿಯಸ್ಸನು, ಶತ್ರುಗಳಿಗೆ ಅನ್ನ ನೀರು ಸಿಗದಂತೆ ಪೀಡಿಸುತ್ತನು. ಅವರೆದುರು ನಿಂತು ಕಾದಾಡದೆ ನಾಲ್ಕು ಕಡೆಗಳಿಂದಲೂ ಆಗಾಗ ಗುಂಪು ಗುಂಪಾಗಿ ನುಗ್ಗಿ, ಮೇಲೆ ಬಿದ್ದು, ಅವರ ಉತ್ಸಾಹವನ್ನು ತಗ್ಗಿಸುವುದು ಅಲ್ಲಲ್ಲಿ ದುರ್ಗಗಳನ್ನು ಬಲಪಡಿಸಿ, ಅವುಗಳನ್ನು ಹ್ಯಾನಿಬಾಲ್ ಮುತ್ತುವಂತೆ ಮಾಡುವುದು ಎಂದು ಮುಂತಾಗಿ ಉಪಾಯಗಳನ್ನು ಯೋಜಿಸಿದನು. ಇದರಿಂದ ಹ್ಯಾನಿಬಾಲ್ ಕಂಗೆಟ್ಟ. ಅವನು ಯೋಜಿಸಿದಂತೆ ಯಾವ ಆಶ್ರಿತ ಜನರೂ, ರೋಮಿನ ಮೇಲೆ ದಂಗೆಯೇಳಲಿಲ್ಲ. ಸ್ವದೇಶವಾದ ಕಾರ್ಥೇಜಿನಿಂದಲೂ ಅವನಿಗೆ ಯಾವ ವಿಧವಾದ ಸಹಾಯವು ದೊರೆಯಲಿಲ್ಲ. ತಮ್ಮ ಮನೆ ಮಠಗಳಿಗಾಗಿ ರೋಮನ್ನರು ಧೀರಾವೇಶದಿಂದ ಕಾದಿದರು. ಒಂದು ದೊಡ್ಡ ಸೈನ್ಯವನ್ನು ಸ್ಪೇನಿಗೂ ಕೊಂಡೊಯ್ದು ಅವನ ತಮ್ಮಂದಿರನ್ನು ಅಲ್ಲಿಂದ ಓಡಿಸಿದರು. ಅವರು ಇಟಲಿಗೆ ಬಂದಾಗ, ರೋಮನ್ನರು ಅವರನ್ನು ಸೋಲಿಸಿ, ಕೊಂದರು.

ಇಂತಹ ಕಷ್ಟ ಪರಂಪರೆಯಲ್ಲೂ ಹ್ಯಾನಿಬಾಲ್ ತನ್ನ ಯೋಧರನ್ನು ಹುರಿದುಂಬಿಸುತ್ತಾ ಅವರ ಪ್ರೀತಿ ಗೌರವಗಳಿಗೆ ಪಾತ್ರನಾದ. ಅಷ್ಟು ಹೊತ್ತಿಗೆ. ರೋಂ ನಗರದ ಜನರಿಗೆ ತಾಳ್ಮೆ ಕಡಿಮೆಯಾಗಿ, ಹ್ಯಾನಿಬಾಲನನ್ನು ಕೂಡಲೇ ಇಟಲಿಯಿಂದ ಹೊರಡಿಸಬೇಕೆಂಬ ಹುಚ್ಚು ಹಿಡಿಯಿತು. ವ್ಯಾರೋ ಎಂಬ ಒಬ್ಬ ಮಾತಿನ ಮಲ್ಲ ತಾನೇ ಹೋಗಿ ಶತ್ರುವನ್ನು ಜೀವಸಹಿತ ಹಿಡಿದು ತರುತ್ತೇನೆಂದು ಜಂಬ ಕೊಚ್ಚಿದ. ರೋಮನ್ನರ ಸೈನ್ಯಕ್ಕೂ ಹ್ಯಾನಿಬಾಲನಿಗೂ ಕ್ಯಾನೆ ಎಂಬಲ್ಲಿ ಘೋರ ಯುದ್ಧವು ನಡೆಯಿತು. ಅಂದು ೫೦,೦೦೦ಕ್ಕೂ ಹೆಚ್ಚು ರೋಮನ್ನರು ರಣಕ್ಷೇತ್ರದಲ್ಲಿ ಮಡಿದರು, ರೋಂ ನಗರವೂ ಇಟಲಿಯೂ ಕಣ್ಣೀರಿನಲ್ಲಿ ಮುಳುಗಿದವು. ಇದನ್ನು ಕೇಳಿ ಯವನ ದೇಶದಿಂದಲೂ ಆಫ್ರಿಕದಿಂದಲೂ ಕೆಲವರು ಹ್ಯಾನಿಬಾಲನಿಗೆ ನೆರವಾಗಲೊಪ್ಪಿದರು. ಇಟಲಿಯಲ್ಲಿಯೂ ಕೆಲವು ಪಟ್ಟಣಗಳು ಅವನಿಗೆ ಶರಣಾದವು.

ಆದರೆ, ರೋಮನ್ನರು ನಿರಾಶರಾಗಲಿಲ್ಲ. ತಮ್ಮ ತಿಳಿಗೇಡಿತನಕ್ಕೆ ತಾವೇ ನಾಚಿಕೊಂಡು, ಅವರು ಮತ್ತೆ ಫೇಬಿಯಸನ್ನನ್ನು ಮೊರೆಹೊಕ್ಕು ಬೇಡಿಕೊಂಡರು. ಸ್ಪೇನಿನಿಂದ ಜಯಭೇರಿಯೊಂದಿಗೆ ಬಂದ ಸ್ಕಿಪಿಯೋ ಎಂಬ ಸೇನಾ

# ಕೇವಲ ಟಾಲ್ಕಂ ಪೌಡರುಗಳಿಂದ ಬೆವರುಸಾಲೆ ಉಪಶಮನ ಹೊಂದುವುದಿಲ್ಲ-ಅದಕ್ಕೆ ಬೇಕು ನೈಸಿಲ್

## ನೈಸಿಲ್ ಬಳಸಿರಿ

## ಬೆವರುಸಾಲೆಯಿಂದ ಬಲು ಬೇಗ ಉಪಶಮನ ಪಡೆಯಿರಿ






HTB-GLL/8808

ನೈಸಿಲ್ ಔಷಧಯುಕ್ತ ಪೌಡರ್. ಬೆವರುಸಾಲೆಯನ್ನು ಪ್ರತಿಯೊಂದು ಹಂತದಲ್ಲಿಯೂ ಎದುರಿಸುವುದಕ್ಕಾಗಿಯೇ ವಿಶೇಷವಾಗಿ ತಯಾರಿಸಲ್ಪಟ್ಟಿದೆ. ಇದು ಬೆವರುಸಾಲೆಯ ಸೋಂಕನ್ನು ಎದುರಿಸಿ ಅದರ ಸಮಸ್ಯೆ ಹದಗೆಡದಂತೆ ಮಾಡುತ್ತದೆ. ಬರಿಯ ಟಾಲ್ಕಂ ಪೌಡರುಗಳು ಹೀಗೆ ಮಾಡುವುದಿಲ್ಲ.

1. ವಿಪರೀತ ಬೆವರುವುದನ್ನು ತಡೆಗಟ್ಟುತ್ತದೆ. 2. ಬೆವರನ್ನು ಹೀರುತ್ತದೆ. 3. ದುರ್ವಾಸನೆ ಉಂಟುಮಾಡುವ ರೋಗಾಣುಗಳನ್ನು ನಾಶಗೊಳಿಸುತ್ತದೆ. 4. ಚರ್ಮಕ್ಕೆ ಆರಾಮವನ್ನೀಯುತ್ತದೆ.

ಉತ್ತಮ ಆರೋಗ್ಯದ ಮೂಲ

**ಗ್ಲ್ಯಾಕ್ಸೋ**

324-10

ನಾಯಕ ನೇರವಾಗಿ ಕಾರ್ಥೇಜನ್ನೇ ಆಕ್ರಮಿಸಲು ಆಫ್ರಿಕಕ್ಕೆ ತೆರಳಿದ. ಫಿನಿಶಿಯನ್ನರ ಅಧೀನದಲ್ಲಿ ನರಳುತ್ತಿದ್ದ ಕೆಲವು ದೇಶೀಯ ರಾಜರು ಸ್ಕಿಪಿಯೋನ ಬಿಡಾರಕ್ಕೆ ಬಂದು ಶರಣಾಗತರಾದರು. ಪಾಪ! ಕಾರ್ಥೇಜನ್ನು ರಕ್ಷಿಸಲು ಶೂರರಾದ ನಾಯಕರು ಯಾರೂ ಇರಲಿಲ್ಲ. ಆದ್ದರಿಂದ ಹದಿನಾರು ವರ್ಷಗಳಿಂದ ಅಪಜಯವನ್ನರಿಯದ ಹ್ಯಾನಿಬಾಲನನ್ನೇ ಅವರು ಹಿಂದಕ್ಕೆ ಕರೆದರು. ಆ ಆಹ್ವಾನವನ್ನು ಮನ್ನಿಸಿ, ಹ್ಯಾನಿಬಾಲನು ೩೦,೦೦೦ ಯೋಧರೊಂದಿಗೆ ಆಫ್ರಿಕಕ್ಕೆ ಬಂದ. ಕ್ರಿಸ್ತಪೂರ್ವ. ೨೦೩ ರಲ್ಲಿ ಜಾಮಾ ಎಂಬಲ್ಲಿ ರೋಮನ್ನರಿಗೂ ಅವನಿಗೂ ಕಟ್ಟ ಕಡೆಯ ಯುದ್ಧ ನಡೆಯಿತು. ರೋಮನ್ನರು ವಿಜಯಿಗಳಾದರು, ಸಾರ್ವಭೌಮತ್ವವು ಅವರದಾಯಿತು. ಮುಂದೆ ಎಂದೆಂದಿಗೂ ಕಾರ್ಥೇಜ್ ತಲೆ ಎತ್ತದಂತೆ, ರೋಮನ್ನರು ೫೦೦ ಯುದ್ಧ ಹಡಗುಗಳನ್ನು ಅಲ್ಲಿಂದ ಸಾಗಿಸಿದರು. ಹೊರಲಾರದ ದಂಡವನ್ನು ಅವರ ಮೇಲೆ ಹೊರಿಸಿದರು. ಅವರ ಆಶ್ರಿತ ರಾಜ್ಯಗಳನ್ನೆಲ್ಲಾ ತಮ್ಮ ಆಡಳಿತಕ್ಕೆ ತೆಗೆದುಕೊಂಡರು. ಲಕ್ಷೋತರ ಪ್ರಜೆಗಳ ರಾಜಧಾನಿಯಾಗಿದ್ದ ಕಾರ್ಥೇಜ್ ನಗರವು ಒಂದು ಸಣ್ಣ ಪಟ್ಟಣವಾಗಿ ಉಳಿಯಿತು.

ಜಾಮಾ ಕದನವಾದ ಮೇಲೆ ೨೦ ವರ್ಷಗಳ ತನಕ ಹ್ಯಾನಿಬಾಲ್ ಬದುಕಿದ್ದ. ಆದರೆ ಅವನು ತನ್ನ ಪ್ರತಿಜ್ಞೆಯನ್ನು ಮರೆತಿರಲಿಲ್ಲ. ಕಾರ್ಥೇಜಿನ ಕೋಟೆಯನ್ನು ಬಲಪಡಿಸಿ ಅದರ ಸಂಪತ್ತನ್ನು ಹೆಚ್ಚಿಸುತ್ತಿದ್ದ. ಆದ್ದರಿಂದ ರೋಮನ್ನರು ಅವನನ್ನು ಅಲ್ಲಿಂದ ಗಡೀಪಾರು ಮಾಡಿದರು. ಹ್ಯಾನಿಬಾಲ್ ಸಿರಿಯಾ ದೇಶಕ್ಕೆ ಹೋಗಿ ಅಲ್ಲಿಯ ನೌಕಾದಳದಲ್ಲಿ ಒಬ್ಬ ಅಧಿಕಾರಿಯಾದ. ಅಲ್ಲಿಯ ರಾಜನನ್ನು ರೋಮನ್ನರ ಮೇಲೆ ಯುದ್ಧ ಮಾಡುವಂತೆ ಪ್ರೇರೇಪಿಸಿದ. ಇನ್ನೂ ಅನೇಕ ಅರಸರು ಅವನಿಗೆ ನೆರವಾಗುವಂತೆ ಮಾಡಿದ. ಸಿರಿಯಾದಲ್ಲೂ ರೋಮನ್ನರು ಅವನನ್ನು ಇರಲು ಬಿಡಲಿಲ್ಲ. ಕಡೆಗೆ ಬಿಥೀನಿಯಾ ದೇಶದ ಅರಸ ಹ್ಯಾನಿಬಾಲನನ್ನು ರೋಮನ್ನರ ಕೈಗೆ ಒಪ್ಪಿಸುವ ಫಿತೂರಿ ನಡೆಸಿದನು.

ಇದನ್ನರಿತ ಹ್ಯಾನಿಬಾಲ್, "ಪಾಪ! ರೋಮನ್ನರಿಗೆ ಮನಶ್ಶಾಂತಿಯೇ ಇಲ್ಲ. ಈ ಮುದುಕನು ಸಾಯುವ ತನಕ ಸುಮ್ಮನಿರಲು ಅವರಿಗೆ ತಾಳ್ಮೆ ಸಾಲದು" ಎಂದು ಹೇಳುತ್ತಾ, ಬಂಧಿಸಲು ಬರುತ್ತಿದ್ದ ರೋಮನ್ನರ ಕೂಗು ಕಿವಿಯಲ್ಲಿ ತುಂಬಿರುವಾಗಲೇ, ವಿಷ ಕುಡಿದು, ಪ್ರಾಣತ್ಯಾಗ ಮಾಡಿದ.

ಹ್ಯಾನಿಬಾಲನಿಗೆ ರೋಮನ್ನರ ಸಾಮ್ರಾಜ್ಯವನ್ನು ನಾಶ ಮಾಡಲು ಸಾಧ್ಯವಾಗಲಿಲ್ಲ. ಆದರೂ ಅವನ ದೃಢ ಸಂಕಲ್ಪಕ್ಕೂ, ಅದನ್ನು ನೆರವೇರಿಸಲು ಅವನು ತೋರಿದ ಕೆಚ್ಚಿಗೂ, ದೇಶಾಭಿಮಾನಕ್ಕೂ, ಅವನ ಬುದ್ಧಿಶಕ್ತಿಗೂ ನಾವು ತಲೆದೂಗಬೇಕಾಗಿದೆ. ರೋಂ ನಗರದ ಚರಿತ್ರೆಯಲ್ಲಿಯೂ ಹ್ಯಾನಿಬಾಲನಿಂದ ತುಂಬಾ ಮಾರ್ಪಾಟುಗಳಾದವು. ಹದಿನಾರು ವರುಷಗಳ ಕಾಲ ಅವನು ಮಾಡಿದ ಹಾವಳಿಯಿಂದ ಜನ-ಜೀವನದಲ್ಲೂ, ಸಮಾಜದ ಶಿಸ್ತಿನಲ್ಲೂ ಅನೇಕ ಬದಲಾವಣೆಗಳಾದವು. ಹ್ಯಾನಿಬಾಲನಿಗೆ ನೆರವಾಗಿ ನಿಂತ ಸ್ಪೇನನ್ನೂ ಮೆಸಿಡೋನಿಯಾ, ಸಿರಿಯಾ ಮತ್ತು ಈಜಿಪ್ತ್ ದೇಶಗಳನ್ನೂ ರೋಮನ್ನರು ಶಿಕ್ಷಿಸಿ ತಮ್ಮ ಆಡಳಿತವನ್ನು ಅಲ್ಲೆಲ್ಲಾ ಸ್ಥಾಪಿಸಿದರು. ಹೀಗೆ, ರೋಂ ನಗರದ ಪ್ರಾಬಲ್ಯ ಹೆಚ್ಚಿತು. ರಾಜ್ಯಭರಣ ರೀತಿಗಳಲ್ಲೂ ಕೆಲವು ಮಾರ್ಪಾಟುಗಳಾಗಬೇಕಾಗಿ ಬಂತು. ರೋಮನ್ನರು ಹಿಡಿದ ಪ್ರದೇಶಗಳಲ್ಲೆಲ್ಲಾ ಅವರ ವ್ಯವಹಾರ ಪದ್ಧತಿ ಜಾರಿಯಾಯಿತು. ಅವರ ಆಳಿಕೆಯ ಜೊತೆಗೆ ರೋಮನ್ನರ ತತ್ತ್ವಗಳೂ ಪ್ರಪಂಚವನ್ನೆಲ್ಲಾ ವ್ಯಾಪಿಸಿದವು. ★



# ನಿಮ್ಮ ಶಬ್ದ ಭಾಂಡಾರ ಬೆಳೆಯಲಿ

## ಶಬ್ದ ಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ

ಪ್ರತಿ ತಿಂಗಳೂ ಕೆಲವು ಶಬ್ದಗಳನ್ನು ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.

೧. **ಅವರೋಧ**
(ಅ) ಅಗ್ನಿ (ಆ) ಆತಂಕವಿಲ್ಲದಿರುವುದು (ಇ) ಇಳಿಯುವಿಕೆ (ಈ) ತಡೆ

೨. **ಅವರೋಹ**
(ಅ) ವಿಘ್ನ (ಆ) ಮೊಳಕೆ (ಇ) ಹಾರುವುದು (ಈ) ಇಳಿಯುವಿಕೆ

೩. **ಖಯಾಲಿ**
(ಅ) ಉರ್ದು ಕವಿತೆ (ಆ) ಮನೋಲಹರಿ (ಇ) ಪರ್ಶಿಯಾದ ಸಂಗೀತ (ಈ) ಮಾನವಿಲ್ಲದವಳು

೪. **ಖಂಬೀರ**
(ಅ) ತುತ್ತೂರಿ ಊದುವವ (ಆ) ಆಳು (ಇ) ಎದೆಗಾರ (ಈ) ಸುದ್ದಿ ಕೊಡುವಾತ

೫. **ಶಿಲೀಂಧ್ರ**
(ಅ) ಕಲ್ಲಿನ ಮೂರ್ತಿ (ಆ) ನಾಯಿ ಕೊಡೆ (ಇ) ಕುರುಜು (ಈ) ಕಲ್ಲೊಡೆಯುವವ

೬. **ಶಿರೆ**
(ಅ) ನಾಡಿ (ಆ) ನೆತ್ತಿ (ಇ) ಎಸೆ (ಈ) ದೀರ್ಘ

೭. **ನಿಖರ**
(ಅ) ತಳ (ಆ) ತುದಿ (ಇ) ನಿಶ್ಚಿತವಾದ (ಈ) ಕೊಳಕು

೮. **ನಿಕರ**
(ಅ) ಒರೆಗಲ್ಲು (ಆ) ಮೊಸಳೆ (ಇ) ದಬ್ಬಾಳಿಕೆ (ಈ) ಕಠೋರ

೯. **ತ್ರಾಣ**
(ಅ) ದಾಟುವುದು (ಆ) ತೇಲುವುದು (ಇ) ರಕ್ಷಣೆ (ಈ) ಮೊರೆಯುವುದು

೧೦. **ತಾರಣ**
(ಅ) ನಕ್ಷತ್ರಗಳ ಲೆಕ್ಕ (ಆ) ಉಸಿರು ಕಟ್ಟುವುದು (ಇ) ಶಕ್ತಿ (ಈ) ದಾಟಿಸುವುದು

೧೧. **ಪಡಿಚ**
(ಅ) ತೀರಿಸುವಿಕೆ (ಆ) ಎದುರಾಡುವವ (ಇ) ಪಾತ್ರೆ ವ್ಯಾಪಾರಿ (ಈ) ಕೊಳಕ

೧೨. **ಪಣ್ಯ**
(ಅ) ಒಳ್ಳೇ ಕೆಲಸ (ಆ) ವ್ಯಾಪಾರದ ಸರಕು (ಇ) ಪಣ ಸಾಧನೆ (ಈ) ಬಾಚಣಿಗೆ



## 'ಶಬ್ದ ಭಾಂಡಾರ'ದ ಸರಿಯಾದ ಅರ್ಥಗಳು

೧. **ಅವರೋಧ** (ಅ) ಅಡ್ಡಿ, ತಡೆ, ಪ್ರತಿಬಂಧ, ಬೇಲಿ, ಆವಾರ ಉದಾ– ಹಲವು ಅವರೋಧಗಳನ್ನು ದಾಟಿ ಅರಮನೆ ಮುಟ್ಟಿದ [ಸಂ. ಅವ=ಪ್ರತಿಯಾಗಿ+ರೋಧ=ತಡೆ]

೨. **ಅವರೋಹ** (ಈ) ಕೆಳಗೆ ಇಳಿಯುವಿಕೆ; (ಸಂಗೀತದಲ್ಲಿ) ಸ್ವರಗಳ ಕ್ರಮವಾದ ಇಳಿಯುವಿಕೆ) ಉದಾ– ಆಕಾಶಬಾಣದ ಅವರೋಹ. [ಸಂ. ಅವ=ಕೆಳಗೆ+ರೋಹ=ಏರುವಿಕೆ]

೩. **ಖಯಾಲಿ** (ಅ) ಎಣಿಕೆ, ನೆನಪು, ಮನೋವೃತ್ತಿ, ಚಿತ್ತಲಹರಿ; ಲಹರಿಯ ನಡೆವಳಿಕೆ. ಉದಾ– ಬಹಳ ಖಯಾಲಿ ಮನುಷ್ಯ. [ಅರಬಿ]

೪. **ಖಂಬೀರ** (ಇ) ಸ್ಥಿರ, ಅಚಂಚಲ, ಧೈರ್ಯಶಾಲಿ, ನಿಶ್ಚಯ ಬುದ್ಧಿಯ. ಉದಾ– ಅವನ ಖಂಬೀರತನ ಅಪರಿಮಿತವಾಗಿತ್ತು. [ಮರಾಠಿ]

೫. **ಶಿಲೀಂಧ್ರ** (ಅ) ನಾಯಿಕೊಡೆ, ಅಣಬೆ, ಉದಾ– ಶಿಲೀಂಧ್ರಗಳಂತೆ ಬೆಳೆದ ರಾಜಕೀಯ ಪಕ್ಷಗಳು [ಸಂ.]

೬. **ಶಿರೆ** (ಅ) ನಾಡಿ, ರಕ್ತನಾಳ, ಧಮನಿ, ನರ. ಉದಾ– ಅವನ ಕೆನ್ನೆಯ ಶಿರೆಗಳು ಕೋಪದಿಂದ ಉಬ್ಬಿದ್ದವು [ಸಂ. ಶಿರಾ]

೭. **ನಿಖರ** (ಇ) ನಿಶ್ಚಿತ, ಕರಾರುವಾಕು, ಖಚಿತ. ನಿಖರವಾದ ವಿವರಗಳನ್ನು ಕೊಡು. [ಸಂ. ನಿ=ವಿಶೇಷವಾಗಿ+ಖರ=ಗಟ್ಟಿ]

೮. **ನಿಕರ** (ಈ) ಕಠೋರ, ನಿರ್ಧಾರಪೂರ್ವಕ, ಜಿಗುಟಾಗಿ, ಹಟಪೂರ್ವಕ, ಉದಾ– ನಿಕರವಾದ ಕಾಳಗ, [ಮರಾಠಿ, ನಿಕರೀ=ಹುಂಬ ಧೈರ್ಯ]

೯. **ತ್ರಾಣ** (ಇ) ರಕ್ಷಣೆ, ಕಾಪಾಡುವಿಕೆ; ಶಕ್ತಿ, ಸಾಮರ್ಥ್ಯ. ಉದಾ– ತ್ರಾಣವಿಲ್ಲದವನು. [ಸಂ.]

೧೦. **ತಾರಣ** (ಈ) ದಾಟಿಸುವಿಕೆ [ವಿಶೇಷವಾಗಿ ನದಿ, ಸಮುದ್ರಗಳನ್ನು] ಉದಾ– ಇದೊಂದೇ ತಾರಣೋಪಾಯ [ಸಂ.]

೧೧. **ಪಡಿಚ** (ಅ) ಮುಗಿಸುವಿಕೆ, ತೀರಿಸುವಿಕೆ, ಬಾಕಿ ಇಲ್ಲದಂತಾಗಿಸುವಿಕೆ, ನಾಶ. ಉದಾ– ಲೆಕ್ಕ ಪಡಿಚ ಮಾಡಿದೆ. [ದೇಶ್ಯ – ಪಡು=ಸಾಯು, ತೀರು, ಪಡಿಚು=ತೀರಿಸು ಎಂಬುದರಿಂದ ?]

೧೨. **ಪಣ್ಯ** (ಅ) ಸರಕು, ವ್ಯಾಪಾರದ ಪದಾರ್ಥ, ಮಾರಲಿಕ್ಕಿರುವ ವಸ್ತು. ಉದಾ– ಬುದ್ಧಿಯನ್ನು ಪಣ್ಯವಾಗಿ ಮಾಡಿಕೊಂಡ ವಕೀಲ [ಸಂ.]

●

### ನಿಮ್ಮ ಶಬ್ದಶಕ್ತಿಯ ತರಗತಿ

**ನೀವು ಎಷ್ಟು ಶಬ್ದಗಳಿಗೆ ಅರ್ಥ ಅರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.**

| | | |
|---|---|---|
| ೬–೮ | ಸರಿಯಿದ್ದರೆ | ... ಸಾಧಾರಣ |
| ೯–೧೦ | ,, | ... ಉತ್ತಮ |
| ೧೧–೧೨ | ,, | ... ಅತ್ಯುತ್ತಮ |

●

ಪಾಂಡುರಂಗ ಉಮ್ಮಯ್ಯ

## ನಿಸರ್ಗವನ್ನು ಮಾನವ ಕೈಯಾರೆ ಕುಲಗೆಡಿಸುತ್ತಿದ್ದಾನೆಯೆ?

# ಕಾಳಿಯ ಮೂಲದಲ್ಲಿ ಕೋಲಾಹಲ

ಹಿಮಾಲಯದ ಶಿಖರಗಳಿಂದ ಗಂಗಾ ನದಿ ಆರಂಭವಾದರೆ ಕರ್ನಾಟಕದ ಉತ್ತುಂಗ ಪರ್ವತ ಸಾಲೆಯಾದ ಪಶ್ಚಿಮ ಘಟ್ಟದ ತುದಿಯಲ್ಲಿರುವ ದಿಗ್ಗಿ ಘಟ್ಟದಿಂದ ಕಾಳಿ ನದಿ ದಟ್ಟವಾದ ಸದಾ ಹಸಿರು ಕಾಡಿನಿಂದ ಆವರಿಸಿದ ಸ್ಥಳದಿಂದ ಉಗಮಿಸುತ್ತದೆ. ದಿಗ್ಗಿ ಎಂಬುದು ಜೊಯಿಡಾ (ಮೊದಲು ಸೂಪಾ) ತಾಲೂಕಿನ ಒಂದು ಚಿಕ್ಕ ಹಳ್ಳಿ. ಕರ್ನಾಟಕ ಮತ್ತು ಗೋವೆಯ ಗಡಿಯಲ್ಲಿರುವ ಈ ಹಳ್ಳಿಗೆ ಹೋಗುವುದಾದರೆ ೧೫ ಮೈಲಿ ಕಾಲು ನಡಿಗೆಯಿಂದ ಮಾತ್ರ ಸಾಧ್ಯ. ಸೂರ್ಯ ನೆತ್ತಿಯ ಮೇಲೆ ಬಂದಾಗ ಸಹ ಇಲ್ಲಿಯ ಅರಣ್ಯದಲ್ಲಿ ಅವನ ಕಿರಣಗಳು ಭೂಮಿಯನ್ನು ತಲುಪಲಾರದಷ್ಟು ಘನವಾದ ಅರಣ್ಯ ಪ್ರದೇಶ. ಇಂತಹ ಘನವಾದ ಅರಣ್ಯದ ಬಲದಿಂದಲೇ ಸೆಲೆ ಒಡೆದು ಕಾಳಿ ನದಿ ಹರಿಯಲು ಪ್ರಾರಂಭಿಸುತ್ತದೆ. ಸ್ವಲ್ಪ ಮುಂದೆ ಹೋದ ಹಾಗೆ ನಿರ್ಮಲವಾದ ನೀರು ಕಪ್ಪು ಬಣ್ಣಕ್ಕೆ ತಿರುಗುತ್ತದೆ. ಇದರಿಂದಲೇ ಈ ನದಿಗೆ ಕಾಳಿ ಎಂಬ ಹೆಸರು ಬಂದಿದೆ. ಕಾಳಿ ಮುಂದುವರಿದು ಸೂಪಾದಲ್ಲಿ ಪಾಂಡರಿ ನದಿಯನ್ನು ತನ್ನಲ್ಲಿ ಅಡಗಿಸಿಕೊಂಡು ದಾಂಡೇಲಿ, ಗುಂದ, ಕೊಡಸಳ್ಳಿ, ಕದ್ರಾ ಮೂಲಕವಾಗಿ ಕಾರವಾರದಲ್ಲಿ ಅರಬ್ಬೀ ಸಮುದ್ರವನ್ನು ಸೇರುತ್ತದೆ. ಒಟ್ಟು ೧೬೧ ಕಿ.ಮಿ. ಉದ್ದವಿರುವ ಕಾಳಿ ಪಶ್ಚಿಮ ಘಟ್ಟದ ಆಳವಾದ ಕಣಿವೆಯಲ್ಲಿ ಮಳೆಗಾಲದಲ್ಲಿ ರೌದ್ರರೂಪ ತಾಳಿ ಹರಿಯುತ್ತದೆ. ನದಿಯ ತೀರದಲ್ಲಿ ಬೆಳೆದು ಪ್ರಸಿದ್ಧಿ ಪಡೆಯುವ ಇತರ ಸ್ಥಳಗಳಂತೆ ಕಾಳಿ ನದಿಯ ತೀರದಲ್ಲಿ ಸ್ಥಾಪಿತವಾದ ಸೂಪಾ ಆಗಲೇ ವಿದ್ಯುತ್ ಯೋಜನೆಯ ಅಣೆಕಟ್ಟಿನ ಕೆಲಸದಿಂದಾಗಿ ಸಂಪೂರ್ಣ ಹಾಳಾಗಿದೆ. ಅದರ ಹತ್ತಿರವೇ ಗಣೇಶ ಗುಡಿ ಎಂಬ ಹೊಸದಾದ ಪಟ್ಟಣ ಸ್ಥಾಪಿತವಾಗಿದೆ. ಇನ್ನೂ ಮುಂದೆ ಉತ್ತರ ಕರ್ನಾಟಕದಲ್ಲಿ ಆರಂಭವಾದ ಮತ್ತು ದೊಡ್ಡ ಕಾಗದ ಕಾರಖಾನೆಯಿರುವ ದಾಂಡೇಲಿ ಇದೆ. ಇದನ್ನು ಬಿಟ್ಟರೆ ನದೀ ತೀರದಲ್ಲಿ ಉಳಿದಿವೆ ಸಿಗುವುದು ಸಣ್ಣ ಪುಟ್ಟ ಹಳ್ಳಿಗಳು ಮಾತ್ರ.

### ಶಾಂತ ಜನಜೀವನ

ರಮ್ಯವಾದ ಪ್ರಕೃತಿಯ ಮಡಿಲಲ್ಲಿರುವ ಕಾಳಿಯ ಉಗಮ ಸ್ಥಾನವಾದ ದಿಗ್ಗಿಯಲ್ಲಿರುವುದು ಎಂಟು ಮನೆಗಳು ಮಾತ್ರ. ಕುಣಬಿ ಜನಾಂಗದ ಈ ಹಳ್ಳಿಗರು ತಮ್ಮ ಜೀವನದ ಅವಶ್ಯಕತೆ

ಗಳಿಗಾಗಿ ಅರಣ್ಯವನ್ನು ಅವಲಂಬಿಸಿದ್ದಾರೆ. ಕಾಡಿನಿಂದ ಹರಿದು ಬರುವ ಜವಳು ನೀರಿನಿಂದ ಭತ್ತವನ್ನು ತಮಗೆ ಬೇಕಾಗಿರುವ ತರಕಾರಿಯನ್ನು ಬೆಳೆದುಕೊಳ್ಳುತ್ತಾರೆ. ಬೇಸಾಯಕ್ಕೆ ಅಗತ್ಯವಿರುವ ಗೊಬ್ಬರ ಹತ್ತಿರದ ಕಾಡಿನ ಮರಗಿಡಗಳ ಉದುರಿದ ಎಲೆಗಳು, ಮತ್ತು ಹಸಿರು ಸೊಪ್ಪುಗಳಿಂದ ಲಭ್ಯ. ಪಶುಪಾಲನೆಯಿಂದಾಗಿ ಲಭಿಸುವ ಗೊಬ್ಬರವೂ ಕೃಷಿಗೆ ಸಹಾಯಕ. ಇದಲ್ಲದೇ ತಮ್ಮ ಮನೆಯ ಮಕ್ಕಳಿಗೆ ಸಮೃದ್ಧವಾಗಿ ಉಪಯೋಗಿಸಲು ಹಾಲು-ಹೈನದ ಪೌಷ್ಟಿಕ ಆಹಾರ. ಈ ಹಳ್ಳಿಗರು ವಾಸವಾಗಿರುವ ಮನೆಗಳನ್ನು ಹತ್ತಿರದ ಕಾಡಿನಲ್ಲಿ ಲಭ್ಯವಾಗುವ ವಸ್ತುಗಳಿಂದ ಕಟ್ಟಲಾಗಿದೆ. ಹೊಚ್ಚಿಗೆ ಹುಲ್ಲಿನದಾದರೆ, ಗೋಡೆ ಮಣ್ಣಿನದು. ಮತ್ತು ಬಿದಿರಿನ ಹೊದಿಕೆ, ಬಿದಿರಿನದೇ ಬಾಗಿಲು. ಈ ಎಲ್ಲ ವಸ್ತುಗಳು ಕಾಡಿನಿಂದ ವಿಪುಲವಾಗಿ ಸಿಗುತ್ತವೆ. ಸುಗ್ಗಿಯ ನಂತರ ಕಾಡಿನಲ್ಲಿ ಜೇನು ಕಡಿಯುವ ಕೆಲಸ, ಇಲ್ಲವಾದರೆ ಗೋವೆಗೆ ಹೋಗಿ ದುಡಿತ. ಎಲ್ಲ ರೀತಿಯಿಂದಲೂ ಆತ್ಮನಿರ್ಭರ ಜನಜೀವನ. ಇದೇ ಸ್ಥಿತಿ ಸೂಪಾದಲ್ಲಿ, ಸದ್ಯ ಮುಳುಗಡೆಯಾಗಲಿರುವ ೪೪ ಹಳ್ಳಿಗಳಲ್ಲಿ. ವಿಪುಲವಾಗಿ ದೊರೆಯುವ ಹಳ್ಳದ ನೀರಿನ ಆಧಾರದಿಂದಾಗಿ ಎರಡು ಭತ್ತದ ಬೆಳೆ ಬೆಳೆಯುತ್ತಿದ್ದರು. ಬಿದಿರಿನಿಂದ ಮೊರಗಳನ್ನು ಇಲ್ಲಿ ಹೆಚ್ಚಾಗಿ ಮಾಡುತ್ತಿದ್ದುದರಿಂದ ಹಿಂದಿ/ಮರಾಠಿ ಶಬ್ದವಾದ 'ಸೂಪ' ಸೂಪಾ ಎಂಬ ಪಟ್ಟಣದ ಹೆಸರಾಯಿತು. ಇದಕ್ಕಿಂತ ಆಶ್ಚರ್ಯಕರವಾದ ಸಂಗತಿಯೆಂದರೆ ೧೮೦೧ರಲ್ಲಿ ಬ್ರಿಟಿಶ್ ಸರಕಾರದ ಪ್ರತಿನಿಧಿಯಾಗಿ ಕಾಳಿ ನದಿ ಕ್ಷೇತ್ರದಲ್ಲಿ ಸಂಚರಿಸಿದ ಬುಕೇನನ್ ಅವರ ವರದಿ. ಈ ವರದಿಯ ಪ್ರಕಾರ ಆಳವಾದ ಕಣಿವೆಯಲ್ಲಿ ಕಾಳಿ ನದಿಯ ದಡದಲ್ಲಿರುವ ದಟ್ಟವಾದ ಅರಣ್ಯ ವಿಪುಲವಾಗಿ ಕಾಳು ಮೆಣಸು ಲಭಿಸುವ ಕ್ಷೇತ್ರವಾಗಿತ್ತು. ಈ ವಿಪುಲವಾದ ಮೆಣಸು ಮತ್ತು ಬೆಲೆ ಬಾಳುವ ಗಿಡ-ಮರಗಳ ಆಕರ್ಷಣೆಯೇ ಬ್ರಿಟಿಶರನ್ನು ಸೆಳೆಯಿತು. ಬ್ರಿಟಿಶರ ಕಾಲದಲ್ಲಿ ೧೯೪೪ರಲ್ಲಿ ದಾಂಡೇಲಿಯಲ್ಲಿ ಮೊದಲನೆಯದಾಗಿ ಪ್ಲೈವುಡ್ ಕಾರಖಾನೆ ಆರಂಭವಾಯಿತು. ನಂತರ ಭಾರತ ಸ್ವತಂತ್ರವಾದ ಮೇಲೆ ಆರಂಭವಾದ ಕಾಗದ ಕಾರಖಾನೆಯ ಜೊತೆ ಇತರ ಉದ್ದಿಮೆಗಳೂ ಸ್ಥಾಪಿಸಲ್ಪಟ್ಟವು.

### ಕೋಲಾಹಲ ಆರಂಭ

ಇಲ್ಲಿಯ ಶಾಂತ ಜನಜೀವನದಲ್ಲಿ ಒಮ್ಮಿಂದೊಮ್ಮೆಲೇ ಕೋಲಾಹಲ ಆರಂಭವಾದದ್ದು ಐವತ್ತರ ದಶಕದಲ್ಲಿ. ಹಳ್ಳಿಯ ಜನರಿಗೆ ಸರಕಾರ ರಾಗಿ ಬೆಳೆಯಲೆಂದು ಹತ್ತಿರದ ಒಂದು ಸ್ಥಳವನ್ನು ಬಿಟ್ಟು ಕೊಟ್ಟಿತ್ತು. ಅದೇ ರಾಗಿಗುಡ್ಡ ಎನಿಸಿತು. ಈ ಕ್ಷೇತ್ರದಲ್ಲಿ ಮ್ಯಾಂಗನೀಸ್ ಅದಿರು ಸಿಗುವುದು ವಿಚಿತ್ರವಾದ ಹಾಗೆ ಹಳ್ಳಿಯವರಿಂದ ಈ ರಾಗಿ ಬೆಳೆಯುವ ಕ್ಷೇತ್ರವನ್ನು ಕಸಿದುಕೊಂಡು ಮ್ಯಾಂಗನೀಸ್ ಅದಿರನ್ನು ತೆಗೆಯುವ ಕೆಲಸ ಆರಂಭವಾಯಿತು. ಇಂದು ಇದೇ ರಾಗಿ

ಗುಡ್ಡದಲ್ಲಿ ನಾವು ಕಾಣುವುದು ಕೇವಲ ಮಣ್ಣಿನ ರಾಶಿ. ಜಪಾನಿಗೆ ಅದಿರನ್ನು ರಫ್ತು ಮಾಡುವ ಗಣಿ ಕೆಲಸದಿಂದಾಗಿ ಹಳ್ಳಿಗರು ರಾಗಿ ಗುಡ್ಡವನ್ನು ಕಳೆದುಕೊಳ್ಳಬೇಕಾಯಿತು. ಹಳ್ಳಿಗರ ಕಷ್ಟವನ್ನು ಕೇಳುವ ತಾಳ್ಮೆ ಸರಕಾರಕ್ಕಿರಲಿಲ್ಲ. ಈ ಕೆಲಸ ಇಷ್ಟಕ್ಕೇ ನಿಲ್ಲಲಿಲ್ಲ. ರಾಗಿ ಗುಡ್ಡದಲ್ಲಿ ಅದಿರು ಮುಗಿದ ನಂತರ ಹತ್ತಿರವಿರುವ ಇತರ ಸ್ಥಳಗಳಲ್ಲಿ ಘನವಾದ ಅರಣ್ಯವನ್ನು ನಾಶ ಮಾಡಿ ಅದಿರನ್ನು ಸಾಗಿಸುವ ಕೆಲಸ ಸತತವಾಗಿ ನಡೆಯಿತು. ಇನ್ನೂ ನಡೆಯುತ್ತಿದೆ. ಈ ಗಣಿ ಕೆಲಸದಲ್ಲಿ ಹಳ್ಳಿಯ ನಿರುದ್ಯೋಗಿಗಳಿಗೆ ಕೆಲಸ ಲಭಿಸಲಿಲ್ಲ. ಎಲ್ಲ ಕೆಲಸಗಾರರೂ ಹೊರಗಿನವರೇ. ಒಮ್ಮೆಲೇ ಬರುವ ಈ ಕೆಲಸಗಾರರಿಗಾಗಿ ಹತ್ತಿರದ ಕಾಡು ಉರುವಲನ್ನು ಪೂರೈಸಬೇಕಾಯಿತು. ರಮ್ಯವಾಗಿರುವ ಡಿಗ್ಗಿಯಲ್ಲಿ ಎಲ್ಲಿ ನೋಡಿದರೂ ಈ ಗಣಿಯ ಕೆಲಸದಿಂದಾಗಿ ಹಳ್ಳಿಯ ಸುತ್ತಮುತ್ತ ಕಾಡನ್ನು ನಾಶ ಮಾಡಿ ಭೂಮಿತಾಯಿಯ ಮೇಲೆ ಮಾಡಿದ ಆಳವಾದ ಗಾಯವನ್ನು ನೋಡಬಹುದು.

ಉತ್ತರ ಕನ್ನಡ ಜಿಲ್ಲೆಯ ಈ ಕಾಳಿನದಿ ಕಣಿವೆ ಕ್ಷೇತ್ರ ರಾಜ್ಯದ, ಹಾಗೂ ದೇಶದ ಜನರಿಗೆ ಪ್ರಸಿದ್ಧಿಗೆ ಬಂದದ್ದು ದಾಂಡೇಲಿಯ ಕಾಗದದ ಕಾರಖಾನೆಯಿಂದಾಗಿ. ಹಿಂದುಳಿದ ಕ್ಷೇತ್ರವಾದ ಉತ್ತರ ಕನ್ನಡ ಜಿಲ್ಲೆಯ ಅಭಿವೃದ್ಧಿಗಾಗಿ ಸ್ಥಾಪಿಸಲ್ಪಟ್ಟ ಈ ಕಾಗದ ಕಾರಖಾನೆಯ ಅಂಕಿ ಸಂಖ್ಯೆ ವಿಚಿತ್ರವಾದ ಸಂಗತಿಯನ್ನು ಹೊರಗೆಡಹುತ್ತದೆ. ಸದ್ಯ ಇರುವ ಪ್ಲಾಯ್‌ವುಡ್ ಕಾರಖಾನೆಯಲ್ಲಿ ಕೆಲಸಗಾರರ ಸಂಖ್ಯೆ ೮೦೦. ಇದರಲ್ಲಿ ೬೦೦ ಕೆಲಸಗಾರರು ಆಂಧ್ರ ಪ್ರದೇಶದವರು. ಹೀಗೇ ಕಾಗದದ ಕಾರಖಾನೆಯು ಹಣ ಗಳಿಸುವ ಹುದ್ದೆಗಳನ್ನು ರಾಜಸ್ಥಾನದಿಂದ ಬಂದಿರುವ ಮಾರವಾಡಿಗಳು ಆಕ್ರಮಿಸಿದರೆ, ಉಳಿದ ಕೆಲಸಗಾರರು ತಮಿಳುನಾಡು, ಕೇರಳದಿಂದ ಬಂದಿರುವರು. ಹೀಗೆ ಇತರ ಕ್ಷೇತ್ರಗಳಲ್ಲಿ ಇತರ ರಾಜ್ಯದಿಂದ ಬಂದವರೇ ಹೆಚ್ಚು. ಪ್ರಾರಂಭವಾಗಿದ್ದ ಈ ಅರಣ್ಯ ಕ್ಷೇತ್ರದಲ್ಲಿಯ ಹಳ್ಳಿಗರ ಜೀವನವನ್ನು ಈ ಉದ್ದಿಮೆಗಳು ಬಲಿ ತೆಗೆದುಕೊಂಡವು.

ಕೋಲಾಹಲವನ್ನೆಬ್ಬಿಸಿದ ಇನ್ನೊಂದು ಬೃಹತ್ ಯೋಜನೇ ಕಾಳಿ ವಿದ್ಯುತ್ ಯೋಜನೆ. ಮೂರು ಹಂತಗಳಲ್ಲಿ ಸಂಪೂರ್ಣಗೊಳ್ಳುವ ಈ ಯೋಜನೆ ಮುಗಿದಾಗ ೧೨೨೦ ಮೆಗಾವ್ಯಾಟ್ ವಿದ್ಯುತ್ತನ್ನು ಉತ್ಪಾದಿಸುತ್ತದೆ. ರಭಸವಾಗಿ ಹರಿಯುವ ಕಾಳಿಯನ್ನು ತಡೆಗಟ್ಟಿ ಆಣೆಕಟ್ಟನ್ನು ಕಟ್ಟುವ ಕೆಲಸ ಆಗಲೇ ಆರಂಭವಾಗಿದೆ. ಮುಗ್ಧ ಹಳ್ಳಿಗರು ಪ್ರತಿದಿನ ಸಿಡಿಮದ್ದಿನಿಂದ ಬರುವ ಸಿಡಿಲಿನಂತಹ ಶಬ್ದದಿಂದ ತಳಮಳಗೊಂಡರೂ ಈಗ ಅದು ಅವರಿಗೆ ಅಭ್ಯಾಸವಾಗಿ ಹೋಗಿದೆ. ಈ ವಿದ್ಯುತ್ ಯೋಜನೆಯಿಂದಾಗಿ ಕಾಳಿಯ ದಡದಲ್ಲಿರುವ ೨೧,೫೯೬ ಹೆಕ್ಟೇರು ಕ್ಷೇತ್ರ ಮುಳುಗಡೆಯಾಗಲಿದೆ.

ಸರಕಾರದ ಅರಣ್ಯ ನಾಶದ ಕಾರ್ಯಕ್ರಮ ಹಳ್ಳಿಗರನ್ನು ದಂಗು ಮಾಡಿತು. ಮೊದಮೊದಲು ಬಂದ ಟ್ರಕ್ಕನ್ನು ನೋಡಿ ಆನಂದವಾದರೂ ಮರ ಕಡಿದ ನಂತರ ನೆಟ್ಟ ನೀಲಗಿರಿ ಮತ್ತು ಸಾಗವಾನಿಯ ಉರಿಯಲ್ಲಿ ತಮ್ಮ ಜೀವನವನ್ನು ಅಸ್ತವ್ಯಸ್ತಗೊಳಿಸುವ ಸಂಚನ್ನು ಕಂಡರು. ದಾಂಡೇಲಿಯ ಕಾಗದದ ಕಾರಖಾನೆ ಮತ್ತು ಪ್ಲಾಯ್‌ವುಡ್ ಕಾರಖಾನೆಗಳಿಗಾಗಿ ಸುಲಭದರದಲ್ಲಿ ಸರಕಾರ ಕಾಡನ್ನು ಕಡಿದು ಒಪ್ಪಿಸಿದ್ದಲ್ಲದೆ ಮುಂಬರುವ ವರ್ಷಗಳಲ್ಲಿ ಸಹ ಸುಲಭದರದಲ್ಲಿ ಕೊಡುವ ಒಪ್ಪಂದ ಮಾಡಿಕೊಂಡಿತು. ಉದ್ದಿಮೆಗಳಿಗೆ, ಕಾರಖಾನೆಗಳಿಗೆ, ಪಟ್ಟಣಗಳಿಗೆ, ಕಾಳಿ ಕಣಿವೆಯ ಗಿಡ-ಮರ ಕಡಿದು ಸಾಗಿಸುವ ಕಾರ್ಯ ಆರಂಭವಾಯಿತು. ಈ ಅರಣ್ಯ ನೀತಿಯಿಂದಾಗಿ ಹಳ್ಳಿಯ ಜನರ ಕಷ್ಟ ಹೆಚ್ಚುತ್ತಲೇ ಹೋಯಿತು.

## ಪರಿಸರದ ಮೇಲೆ ಪರಿಣಾಮ

ಕಾಳಿ ನದಿ ಅಥವಾ ಯಾವುದೇ ನದಿಯ ಮೂಲ ಮತ್ತು ಅದರ ಸುತ್ತಲಿರುವ ಪ್ರದೇಶ ಅತಿ ಸೂಕ್ಷ್ಮವಾದದ್ದು. ಈ ಕ್ಷೇತ್ರದಲ್ಲಿಯ ಜನಜೀವನ ಪ್ರಕೃತಿಯ ಜೊತೆ ಸಮತೋಲನವನ್ನು ಕಾಪಾಡಿಕೊಂಡು ಸೂಕ್ಷ್ಮ ಕ್ಷೇತ್ರವನ್ನು ರಕ್ಷಿಸುವುದರಲ್ಲಿ ಮಹತ್ತರ ಪಾತ್ರ ವಹಿಸಿತ್ತು. ಆದರೆ ಡಿಗ್ಗಿಯಲ್ಲಿ ಗಣಿ ಕೆಲಸ ಆರಂಭವಾದ ನಂತರ

ಈ ಸಮತೋಲನ ನಾಶವಾಗಿ ಸಂಪೂರ್ಣ ನದೀ ಮೂಲದ ಕ್ಷೇತ್ರವನ್ನೇ ನಾಶಪಡಿಸಲು ಅಣಿ ಮಾಡಿಕೊಟ್ಟಿತು. ಹಳ್ಳಿಯ ಜನರು ನೋಡುತ್ತಿದ್ದಂತೆ ನೀರಿನ ಸೆಲೆಗಳು ಬತ್ತಲು ಆರಂಭಿಸಿವೆ. ಕಾಳಿಯ ನದಿಯು ಹುತ್ತೊಂದು ಸೆಲೆ ಕುಸುರಾವಲಿಯಿಂದ ಆರಂಭವಾಗುತ್ತದೆ. ಕೆಲ ವರ್ಷಗಳಿಂದ ನಡೆಯುತ್ತಿರುವ ಗಣಿ ಕೆಲಸದಿಂದಾಗಿ ಆಗಲೇ ಆ ಸೆಲೆ ಬತ್ತಿಹೋಗಿದೆ. ಇನ್ನು ಮಳೆಗಾಲದಲ್ಲಿ ಸತತವಾಗಿ ಬರುವ ಮಳೆಯಿಂದಾಗಿ ಈ ಗಣಿಗಳಲ್ಲಿ ನೀರು ತುಂಬಿ ಹಳ್ಳಿಯ ಕೃಷಿ ಭೂಮಿಗೆ ಗಂಡಾಂತರಕರವಾಗಿ ಸಮಸ್ಯೆಗಳನ್ನು ಸೃಷ್ಟಿಸುತ್ತಿವೆ.

ದಾಂಡೇಲಿಯ ಕಾರಖಾನೆಗಳು ಪರಿಸರ ಪ್ರಕೃತಿಯ ನಾಶದ ಆಧಾರದ ಮೇಲೆ ಆರಂಭವಾಗಿವೆ. ಪ್ಲಾಯ್‌ವುಡ್ ಕಾರಖಾನೆ ಪ್ರತಿದಿನ ೨೫೦ ಘನ ಮೀಟರಿನಷ್ಟು ಉತ್ತಮ ನಾಟನ್ನು ಬಳಸುತ್ತದೆ. ಇದರಿಂದಾಗಿ ಈ ಕ್ಷೇತ್ರದಲ್ಲಿರುವ ದೊಡ್ಡ ಮರಗಳು ಸಂಪೂರ್ಣವಾಗಿ ನಾಶಗೊಂಡಿವೆ. ಸದ್ಯ ಈ ಕಾರಖಾನೆಯವರು ಉತ್ತರ ಕನ್ನಡದ ಅರಣ್ಯ ಸಂಪತ್ತನ್ನು ನಾಶಗೊಳಿಸಿ ಬರ್ಮಾದಿಂದ ದೊಡ್ಡ ಮರಗಳನ್ನು ಆಮದು ಮಾಡಿಕೊಳ್ಳಲು ಆರಂಭಿಸಿದ್ದಾರೆ. ಪ್ಲಾಯ್‌ವುಡ್ ಉಪಯೋಗವಾಗುವುದು ಕೇವಲ ಪಟ್ಟಣಗಳಲ್ಲಿ ಮಾತ್ರ. ಕಾಗದದ ಕಾರಖಾನೆ ಹಿಂದೆ ವಿಪುಲವಾಗಿದ್ದ ಬಿದಿರನ್ನು ಸಂಪೂರ್ಣವಾಗಿ ನಾಶಗೊಳಿಸಿದೆ. ಸದ್ಯ ಹೊಸ ಉಪಕರಣಗಳನ್ನು ಅಳವಡಿಸಿ ನೀಲಗಿರಿ ಮತ್ತಿತರ ಗಿಡಮರಗಳ ಕಟ್ಟಿಗೆಯನ್ನು ಉಪಯೋಗಿಸಲು ಆರಂಭಿಸಿದೆ. ಪ್ರತಿದಿನ ಈ ಕಾರಖಾನೆ ಉಪಯೋಗಿಸುವ ಕಟ್ಟಿಗೆ ೧೦೦ ಟನ್ನುಗಳಷ್ಟು.

ಕಾಳಿ ನದಿಯ ನೀರನ್ನು ಉಪಯೋಗಿಸುವ ಈ ಕಾರಖಾನೆ ಕಾಗದ ತಯಾರಿಸಿದ ನಂತರ ಉಳಿದ ಅನಿಲಗಳನ್ನು ನದಿಯಲ್ಲಿ ಹರಿಯಬಿಡುತ್ತದೆ. ಇದರಿಂದಾಗುವ ಮಾಲಿನ್ಯದ ಪರಿಣಾಮ ಕೆಳಗಡೆ ಇರುವ ಹಲವಾರು ಹಳ್ಳಿಗಳ ಮೇಲಾಗುತ್ತದೆ. ದಾಂಡೇಲಿ ಮತ್ತು ಹತ್ತಿರದ ಸ್ಥಳಗಳು ದುರ್ಗಂಧದಿಂದ ಕೂಡಿದ್ದರೆ ನದಿಯ ಕೆಳಗಡೆ ೫೦ ಕಿ. ಮಿ. ದೂರದಲ್ಲಿನ ಕೊಡಸಳ್ಳಿಯಲ್ಲಿ ಈ ಅನಿಲದಿಂದಾದ ದುರ್ಗಂಧದಿಂದ ಕೊಳೆತು ನಾರುವಂತೆ ಇರುವ ನದಿಯನ್ನು ನೋಡಬಹುದು. ಇಲ್ಲಿ ನೀರಿನ ಮೇಲೆ ದಪ್ಪವಾದ ಪದರು ಆವರಿಸಿಕೊಂಡಿದೆ. ದನಕರುಗಳಿಗೆ ಸಹ ಹಳ್ಳಿಗರು ಈ ನೀರನ್ನು ಕುಡಿಸುವುದಿಲ್ಲ. ಕೊಡಸಳ್ಳಿಯಲ್ಲಿ ಕಾಳಿ ನದಿ ದಾಟುವಾಗ ದೋಣಿ ನಡೆಸುತ್ತಿರುವ ಅಂಬಿಗನನ್ನು ಅಲ್ಲಿ ಮೀನು ಹಿಡಿಯುವ ಬಗ್ಗೆ ಕೇಳಿದಾಗ, "ಇಲ್ಲಿ ಮೀನು ಸಿಕ್ಕುವುದೇ ಇಲ್ಲ. ಈ ದಾಂಡೇಲಿ ಕಾರಖಾನೆಯಿಂದಾಗಿ ಕೊಳೆತು ನಾರುವ ಈ ನೀರಿನಲ್ಲಿ ಪಕ್ಷಿ ಸಹ ನೀರು ಕುಡಿಯುವುದಿಲ್ಲ," ಎಂದ.

ಜಲ ವಿದ್ಯುತ್ ಯೋಜನೆಗಳು ಆಗಲೇ ಸ್ವತಂತ್ರ ಜೀವನ ನಡೆಸುತ್ತಿರುವ ಜನರ ಜೀವನವನ್ನು ಅಸ್ತವ್ಯಸ್ತಗೊಳಿಸಿವೆ. ಸೂಪಾ ಅಣೆಕಟ್ಟೆಯಲ್ಲಿ ಮುಳುಗಡೆಯಾಗಲಿರುವ ಹಳ್ಳಿಗರಿಗೆ ರಾಮನಗರದಲ್ಲಿ ಪುನರ್ವಸತಿ ಮಾಡಲಾಗಿದೆ. ದಟ್ಟವಾದ ಕಾಡಿರುವ ಕ್ಷೇತ್ರದಲ್ಲಿ ೫೦೦೦ ಎಕರೆ ಕ್ಷೇತ್ರವನ್ನು ಸಂಪೂರ್ಣವಾಗಿ ನಾಶ ಮಾಡಿ ಮುಳುಗಡೆಯಾಗಲಿರುವ ಹಳ್ಳಿಗರಿಗಾಗಿ ಗದ್ದೆಯನ್ನು ಮಾಡುವ ಸಲುವಾಗಿ ನೆಲವನ್ನು ಸಮ ಮಾಡಿ ಕೊಡಲಾಗಿದೆ. ಆಗಲೇ ನಾಲ್ಕು ವರ್ಷಗಳಿಂದ ಬಂದು ನೆಲೆಸಿರುವ ಹಳ್ಳಿಗರು ಒಮ್ಮೆಯೂ ಭತ್ತದ ಬೆಳೆಯನ್ನು ಬೆಳೆಯಲು ಬಾರದಿರುವ ಈ ಬರಡು ಭೂಮಿಯಿಂದ ಕಂಗಾಲಾಗಿದ್ದಾರೆ. ನೋಡಿದಾಗ, ಬೇಕೆಂದರೂ ಒಂದೂ ಮರವಿರದ ಈ ೫೦೦೦ ಎಕರೆ ಕ್ಷೇತ್ರದಲ್ಲಿಯ ಮೇಲಿನ ಪದರು ಕವಚ ಆಗಲೇ ತೊಳೆದುಕೊಂಡು ಹೋಗಿ ಭೂಮಿ ಬರಡಾಗಿದೆ. ಸದ್ಯ ನೋಡಿದರೆ ಮಾನವ ನಿರ್ಮಿತ ಮರುಭೂಮಿಯಂತೆ ಕಾಣುತ್ತದೆ. ಹಿಂದೆ ವಿಪುಲವಾಗಿ ಸಿಗುತ್ತಿದ್ದ ಜವಳು ನೀರಿನಿಂದ ಎರಡು ಬೆಳೆಯುತ್ತಿದ್ದ ಕೃಷಿಕರು ಇಂದು ಕಂಗಾಲಾಗಿ, ಕೆಲಸಕ್ಕಾಗಿ ಗೋವೆಗೆ ಅಲೆದಾಡುತ್ತಿದ್ದಾರೆ. ಇದು ಮನುಷ್ಯನ, ಹಳ್ಳಿಗರ ಜೀವನದ ಮೇಲೆ ಆದ ನೇರವಾದ ದುಷ್ಪರಿಣಾಮ.

## ವಿನಾಶಕ್ಕೆ ನಾಂದಿ

ಉಷ್ಣವಲಯದ ಸದಾ ಹಸಿರು ಕಾಡಿನ ಮಹತ್ವ ಹಲವಾರು. ಮುಖ್ಯವಾಗಿ ಈ ಪರ್ವತ ಮಾಲೆಯು ಕರ್ನಾಟಕದಲ್ಲಿ ಸಮಯಕ್ಕೆ ಸರಿಯಾಗಿ ಬರುವ ಮಳೆಗೆ ಮೂಲ ಕಾರಣ. ಈಗ ಅದನ್ನು ನಾಶ ಮಾಡಿ ಮುಂದೆ ಬರುವ ಬರಗಾಲಕ್ಕೆ ನಾವು ಹಾದಿ ಮಾಡಿಕೊಟ್ಟಾಗಿದೆ. ಈ ನೀರಿನ ಭಂಡಾರವನ್ನು ಕೊನೆಗೊಳಿಸಲು ಅರಣ್ಯ ನಾಶ ಮತ್ತು ಗಣಿ ಕೆಲಸ ಮುಖ್ಯ ಕಾರಣ. ಸಧ್ಯ ಕಟ್ಟುತ್ತಿರುವ ಸೂಪಾ ಅಣೆಕಟ್ಟು ಮತ್ತು ಇತರ ಕಾಳೀ ಜಲ ವಿದ್ಯುತ್ ಯೋಜನೆಗಳಿಗೆ ಆಧಾರ ಸ್ತಂಭವಾಗಿರುವ ಈ ನದಿಯ (ಕ್ಯಾಚ್‌ಮೆಂಟ್–ಕ್ಷೇತ್ರ) ಪಾತ್ರವನ್ನು ಬರಡು ಭೂಮಿಯಾಗಿ ಪರಿವರ್ತಿಸಿದಲ್ಲಿ ಮುಂಬರುವ ವರ್ಷಗಳಲ್ಲಿ ಬಹಳ ವಿನಾಶಕರ ಪರಿಣಾಮಗಳಿಗೆ ಗುರಿಯಾಗಬೇಕಾದೀತು. ಅರಣ್ಯದಲ್ಲಿ ಗಿಡ–ಮರಗಳ ಕವಚ ಕೊನೆಗೊಳ್ಳುತ್ತ ಬಂದಂತೆ ಭೂಮಿಯ ಕವಚ ಮಳೆಯಿಂದಾಗಿ ತೊಳೆದು ಅಣೆಕಟ್ಟಿನ ಅಡಿಯಲ್ಲಿ ಉಸುಕು ಬಂದು ಶೇಖರಿಸುವ ಅಪಾಯ ಬಹಳ ಗಂಭೀರವಾದದ್ದು. ಇದರಿಂದ ಅಣೆಕಟ್ಟಿನ ಆಯುಷ್ಯ ಕಡಿಮೆಯಾಗುವುದು, ಅಲ್ಲದೆ ವಿದ್ಯುತ್ ಉತ್ಪಾದನೆಯಲ್ಲಿ ಇದು ಬಹಳ ದೊಡ್ಡ ಸಮಸ್ಯೆಯನ್ನು ತಂದೊಡ್ಡುತ್ತದೆ. ಆಗಲೇ ಶರಾವತಿ ವಿದ್ಯುತ್‌ಯೋಜನೆಯ ಪ್ರದೇಶ ಈ ಸಮಸ್ಯೆಯನ್ನು ಎದುರಿಸುತ್ತಿದೆ.

## ವಿನಾಶ ತಡೆಯಲು ಸಾಧ್ಯವೇ

ಅರಣ್ಯ ನಾಶ, ಮತ್ತು ಬರಗಾಲ, ಕ್ಷಾಮಕ್ಕೆ ಬಹಳ ಹತ್ತಿರದ ಸಂಬಂಧವಿದೆ. ಆಗಲೇ ಮಲೆನಾಡಿನಂತಿರುವ ಕೇರಳ ರಾಜ್ಯದಲ್ಲಿ ಜನರು ತಮ್ಮ ಜೀವನದ ಮೊದಲನೆಯ ಬರಗಾಲವನ್ನು ಎದುರಿಸುತ್ತಿರುವರು. ಪಶ್ಚಿಮ ಘಟ್ಟದ ಈ ವನಸಿರಿಯನ್ನು ಕಾಳೀ ನದಿಯ ಕ್ಷೇತ್ರದಲ್ಲಿಯ ಅರಣ್ಯವನ್ನು ನಾಶ ಮಾಡಿ ಕರ್ನಾಟಕವನ್ನು ಮುಂಬರುವ ವರ್ಷಗಳಲ್ಲಿ ಸತತವಾಗಿ ಬರಗಾಲ ಪೀಡಿತ ಪ್ರದೇಶವನ್ನಾಗಿ ಮಾಡುವುದರಲ್ಲಿ ಸಂದೇಹವಿಲ್ಲ.

ಮೇಲೆ ವರ್ಣಿಸಿದ ವಿನಾಶವನ್ನು ತಡೆಯಲು ಸಾಧ್ಯವಿದೆ. ಇನ್ನೂ ಸಮಯ ಮೀರಿಲ್ಲ. ಆದರೆ ಇದನ್ನು ತಡೆಯುವುದು ಅಗತ್ಯವೆನ್ನಿಸುವುದೂ ಬಹಳ ಮುಖ್ಯ. ಮುಂಬರುವ ಜನಾಂಗಕ್ಕೆ ನಾವು ಮಾಡುವ ಈ ಕೆಲಸದಿಂದಾಗಿ ಅಪಾಯವಿದೆ ಎಂಬುದನ್ನೂ ಜನರು ಅರಿಯಬೇಕು. ಅತೀ ಸೂಕ್ಷ್ಮವಾದ ಕಾಳಿ ನದೀ ಮೂಲದ ಕ್ಷೇತ್ರದಲ್ಲಿ ನಡೆಯುತ್ತಿರುವ ಗಣಿ ಕೆಲಸ ಮತ್ತು ಅರಣ್ಯ ನಾಶ ಕೂಡಲೇ ನಿಲ್ಲಬೇಕು. ಆದರೆ ಇದು ಹೇಳಿದಷ್ಟು ಸುಲಭವಲ್ಲ. ಜನರು ಮುಂದಾಗಿ ಈ ವಿನಾಶವನ್ನು ತಡೆಯುವುದಕ್ಕಾಗಿ ಸರಕಾರವನ್ನು ಒತ್ತಾಯಪಡಿಸಬೇಕು. ಕೇರಳದಲ್ಲಿ ಶಾಂತ ಕಣಿವೆ ಎಷ್ಟು ಮಹತ್ವದ್ದೋ ಕಾಳಿ ನದಿಯ ಡಿಗ್ಗಿ ಬೆಟ್ಟ ಸಹ ಅಷ್ಟೇ ಅಮೂಲ್ಯವಾದದ್ದು. ಇದನ್ನು ಕಾಪಾಡಿದರೆ ಮಾತ್ರ ಕರ್ನಾಟಕದ ಮುಂದಿನ ಭವಿಷ್ಯ ಸುಗಮವಾಗಿರಲು ಸಾಧ್ಯ. ಇದಲ್ಲದೇ ದಾಂಡೇಲಿಯಲ್ಲಿ ಕಾಳಿ ನದಿಯಲ್ಲಿ ಬಿಡುವ ಅಸಿಲದಿಂದಾಗುವ ಮಾಲಿನ್ಯ, ಅದರಿಂದ ಹಳ್ಳಿಗರ, ಪರಿಸರದ ಮೇಲಾಗುತ್ತಿರುವ ಅಪಾಯಕಾರಿ ಪ್ರಭಾವವನ್ನು ತಡೆಯುವುದು ಅವಶ್ಯ. ಇದರಿಂದ ಕಾಳಿ ನದಿ ಕ್ಷೇತ್ರದ ಜನಜೀವನ ಮೊದಲಿನಂತೆ ಶಾಂತಿ – ಸುಖವಾಗಲು ಸಹಾಯಕವಾದೀತು. ✡



**ಸೂರ್ಯನ ಸುತ್ತಲೂ ಪೃಥ್ವಿ ಸುತ್ತುತ್ತಿದೆಯೆಂದು ಮೊದಲು ಹೇಳಿದವನಾರು? ಗೆಲಿಲಿಯೋನೆ? ಖಂಡಿತ ಅಲ್ಲ. ಆತ ಇಂದಿಗೆ ೨೨ ಶತಮಾನಗಳ ಹಿಂದೆ ಜೀವಿಸಿದ್ದ ಅರಿಸ್ಟಾರ್ಕಸ್ ಎಂಬ ಗ್ರೀಕ್ ಖಗೋಳವಿದ.**

# ನೋವಿನ ಉಪಶಮನ-ಅತಿ ಶೀಘ್ರ ವಿಧಾನ

# ಅಯೊಡೆಕ್ಸ್® ಹಚ್ಚಿರಿ, ಮತ್ತೆ ಓಡಾಡಿರಿ

ಬೆನ್ನು ನೋವೇ?
ಉಳುಕೇ?
ಸಂದು ಸೆಡೆತವೇ?
ಸ್ನಾಯು ಹಿಡಿತವೇ?

ಈ ವ್ಯಾಧಿಗಳಿಗೆ ನಿಜವಾದ ಕಾರಣ ಅಂಗಾಂಶಗಳಿಗೆ ಉಂಟಾದ ಹಾನಿ. ಅಯೊಡೆಕ್ಸ್ ನೋವನ್ನು ಉಪಶಮನಗೊಳಿಸುತ್ತಿರುವಾಗಲೇ ಗುಣಪಡಿಸುತ್ತದೆ.

**ದಿನಕ್ಕೆರಡು ಸಲ ಅಯೊಡೆಕ್ಸ್ ಹಚ್ಚಬೇಕು.**

ನೋವು ಶುರು ಆದೊಡನೆ ಅಯೊಡೆಕ್ಸ್ ಹಚ್ಚಿರಿ— ಕಡಿಮೆ ಪಕ್ಷ ದಿನಕ್ಕೆರಡು ಸಲ ಹಚ್ಚಿರಿ. ಸಂಪೂರ್ಣವಾಗಿ ಗುಣಹೊಂದಲು ನೋವು ನಿಂತ ಮೇಲೂ 1-2 ದಿನ ಹಚ್ಚಿಕೊಳ್ಳಿರಿ.




**ಅಯೊಡೆಕ್ಸ್®**
**ಗುಣಪಡಿಸುವ ಮುಲಾಮು**
SKCF — [illegible]

ನೆನಪಿನ ಸುಳಿಯಿಂದ

# ಇಚೋಗಿಲ್ ಕದನ

ರೇಣುಕ

ಜಮ್ಮು ವಿಭಾಗದಲ್ಲಿನ ಚ್ಹಾಂಬ್‌ನಲ್ಲಿ ಪಾಕಿಸ್ತಾನಿಗಳು ನಡೆಸಿದ ಆಕ್ರಮಣದ ಸೇಡಿಗಾಗಿ ನಮ್ಮ ಸೇನೆ ವಿವಿಧ ಭಾಗಗಳಲ್ಲಿ ಭಾರತದ ಗಡಿಯನ್ನು ದಾಟಿ ಪಾಕಿಸ್ತಾನಿ ಪ್ರದೇಶದೊಳಗೆ ಅಡಿಯಿಟ್ಟ ಸಮಯ.

ಬಿಕಿವಿಂದ್, ಕಾಲ್ರಾ–ಲಾಹೋರ್ ಹೆದ್ದಾರಿಯ ಮೂಲಕ ಗುರ್ಖಾ, ಸಿಖ್ ಮತ್ತು ಮದ್ರಾಸ್ ಬಟಾಲಿಯನ್ನುಗಳನ್ನೊಳಗೊಂಡ ನಮ್ಮ ಪಡೆ ಪಾಕಿಸ್ತಾನಿ ಪ್ರದೇಶದೊಳಗೆ ಭಾರತದ ಗಡಿಯನ್ನು ದಾಟಿ ೧೯೬೫ ರ ಸೆಪ್ಟೆಂಬರ್ ಆರನೇ ತಾರೀಖು ಪ್ರವೇಶಿಸಿತು. ಬರ್ಕಿಕಲಾನ್ ಗ್ರಾಮವನ್ನು ಸೆಪ್ಟೆಂಬರ್ ಹತ್ತನೇ ತಾರೀಖು ರಾತ್ರಿ ಹತ್ತು ಗಂಟೆಗೆ ಅತಿ ಪ್ರಯಾಸದಿಂದ ಕೆಲವು ಸಾವು ನೋವುಗಳೊಂದಿಗೆ ವಶಪಡಿಸಿಕೊಂಡಿತು.

ಆ ದಿನ ರಾತ್ರಿ ನಡೆದ ಕಾಳಗದಲ್ಲಿ ನಮ್ಮ ತುಕಡಿಯ ಸುಭೇದಾರ್ ಮಾಧವನ್ ನಾಯರ್ ಮತ್ತು ಇತರ ಹತ್ತು ಮಂದಿ ಯೋಧರು ಶತ್ರುಗಳ ಷೆಲ್ಲುಗಳ ಸಿಡಿತಕ್ಕೆ ತುತ್ತಾಗಿ ಅಸು ನೀಗಿದರು.

ಪಾಕಿಸ್ತಾನಿಗಳಿಗೆ ನಮ್ಮ ದಾಳಿ ಅನಿರೀಕ್ಷಿತವಾಗಿತ್ತು. ನಾವು ಗ್ರಾಮವನ್ನು ಪ್ರವೇಶಿಸಿದಾಗ ಪಾಕಿಸ್ತಾನಿ ಸೈನಿಕರು ಅಪಾರವಾದ ಮದ್ದು ಗುಂಡುಗಳನ್ನು ಬಿಟ್ಟು ಇಚೊಗಲ್ ಕಾಲುವೆಯನ್ನು ದಾಟಿ ಓಡಿ ಹೋಗಿದ್ದರು. ಎರಡು ಟ್ರಕ್ಕುಗಳಲ್ಲಿ ತುಂಬಿದ್ದ ಮದ್ದುಗುಂಡುಗಳು ಮತ್ತು ಹಲವಾರು ಎಂ.ಎಂ.ಜಿ. (ಮೀಡಿಯಂ ಮಷಿನ್‌ಗನ್)ಗಳು ನಮ್ಮ ವಶವಾಗಿದ್ದುವು.

ನಾವು ಗ್ರಾಮವನ್ನು ಪ್ರವೇಶಿಸುವುದಕ್ಕೆ ಹಲವಾರು ಗಂಟೆಗಳ ಮೊದಲೂ ಜನರನ್ನು ಬೇರೆಡೆಗೆ ಸಾಗಿಸಿದ್ದರೆಂದು ಗ್ರಾಮವನ್ನು ಪ್ರವೇಶಿಸಿದಾಗ ನಮಗೆ ತಿಳಿದುಬಂದಿತು. ಕೆಲವು ಮನೆಗಳಲ್ಲಿ ಒಲೆಗಳ ಮೇಲಿನ ಹಂಚುಗಳಲ್ಲಿ ರೊಟ್ಟಿಗಳು ಸೀಯುತ್ತಿದ್ದುವು. ಕೆಲವು ಮನೆಗಳಲ್ಲಿ ಬಟ್ಟೆ ಬರೆಗಳನ್ನು ತುಂಬಿದ್ದ ತೆರೆದ ಟ್ರಂಕುಗಳು, ಚೆಲ್ಲಾಡಿದ್ದ ದವಸ ಧಾನ್ಯಗಳು ಕಾಣಬಂದವು.

ಕೆಲವು ಕಿರಾಣಿ ಮತ್ತು ಜವಳಿ ಅಂಗಡಿಗಳ ವರ್ತಕರು ಅಂಗಡಿಯ ಬಾಗಿಲನ್ನು ಸಹ ಮುಚ್ಚದೆ ಗಾಬರಿಯಲ್ಲಿ ಓಡಿ ಹೋಗಿದ್ದರು. ಪಂಚಾಯಿತಿ ಆಫೀಸಿನ ಮೇಜಿನ ಮೇಲೆ ಹಲವಾರು ಫೈಲುಗಳು, ಖಾತೆ-ಕಿರ್ದಿಗಳು ಅಸ್ತವ್ಯಸ್ತವಾಗಿ ತೆರೆದುಕೊಂಡು ಬಿದ್ದಿದ್ದವು. ಗ್ರಾಮದ ಪಟವಾರಿಯು ಗಾಬರಿಯಲ್ಲಿ ಕಚೇರಿಯ ಬಾಗಿಲನ್ನು ಮುಚ್ಚಲು ಸಹ ವ್ಯವಧಾನವಿಲ್ಲದೆ ಓಡಿ ಹೋಗಿದ್ದ. ಆ ಗ್ರಾಮವು

ಇಷ್ಟು ಬೇಗ ನಮ್ಮ ಪಡೆಗಳ ಕೈಗೆ ಬೀಳಬಹುದೆಂದು ಅವರು ಕನಸಿನಲ್ಲಿಯೂ ನೆನೆಸಿರಲಾರರು. ಅಷ್ಟು ಅನಿರೀಕ್ಷಿತ ಮತ್ತು ತೀವ್ರ ಗತಿಯದಾಗಿತ್ತು ನಮ್ಮ ದಾಳಿ !

ಆ ಹಳ್ಳಿಯಲ್ಲಿ ನಡೆಯಲಾರದ ಇಬ್ಬರು ಹಣ್ಣು ಹಣ್ಣು ಮುದುಕಿಯರನ್ನು ಬಿಟ್ಟು ಎಲ್ಲರೂ ನಮ್ಮ ಪಡೆ ಬರುವುದಕ್ಕೆ ಮುಂಚೆ ಓಡಿ ಹೋಗಿದ್ದರು. ಆ ಮುದುಕಿಯರು ನಮಗೆ ಹಳ್ಳಿಯ ಹೊರವಲಯದಲ್ಲಿದ್ದ ಕುಡಿಯುವ ನೀರಿನ ಬಾವಿಗಳನ್ನು ತೋರಿಸಿದರು. ಅನಂತರ ನಾವು ಅವರನ್ನು ಯುದ್ಧ ಮುಗಿಯುವ ವರೆಗೂ ಸುರಕ್ಷಿತ ಪ್ರದೇಶಕ್ಕೆ ಕಳುಹಿಸಿಕೊಟ್ಟೆವು.

ಗ್ರಾಮದಿಂದ ಹೊರಬಿದ್ದ ಪಾಕಿಸ್ತಾನಿ ಸೈನಿಕರು ಇಚೋಗಲ್ ಕಾಲುವೆಯನ್ನು ದಾಟಿ, ಕಾಲುವೆಯ ಆಚೆಯ ದಡಿಯಲ್ಲಿನ ಏರಿಯ ಪಕ್ಕದಲ್ಲಿ ಮೊದಲೇ ನಿರ್ಮಿಸಿದ್ದ ಗುಪ್ತಗಳೋಪಾದಿಯ ಕಾಂಕ್ರೀಟ್ ಪಿಲ್‌ಬಾಕ್ಸುಗಳಲ್ಲಿ ಸೇರಿಕೊಂಡು, ಕಾಲುವೆಯ ಮೇಲಿನ ಏಕೈಕ ಸಂಪರ್ಕ ಸಾಧನವಾಗಿದ್ದ ಸೇತುವೆಯನ್ನು ಮುರಿದು ಹಾಕಿದರು.

ಇಚೋಗಲ್ ಕಾಲುವೆ ಸುಮಾರು ೧೨೦ ಅಡಿಗಳಷ್ಟು ಅಗಲವಾಗಿದ್ದು, ೩೦ ಅಡಿಗಳಿಗಿಂತಲೂ ಹೆಚ್ಚು ಆಳವಾಗಿ ಇಕ್ಕೆಲಗಳಲ್ಲಿಯೂ ಎತ್ತರವಾದ ಏರಿಗಳಿಂದ ಸುಮಾರು ನಲವತ್ತು ಮೈಲುಗಳವರೆಗೂ ಹರಿದುಹೋಗುತ್ತಿತ್ತು. ನಾವಿದ್ದ ಬರಾಕಲಾನ್ ಗ್ರಾಮದಿಂದ ಕಾಲುವೆಯನ್ನು ದಾಟಿ ಹನ್ನೆರಡು ಮೈಲು ಸಾಗಿದರೆ ಲಾಹೋರ್ ನಗರ ಸಿಕ್ಕುತ್ತಿತ್ತು.

ನಮ್ಮ ಮುಂಚೂಣಿಯ ಕಾವಲು ಪಡೆಗಳು ಬರಾಕಲಾನ್ ಗ್ರಾಮದಿಂದ ಎರಡು ಮೈಲು ದೂರದಲ್ಲಿದ್ದ ಕಾಲುವೆಯ ಪೂರ್ವದ ಕಡೆಯ ಏರಿಯ ಬಳಿ ಶತ್ರುಗಳ ಚಲನವಲನಗಳನ್ನು ವೀಕ್ಷಿಸಲು ಹೋದಾಗ ಕಾಲುವೆಯ ಆಚೆಯ ದಡಿಗಿದ್ದ ಕಾರಬತ್ ಗ್ರಾಮದ ಬಳಿಯಲ್ಲಿನ ಸೈಫೋನ್ ಪ್ರದೇಶದಿಂದ ಪಾಕಿಸ್ತಾನಿ ಸೈನಿಕರು ಮೀಡಿಯಂ ಮೆಷಿನ್‌ಗನ್ನುಗಳಿಂದ [illegible] ಸುರಿಮಳೆಯನ್ನೇ ಸುರಿಸಿದರು.

ಅನಂತರ ದೊರೆತ ರಹಸ್ಯ ವರದಿಯ ಪ್ರಕಾರ ಕಾರಬತ್ ಬಳಿ ಕಾಲುವೆಯನ್ನು ದಾಟಲು ತೂಗು ಸೇತುವೆಯೊಂದಿದೆಯೆಂದು ತಿಳಿದು ಬಂತು. ಆ ಸೇತುವೆಯ ಮೇಲೆ ಫಿರಂಗಿ ಗಾಡಿಗಳು ಮತ್ತು ಟ್ಯಾಂಕುಗಳು ಸಾಗುವ ಹಾಗಿರಲಿಲ್ಲ. ಕಾಲಾಳು ಪಡೆಗಳು ಸೇತುವೆಯ ಮೇಲೆ ತಂಡ ತಂಡಗಳಂತೆ ಸರದಿಯ ಪ್ರಕಾರ ಜಾಗರೂಕವಾಗಿ ಸಾಗಬೇಕಿತ್ತು.

ಕಾರಬತ್‌ಗೆ ಸಮೀಪದಲ್ಲಿ ಶತ್ರುಗಳು ಬಲ



ದಾದ ರಕ್ಷಣಾವ್ಯೂಹವನ್ನು ರಚಿಸಿದ್ದರು. ಅದೂ ಅಲ್ಲದೆ ಆ ಪ್ರದೇಶ ನಮ್ಮ ಬ್ರಿಗೇಡಿನ ಆಕ್ರಮಿತ ಪ್ರದೇಶದಿಂದಲೂ ಕಾರ್ಯಾಚರಣೆಯ ವ್ಯಾಪ್ತಿಯಿಂದಲೂ ಹೊರಗಿದ್ದಿತು.

ಅನೇಕ ಕಾರಣಗಳಿಂದ ಮುಂದೆ ಸಾಗಲು ನಮಗೆ ಬ್ರಿಗೇಡಿನಿಂದ ಆದೇಶ ದೊರೆತಿರಲಿಲ್ಲ. ಸೆಪ್ಟೆಂಬರ್ ಇಪ್ಪತ್ತೊಂದನೆಯ ತಾರೀಖಿನ ವರೆಗೆ ಶತ್ರುಗಳ ದಾಳಿಯ ಯಾವ ಘಟನೆಗಳೂ ನಡೆಯಲಿಲ್ಲ. ನಮ್ಮ ಕಾವಲು ಪಡೆಗಳು ಆಕ್ರಮಿತ ಪ್ರದೇಶದ ಎಲ್ಲೆಯಲ್ಲಿ ಜಾಗರೂಕತೆಯಿಂದ ಪಹರೆ ಮಾಡುತ್ತಿದ್ದವು. ಸೈಫೋನ್ ಪ್ರದೇಶದಲ್ಲಾಗಲಿ ಅಥವಾ ಕಾಲುವೆಯ ಆಚೆಯ ಬದಿಯ ಏರಿಯ ಮೇಲಾಗಲಿ ಶತ್ರುಗಳ ಯಾವ ಚಲನವಲನವೂ ಕಂಡುಬರಲಿಲ್ಲ.

ಈಗ ಬರೆಯುವ ಘಟನೆ ಸೆಪ್ಟೆಂಬರ್ ೨೨ ಮತ್ತು ೨೩ರ ರಾತ್ರಿ ನಮ್ಮ ತುಕಡಿಯ ಧೀರ ಸೈನಿಕರು ಲೆಫ್ಟಿನೆಂಟ್ ಕರ್ನಲ್ ಬಿ.ಕೆ. ಸತ್ಯನ್ ಅವರ ನೇತೃತ್ವದಲ್ಲಿ ಶತ್ರುಗಳ ವಶದಲ್ಲಿದ್ದ ಈಶಾನ್ಯ ದಿಕ್ಕಿನ ಇಚೊಗಲ್ ಕಾಲುವೆಯ ಏರಿಯನ್ನು ಕಾರಬತ್ ಬಳಿ ಕೈ ಕೈ ಮಿಲಾಯಿಸಿದ ಕಾಳಗದಲ್ಲಿ ವಶಪಡಿಸಿಕೊಂಡಾಗ ಪ್ರಾರಂಭವಾದದ್ದು. ಕಾಲುವೆಯ ಏರಿಯನ್ನು ಮತ್ತೆ ಆಕ್ರಮಿಸಿಕೊಳ್ಳಲು ವಿಫಲ ಯತ್ನ ಮಾಡಿದ ಎರಡು ಪಾಕಿಸ್ತಾನಿ ಪಡೆಗಳ ಸಂಪೂರ್ಣ ವಿನಾಶದಲ್ಲಿ ಈ ಕಾಗಳ ಕೊನೆಗೊಂಡಿತು.

ಸೆಪ್ಟೆಂಬರ್ ಇಪ್ಪತ್ತೆರಡನೆಯ ತಾರೀಖು ಮಧ್ಯಾಹ್ನ 'ಆಕಾಶವಾಣಿ'ಯು ಕದನವಿರಾಮ ಆರಂಭವಾಗುವ ಸಮಯವನ್ನು ಬಿತ್ತರಿಸಿದ ಸುದ್ದಿಯನ್ನು ಕೇಳಿದೆವು (೨೩–೯–೬೫). ಮಾರನೆಯ ದಿನ ಕದನವಿರಾಮ ಪ್ರಾರಂಭವಾಗುವುದಕ್ಕೆ ಮುಂಚೆ ಪಾಕಿಸ್ತಾನಿ ಸೈನಿಕರು ತಾವು ಕಳೆದುಕೊಂಡಿದ್ದ ಪ್ರದೇಶವನ್ನು ಸಾಧ್ಯವಾದಷ್ಟು ಮತ್ತೆ ಆಕ್ರಮಿಸಿಕೊಳ್ಳುವ ಸಂಭವವಿತ್ತು.

ಮುಂಜಾಗ್ರತೆಯ ಕ್ರಮವಾಗಿ ಹೆಚ್ಚು ಕಾವಲು ಪಡೆಗಳನ್ನು ಇಚೊಗಲ್ ಕಾಲುವೆಯ ಪ್ರದೇಶಕ್ಕೆ ಕಳುಹಿಸಲಾಯಿತು. ರಾತ್ರಿ ಒಂಭತ್ತು ಗಂಟೆಯ ಸಮಯದಲ್ಲಿ ಮೇಜರ್ ಕೆ. ಗೋಪಿನಾಥನ್ ನಾಯರರ ನೇತೃತ್ವದಲ್ಲಿ ಕಾಲುವೆಯ ಏರಿಯ ಮೇಲೆ ಪಹರೆ ಮಾಡುತ್ತಿದ್ದ ಕಾವಲು ಪಡೆಯು ಕಾಲುವೆಯನ್ನು ದಾಟಲು ದೋಣಿಯಲ್ಲಿ ಬರುತ್ತಿದ್ದ ಪಾಕಿಸ್ತಾನಿ ತುಕಡಿಯೊಂದರ ಪ್ರಯತ್ನವನ್ನು ವಿಫಲಗೊಳಿಸಿತು.

ನಮ್ಮವರ ಗುಂಡಿನ ಸುರಿಮಳೆಗೆ ಸಿಕ್ಕಿದ ಪಾಕಿಸ್ತಾನಿ ದೋಣಿ ಕಾಲುವೆಯಲ್ಲಿ ಮುಳುಗಿತು. ದೋಣಿಯಲ್ಲಿದ್ದ ಪಾಕ್ ಸೈನಿಕರು ಕಾಲುವೆಯಲ್ಲಿನ ವೇಗವಾದ ಪ್ರವಾಹದಲ್ಲಿ ಕೊಚ್ಚಿಕೊಂಡು



ಹೋದರು. ಕಾಲುವೆಯ ಆಚೆಯ ಬದಿಯ ಏರಿಯ ಉದ್ದಕ್ಕೂ ರಕ್ಷಣಾ ವ್ಯವಸ್ಥೆಯನ್ನು ಪಾಕಿಸ್ತಾನಿಗಳು ಬಲಪಡಿಸಿದ್ದರು. ನಾವು ಮೊದಲೇ ನಿರೀಕ್ಷಿಸಿದ್ದಂತೆ ರಾತ್ರಿಯಾಗುತ್ತಾ ಸೈಫೋನ್ ಮತ್ತು ಕಾಲುವೆಯ ಆಚಿನ ಬದಿಯ ಏರಿಯ ಮೇಲೆ ಶತ್ರುಗಳ ಚಲನವಲನ ಹೆಚ್ಚುತ್ತಿದೆಯೆಂದು ಮುಂಚೂಣಿಯ ಕಾವಲು ಪಡೆಗಳಿಂದ ವರದಿಗಳು ಬರಲಾರಂಭಿಸಿದುವು.

ಕಾಲುವೆಯ ಆಚೆಯ ಬದಿಯಿಂದ ಶತ್ರುಗಳ ತೋಪುಗಳು ನಾವಿದ್ದ ಪ್ರದೇಶದ ಮೇಲೆ ಅನಿರೀಕ್ಷಿತವಾಗಿ ಬೆಂಕಿಯ ಸುರಿಮಳೆಯನ್ನು ಸುರಿಸಲಾರಂಭಿಸಿದುವು. ರಾತ್ರಿ ಹನ್ನೊಂದು ಗಂಟೆಯ ಹೊತ್ತಿಗೆ ಶತ್ರುಗಳು ಕಾಲುವೆಯ ಈಶಾನ್ಯ ದಿಕ್ಕಿನಲ್ಲಿ ನಮ್ಮ ವಶದಲ್ಲಿದ್ದ ಏರಿಯನ್ನು ವಶಪಡಿಸಿಕೊಳ್ಳಲು ಸೈಫೋನ್ ಪ್ರದೇಶದಿಂದ ಸಾಗಿ ಬರುವುದು ಖಚಿತವಾಯಿತು. ಇದರಿಂದ ಮೂರನೆಯ ದಿನ ಕದನವಿರಾಮ ಜಾರಿಗೆ ಬರುವ ಮುನ್ನ ಕೈಬಿಟ್ಟು ಹೋಗಿದ್ದ ಹೆಚ್ಚು ಪ್ರದೇಶಗಳನ್ನು ಮತ್ತೆ ಆಕ್ರಮಿಸಿಕೊಳ್ಳುವ ಪಾಕಿಸ್ತಾನಿ ಪಡೆಗಳ ಹಂಚಿಕೆ ನಮಗೆ ತಿಳಿದುಬಂದಿತು.

ಕೂಡಲೇ ಬ್ರಿಗೇಡಿಯರ್ ಫೇಸ್‌ರವರ ನೇತೃತ್ವದಲ್ಲಿ ದಳಪತಿಗಳ ಸಮಾಲೋಚನೆ ನಡೆಯಿತು. ಪಾಕಿಸ್ತಾನಿಗಳನ್ನು ಆಕ್ರಮಿತ ಪ್ರದೇಶದಿಂದ ಹೊರದೂಡುವ ಕಾರ್ಯವನ್ನು ನಮ್ಮ ಮದ್ರಾಸ್ ಪಡೆಗೆ ವಹಿಸಲಾಯಿತು. ಸಿಖ್ ಮತ್ತು ಪಂಜಾಬ್ ರೆಜಿಮೆಂಟಿನ ತುಕಡಿಗಳನ್ನು ನಮಗೆ ಮೀಸಲು ಪಡೆಗಳಾಗಿ ನಿಯಮಿಸಲಾಯಿತು.

ಅಷ್ಟು ಹೊತ್ತಿಗೆ ಮುಂಚೂಣಿ ಪ್ರದೇಶದ ಕಾವಲು ಪಡೆಯಿಂದ, ಪಾಕಿಸ್ತಾನಿಗಳ ಕಾಲ್ದಳವೊಂದು ಸೈಫೋನ್ ಪ್ರದೇಶದಿಂದ ಕಾಲುವೆಯನ್ನು ದಾಟಿ ಬಂದು ನಮ್ಮ ವಶದಲ್ಲಿದ್ದ ಸುಮಾರು ೩೦೦ ಗಜಗಳಷ್ಟು ಈಶಾನ್ಯ ವಿಭಾಗದ ಈಚಿನ ಕಾಲುವೆಯ ಏರಿಯನ್ನು ಆಕ್ರಮಿಸಿಕೊಂಡು ನಮ್ಮ ಕಾವಲು ಪಡೆಗಳ ಮೇಲೆ ಗುಂಡು ಹಾರಿಸತೊಡಗಿತೆಂಬ ಸುದ್ದಿ ಬಂದಿತು.

ನಮ್ಮ ಕಮಾಂಡಿಂಗ್ ಆಫೀಸರ್ ಬಿ.ಕೆ. ಸತ್ಯನ್‌ರವರು ತ್ವರೆಯಾಗಿ ಗೋಲಂದಾಜ ಫಿರಂಗಿದಳ ಮತ್ತು ಸಶಸ್ತ್ರಸೇನಾ ವಿಭಾಗದ ಅಧಿಕಾರಿಗಳೊಡನೆ ಸಮಾಲೋಚನೆ ನಡೆಸಿದರು. ನೇರವಾಗಿ ನಾವಿದ್ದ ಭಾಗದಿಂದ ಆಕ್ರಮಿತ ಪ್ರದೇಶದ ಮೇಲೆ ದಾಳಿ ಮಾಡಿದಲ್ಲಿ ಆತ್ಮಹತ್ಯೆ ಮಾಡಿಕೊಂಡಂತಾಗುತ್ತಿತ್ತು. ಏಕೆಂದರೆ ಶತ್ರುಗಳು ಕಾರಬತ್ ಬಳಿಯ ಎತ್ತರದ ಏರಿಯ ಮೇಲೆ ಮೀಡಿಯಂ ಮಷಿನ್ ಗನ್ನುಗಳನ್ನು ಅನುಕೂಲಕರವಾಗಿ ಅಳವಡಿಸಿಟ್ಟಿದ್ದರು. ಪಾಕಿಸ್ತಾನಿ ಮಷಿನ್‌ಗನ್ನುಗಳ ನೆರಳಿನಲ್ಲೇ ನಮ್ಮ ಪಡೆ ಮುಂದುವರಿಯಬೇಕಿತ್ತು.

ಪಾಕ್ ಸೈನಿಕರು ಕಾಲುವೆಯ ಏರಿಯ ಮೇಲಿನ ಗುಡಿಗಳೋಪಾದಿಯ ಕಾಂಕ್ರಿಟ್ ಪಿಲ್‌ಬಾಕ್ಸ್‌ಗಳಲ್ಲಿ ಅಪಾರವಾದ ಮದ್ದುಗುಂಡುಗಳನ್ನು ಸಂಗ್ರಹಿಸಿಟ್ಟಿದ್ದರು. ಪಿಲ್‌ಬಾಕ್ಸುಗಳ ಕಿಂಡಿಯಲ್ಲಿ ಎಲ್. ಎಂ. ಜಿ. ಮತ್ತು ಎಂ. ಎಂ. ಜಿ. ಗನ್ನುಗಳನ್ನು ಸಜ್ಜುಗೊಳಿಸಿಟ್ಟಿದ್ದರು.

ಮಧ್ಯರಾತ್ರಿಯ ಸಮಯಕ್ಕೆ ಶತ್ರು ಶಿಬಿರದ ಮೇಲೆ ದಾಳಿ ಮಾಡುವ ಯೋಜನೆ ಹಾಕಿಕೊಂಡೆವು. ಶತ್ರುಗಳು ನಮ್ಮ ಮೇಲೆ ಧಾವಿಸಿ ಬರುವ ಮೊದಲೇ ಅವರ ಮೇಲೆರಗಿ ಶತ್ರುಗಳನ್ನು ದಿಗ್ಭ್ರಮೆಗೊಳಿಸುವುದು ಅಂದಿನ ನಮ್ಮ ಯೋಜನೆಯ ಮುಖ್ಯ ಉದ್ದೇಶವಾಗಿತ್ತು.

ನಮ್ಮ ಕಾರ್ಯಾಚರಣೆಯನ್ನು ಪ್ರಾರಂಭಿಸಲು ಕೇವಲ ಮೂರು ಗಂಟೆಗಳು ಮಾತ್ರ ಉಳಿದಿದ್ದವು. ಶತ್ರುಗಳು ಆಕ್ರಮಿಸಿಕೊಂಡಿದ್ದ ಪ್ರದೇಶದ ಮೇಲೆ ಸಾಗಿಹೋಗುವಾಗ ಸಾಧ್ಯವಾದಷ್ಟು ಕಾಲುವೆಯ ಏರಿಯ ಮೇಲೆ ನಡೆಯದೆ, [illegible] ಬುಡದಲ್ಲಿ ದಟ್ಟವಾಗಿ ಬೆಳೆದಿದ್ದ ಹುಲ್ಲಿನ ಮರೆಯಲ್ಲಿ ಅಡಗಿಕೊಂಡು ಸಾಗಬೇಕೆಂದು ಸೈನಿಕರಿಗೆ ಸೂಚನೆ ಕೊಡಲಾಗಿದ್ದಿತು. ಏಕೆಂದರೆ ಏರಿಯ ಮೇಲೆ ನಡೆದಲ್ಲಿ ಕಾಲುವೆಯ ಆಚೆಯ ಬದಿಯ ಏರಿಯ ಮೇಲಿನ ಪಿಲ್‌ಬಾಕ್ಸುಗಳಲ್ಲಿರುವ ಶತ್ರು ಸೈನಿಕರ ಕಣ್ಣಿಗೆ ನಮ್ಮ ಚಲನವಲನ ಕಂಡು ಬಂದು ನಮ್ಮ ಮೇಲೆ ಗುಂಡು ಹಾರಿಸುವ ಸಂಭವವಿತ್ತು.

ಕಾಲುವೆಯ ಆಚೆಯ ಬದಿಯ ಏರಿಯ ಮೇಲೆ ಬೀಡುಬಿಟ್ಟಿದ್ದ ಮತ್ತು ಕಾರಬತ್ ಪ್ರದೇಶದಲ್ಲಿ ಸಜ್ಜಾಗಿದ್ದ ಪಾಕಿಸ್ತಾನಿ ಪಡೆಗಳ ಮೇಲೆ ಗುಂಡು-

ಹಾರಿಸಿ ಅವರ ಬಲವನ್ನು ಕುಗ್ಗಿಸುವ ಕಾರ್ಯವನ್ನು ಗೋಲಂದಾಜ ಟ್ಯಾಂಕ್ ವಿಭಾಗಕ್ಕೆ ವಹಿಸಲಾಗಿತ್ತು. ನಮ್ಮ ಟ್ಯಾಂಕುಗಳ ಗುಂಡಿನ ಹೊಡೆತದ ನೆರಳಿನಲ್ಲಿ ಸಾಗಿ, ಈಶಾನ್ಯ ವಿಭಾಗದ ಏರಿಯ ಮೇಲಿದ್ದ ಪಾಕ್ ಸೈನಿಕ ನೆಲೆಯ ಮೇಲೆ ಕ್ಷಿಪ್ರದಾಳಿ ಮಾಡಿ ಆ ಪ್ರದೇಶವನ್ನು ವಶಪಡಿಸಿಕೊಳ್ಳಬೇಕಿತ್ತು.

ಕಾಲುವೆಯ ಈಚೆಗಿನ ಏರಿಯ ಬಳಿ ಸಾಗುತ್ತಿದ್ದ ನಮ್ಮ ಪಡೆಗಳಿಗೆ ಅಪಾಯವಾಗದಂತೆ ಆಚೆ ಬದಿಯ ಏರಿಯ ಮೇಲಿದ್ದ ಶತ್ರುಗಳ ಮೇಲೆ ವೇಗೆ ಗುಂಡು ಹಾರಿಸಬೇಕೆಂಬುದೇ ನಮ್ಮ ಫಿರಂಗಿ ಪಡೆಯ ಮುಖ್ಯ ಸಮಸ್ಯೆಯಾಗಿತ್ತು. ಕಾಲುವೆಯ ಅಗಲ ಕೇವಲ ನೂರ ಇಪ್ಪತ್ತು ಅಡಿಗಳು ಮಾತ್ರವಿತ್ತು. ಕಾಲುವೆಯಲ್ಲಿ ನೀರು ರಭಸದಿಂದ ಹರಿಯುತ್ತಿತ್ತು. ಆದರೆ ನಮ್ಮ ಫಿರಂಗಿ ಪಡೆಯವರು ಬಹು ಚಾಕಚಕ್ಯತೆಯಿಂದ ತಮ್ಮ ಮುಂದಿದ್ದ ಕ್ಲಿಷ್ಟವಾದ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಿದರು. ಕದನ ಮುಗಿದ ನಂತರ ನಮಗೆ ಸೆರೆಸಿಕ್ಕ ಪಾಕಿಸ್ತಾನಿ ಸೇನಾಧಿಕಾರಿಗಳೂ ನಮ್ಮ ಫಿರಂಗಿ ಚಾಲಕರು ನಿರ್ದಿಷ್ಟವಾದ ಜಾಗಕ್ಕೆ ಗುರಿಯಿಟ್ಟು ಗುಂಡು ಹಾರಿಸುತ್ತಿದ್ದ ನೈಪುಣ್ಯವನ್ನು ತುಂಬು ಮನಸ್ಸಿನಿಂದ ಮೆಚ್ಚಿ ಮಾತನಾಡಿದರು.

ಬರಾತಬಾನಗ್ರಾಮದ ಮುಂದೆ ನಮ್ಮ ಪಡೆಯು ಗೋಲಂದಾಜ ಮತ್ತು ಮಾರ್ಟರ್ ಗುಂಡಿ ಮುಂದಿನ ಕಾರ್ಯಾಚರಣೆಗಾಗಿ ಸಿದ್ಧವಾಗಿ ನಿಂತಿತು. ಟ್ಯಾಂಕುಗಳನ್ನು ಸಾಲಾಗಿ ನಿಲ್ಲಿಸಲಾಯಿತು. ರಾತ್ರಿ ಸುಮಾರು ಒಂದು ಗಂಟೆಯ ವೇಳೆಗೆ ಟ್ಯಾಂಕು ಮತ್ತು ಗೋಲಂದಾಜ ಫಿರಂಗಿಗಳು ಶತ್ರು ನೆಲೆಯ ಮೇಲೆ ಬೆಂಕಿಯ ಸುರಿಮಳೆಯನ್ನು ಕರೆಯಲಾರಂಭಿಸಿದವು.

ಇದೇ ಸಮಯದಲ್ಲಿ ನಮ್ಮ ಸೈನ್ಯದ ತುಕಡಿಗಳು ಮುಂದಿನ ಕಾರ್ಯಾಚರಣೆಗಾಗಿ ತಮ್ಮ ನೆಲೆಯಿಂದ ಹೊರಬಿದ್ದವು. 'ಸಿ' ಕಂಪನಿ ಸ್ವಲ್ಪ ದೂರ ಸಾಗುವುದರೊಳಗಾಗಿ ಶತ್ರುಗಳ ಎಂ.ಎಂ.ಜಿ.ಯ ಕ್ರಾಸ್ ಫೈರಿಗೆ ಸಿಕ್ಕ ಕಂಪೆನಿ ಕಮಾಂಡರ್ ಮೇಜರ್ ಧರ್ಮಪಾಲ್ ಮತ್ತು ಸುಮಾರು ಇಪತ್ತು ಮಂದಿ ಸಿಪಾಯಿಗಳು ಗಾಯಗೊಂಡರು. ಧರ್ಮಪಾಲರ ಕಾಲಿಗೆ ಸಿಡಿದ ಷೆಲ್ಲಿನ ಚೂರೊಂದು ಹೊಕ್ಕು ತೀವ್ರವಾಗಿ ಗಾಯಗೊಂಡಿದ್ದರೂ ತಮ್ಮ ಕಂಪನಿಯನ್ನು ಛಲದಿಂದ ಗುರಿಯತ್ತ ಮುನ್ನಡೆಸಿ ಶತ್ರುಗಳು ವಶಪಡಿಸಿಕೊಂಡಿದ್ದ ಕೆಲವು ಪ್ರದೇಶಗಳನ್ನು ಮತ್ತೆ ವಶಪಡಿಸಿಕೊಂಡರು.

ಮೇಜರ್ ಪುನ್ಯಾಲರು ತುಕಡಿಯೊಂದನ್ನು ಶತ್ರುಗಳು ಆಕ್ರಮಿಸಿಕೊಂಡಿದ್ದ ಮುಖ್ಯ ಭಾಗವಾದ ಕಾಲುವೆಯ ಈಶಾನ್ಯ ದಿಂಡಿನೆಡೆಗೆ ಮುನ್ನಡೆಸತೊಡಗಿದರು. ಪುನ್ಯಾಲ್ ತೆಹರಿಘರವಾಲಿನ ಗುಡ್ಡಗಾಡು ಪ್ರದೇಶದಿಂದ ಬಂದವರು. ಸೈನ್ಯಕ್ಕೆ ಸೇರುವ ಮೊದಲು ಕಾಲೇಜೊಂದರಲ್ಲಿ ಉಪಾಧ್ಯಾಯರಾಗಿದ್ದರು. ಇದುವರೆಗೆ ನಡೆಸಿದ ಕಾರ್ಯಾಚರಣೆಯಲ್ಲೆಲ್ಲಾ ಈಗ ಪುನ್ಯಾಲರು ಮುನ್ನಡೆಸುತ್ತಿದ್ದ ತುಕಡಿಯ ಕಾರ್ಯಾಚರಣೆ ಬಹು ಮುಖ್ಯವಾಗಿತ್ತು. ರಾತ್ರಿ ಕಳೆದು ಬೆಳಗಾದರೆ ಕದನವಿರಾಮ ಜಾರಿಗೆ ಬಂದು ನಮ್ಮ ಸೈನಿಕ ಕಾರ್ಯಾಚರಣೆ ಸ್ಥಗಿತಗೊಳ್ಳುತ್ತಿತ್ತು. ಬೆಳಗಾಗುವುದರಲ್ಲಿ ನಮ್ಮ ಕೈಬಿಟ್ಟಿದ್ದ ಪ್ರದೇಶವನ್ನು ಶತ್ರುಗಳಿಂದ ವಾಪಸ್ ಮತ್ತೆ ವಶಪಡಿಸಿಕೊಳ್ಳಬೇಕಾಗಿತ್ತು.

ಮೇಜರ್ ಪುನ್ಯಾಲರು ಅತಿ ಧೈರ್ಯದಿಂದ ಸಂಗೀನನ್ನು ಅಳವಡಿಸಿದ್ದ ತಮ್ಮ ಸ್ಟೆನ್‌ಗನ್ನಿನೊಂದಿಗೆ ತಾವೇ ಮುಂದಾಗಿ ಶತ್ರುಗಳ ಎಂ.ಎಂ.ಜಿ.ಗಳಿಂದ ಹಾರುತ್ತಿದ್ದ ಗುಂಡುಗಳ ಸಮ್ಮುಖದಲ್ಲಿ ಏರಿಯ ಬಲಗಡೆಗೆ ಪ್ಲಾಟೂನನ್ನು ಮುನ್ನಡೆಸಿದರು. ಶತ್ರುವಿನ ನೆಲೆ ಸುಮಾರು ಇನ್ನೂರು ಗಜಗಳಷ್ಟು ದೂರವಿದ್ದಾಗ ಏರಿಯ ಮೇಲಿನ ಪಿಲ್‌ಬಾಕ್ಸೊಂದರಲ್ಲಿ ಅಡಗಿಕೊಂಡಿದ್ದ ಶತ್ರುಗಳು ನಿರಂತರವಾಗಿ ಮೀಡಿಯಂ ಮತ್ತು ಲೈಟ್ ಮಷೀನ್‌ಗನ್ನುಗಳಿಂದ ಪುನ್ಯಾಲರ ಪ್ಲಾಟೂನಿನ ಮೇಲೆ ಗುಂಡು ಹಾರಿಸಲಾರಂಭಿಸಿದರು.

ಇದರಿಂದ ಪುನ್ಯಾಲರ ಪ್ಲಾಟೂನು ಒಂದು ಹೆಜ್ಜೆಯೂ ಸಹ ಮುಂದುವರಿಯಲು ಸಾಧ್ಯವಾಗಲಿಲ್ಲ. ಆ ವಿಭಾಗದ ಕಾಲುವೆಯ ಏರಿಯನ್ನು ಶತ್ರುಗಳಿಂದ ವಿಮುಕ್ತಗೊಳಿಸುವುದು ಇಡೀ ಪ್ರದೇಶದ ಸೈನಿಕ ಕಾರ್ಯಾಚರಣೆಯ ದೃಷ್ಟಿಯಿಂದ ಮುಖ್ಯವಾದುದೆಂಬುದನ್ನು ಪುನ್ಯಾಲರು ಮನಗಂಡಿದ್ದರು. ಅವರು ಮಾಡಿವತ್ತು

ಸಿಪಾಯಿಗಳ ತಂಡದೊಂದಿಗೆ ಬಹು ಪ್ರಯಾಸದಿಂದ ಸ್ವಲ್ಪ ದೂರ ನೆಲದ ಮೇಲೆ ತೆವಳಿಕೊಂಡು ಮುಂದುವರಿದರು. ಶತ್ರುಗಳು ಹಾರಿಸುತ್ತಿದ್ದ ಗುಂಡುಗಳು ತೆವಳಿಕೊಂಡು ಹೋಗುತ್ತಿದ್ದ ಸೈನಿಕರ ತಲೆಯನ್ನು ಸೋಕಿಕೊಂಡು ಹೋಗುತ್ತಿದ್ದವು. ಇಂಥ ಸ್ಥಿತಿಯಲ್ಲಿ ಪ್ಲಾಟೂನು ಶತ್ರುವಿನ ನೆಲೆಯೆಡೆಗೆ ಮುಂದುವರಿಯುವುದು ಆತ್ಮಹತ್ಯೆಗೆ ಸಮನಾದುದೆಂದು ಪೂನ್ಯಾಲರಿಗೆ ತೋರಿರುವುದರಲ್ಲಿ ಅಚ್ಚರಿಯಿಲ್ಲ.

ಅಷ್ಟರಲ್ಲಿ ನಾರಾಯಣನ್ ಮತ್ತು ಭಾಸ್ಕರನ್ ಎಂಬಿಬ್ಬರು ಧೀರ ಸಿಪಾಯಿಗಳು ಗುಂಡಿನ ಮಳೆಯನ್ನು ಕಾರುತ್ತಿದ್ದ ಶತ್ರುಗಳ ಗನ್ನುಗಳ ಬಾಯಿ ಮುಚ್ಚಿಸುತ್ತೇವೆಂದು ಮುಂದೆ ಬಂದರು. ಅವರಿಬ್ಬರೂ ಕಾಲುವೆಯ ಏರಿಯ ಪಕ್ಕದಲ್ಲಿ ದಟ್ಟವಾಗಿ ಬೆಳೆದಿದ್ದ ಹುಲ್ಲಿನ ಮರೆಯಲ್ಲಿ ತೆವಳಿಕೊಂಡು ಶತ್ರುಗಳು ಗುಂಡು ಹಾರಿಸುತ್ತಿದ್ದ ಪಿಲ್‌ಬಾಕ್ಸಿನೆಡೆಗೆ ಕತ್ತಲೆಯಲ್ಲಿ ಸಾಗಿದರು. ಅದೇ ಅವರನ್ನು ನಾವು ನೋಡಿದ್ದು ಕೊನೆಯಾಯಿತು.

ಆ ಇಬ್ಬರು ಸಿಪಾಯಿಗಳು ನಾವಿದ್ದ ಸ್ಥಳವನ್ನು ಬಿಟ್ಟುಹೋದ ಮೇಲೆ ಸುಮಾರು ಇಪ್ಪತ್ತು ನಿಮಿಷಗಳವರೆಗೆ ನಾವೆಲ್ಲಾ ಗಾಬರಿ, ಕುತೂಹಲಗಳಿಂದ ತುದಿಗಾಲಲ್ಲಿ ನಿಂತಿದ್ದೆವು. ಅಷ್ಟರಲ್ಲಿ ಶತ್ರುಗಳ ಪಿಲ್‌ಬಾಕ್ಸಿನ ಹತ್ತಿರ ಕಿವಿ ಬಿರಿಯುವಂಥ ಗ್ರೆನೇಡಿನ ಆಸ್ಫೋಟನೆಯ ಸದ್ದು ಕೇಳಿಸಿತು. ಅದರೊಂದಿಗೆ ಗುಂಡಿನ ಸುರಿಮಳೆಯೂ ಸ್ಥಗಿತಗೊಂಡಿತು. ಅನಂತರ ನಡೆದ ಕದನದಲ್ಲಿ ಆ ಇಬ್ಬರು ಧೀರ ಸಿಪಾಯಿಗಳು ಏನಾದರೆಂಬುದು ಯಾರಿಗೂ ತಿಳಿಯದ ಸಂಗತಿ.!

ಶತ್ರುಗಳ ಪಿಲ್‌ಬಾಕ್ಸಿನಿಂದ ಬರುತ್ತಿದ್ದ ಗುಂಡಿನ ಸುರಿಮಳೆ ನಿಂತ ಕೂಡಲೇ ಮೇಜರ್ ಪೂನ್ಯಾಲರು ತಮ್ಮ ಪ್ಲಾಟೂನಿನೊಂದಿಗೆ ಮಿಂಚಿನ ವೇಗದಲ್ಲಿ ಶತ್ರುಗಳ ಮೇಲೆ ಬಿದ್ದು ಅವರು ಅಡಗಿಕೊಂಡಿದ್ದ ಪಿಲ್‌ಬಾಕ್ಸುಗಳನ್ನು ವಶಪಡಿಸಿಕೊಂಡರು. ಅನಂತರ ಹಿಂದಿದ್ದ ನಮ್ಮ ತುಕಡಿಗಳು ಒಂದರ ಮೇಲೊಂದರಂತೆ ಸೈಫೋನ್ ಬಳಿಯ ಸೇತುವೆಯನ್ನು ದಾಟಿ ಕಾಲುವೆಯ

ಶತ್ರುಗಳ ಮೇಲೆ ಬಿದ್ದು ಧ್ವಂಸ ಮಾಡಲಾರಂಭಿಸಿದವು. ನಮ್ಮ ಪಡೆಗಳ ಮಿಂಚಿನ ದಾಳಿಯನ್ನು ನಿರೀಕ್ಷಿಸದ ಶತ್ರುಗಳು ಕತ್ತಲೆಯಲ್ಲಿ ಕಂಗೆಟ್ಟು ಓಡಲಾರಂಭಿಸಿದರು. ನಮ್ಮ ಸಿಪಾಯಿಗಳಲ್ಲಿ ಹಲವರು ಶತ್ರುಗಳನ್ನು ಹಿಡಿದುಕೊಂಡು ಕಾಲುವೆಯಲ್ಲಿ ರಭಸದಿಂದ ಹರಿಯುತ್ತಿದ್ದ ನೀರಿಗೆ ತಳ್ಳುತ್ತಿದ್ದರು. ಕತ್ತಲೆಯಲ್ಲಿ ಕಣ್ಣು ಕಾಣದೆ ಕೆಲವರು ಕಾಲುವೆಗೆ ಬಿದ್ದು ನೀರಿನಲ್ಲಿ ಕೊಚ್ಚಿಕೊಂಡು ಹೋದರು. ಗ್ರೆನೇಡುಗಳ ಆಸ್ಫೋಟ, ಗುಂಡಿನ ಸುರಿಮಳೆಗಳು ಆ ರಾತ್ರಿ ದೀಪಾವಳಿಯನ್ನು ನೆನಪಿಗೆ ತರುತ್ತಿದ್ದವು.

ಶತ್ರು ಸೇನೆಯಲ್ಲಿ ಬಹು ಮಂದಿ ತಮ್ಮ ಆಯುಧಗಳನ್ನೆಸೆದು ಕಾಲುವೆಯಲ್ಲಿ ಧುಮುಕಿ ಎದುರು ದಡವನ್ನು ಸೇರುವ ಪ್ರಯತ್ನದಲ್ಲಿ ಪ್ರವಾಹದಲ್ಲಿ ಕೊಚ್ಚಿಹೋದರು. ರಾತ್ರಿ ಮೂರು ಗಂಟೆಯವರೆಗೂ ನಮ್ಮವರು ಶತ್ರುಗಳ ಮೇಲೆ ಎಸೆಯುತ್ತಿದ್ದ ಗ್ರೆನೇಡುಗಳಿಂದ ಹೊರಡುವ ಆಸ್ಫೋಟನೆ, ಗುಂಡಿನ ಸುರಿ ಮಳೆ ಮತ್ತು ರಣೋತ್ಸಾಹದಿಂದ ಕೂಗುತ್ತಿದ್ದ ಯುದ್ಧ ಘೋಷಗಳು ಆ ಪ್ರದೇಶವೆಲ್ಲೆಲ್ಲಾ ಪ್ರತಿಧ್ವನಿಸುತ್ತಿದ್ದವು.

ಶತ್ರುಗಳಲ್ಲಿ ಬಹು ಪಾಲು ಸೈನಿಕರು ನಮ್ಮವರ ಬಂದೂಕಿನ ಸನೀನಿನ ಇರಿತದಿಂದ ಗುಂಡುಗಳ ಹೊಡೆತದಿಂದಾಗಿ ಟ್ರೆಂಚುಗಳಲ್ಲಿ ಸತ್ತು ಬಿದ್ದಿದ್ದರು. ಮೂರನೆಯ ದಿನ ಕದನ ವಿರಾಮ ಜಾರಿಗೆ ಬಂದ ನಂತರ ಪಾಕಿಸ್ತಾನಿ ಸೈನ್ಯದ ಕಮಾಂಡಿಂಗ್ ಆಫೀಸರ್ ನಮ್ಮ ಪ್ರದೇಶಕ್ಕೆ ಬಂದು ಸತ್ತ ಅರವತ್ತು ಜನ ಪಾಕಿಸ್ತಾನಿ ಸೈನಿಕರ ಮೃತ ದೇಹಗಳನ್ನು ಸಂಗ್ರಹಿಸಿಕೊಂಡು ಹೋದರು. ಒಬ್ಬ ಪಾಕಿಸ್ತಾನಿ ಸೇನಾಧಿಕಾರಿ ಮತ್ತು ಇಪ್ಪತ್ತು ಮಂದಿ ಸೈನಿಕರು ನಮ್ಮ ಸೆರೆಯಾಳುಗಳಾಗಿದ್ದರು. ಈ ಕಾರ್ಯಾಚರಣೆಯಲ್ಲಿ ಮೂವತ್ತು ಮಷೀನ್‌ಗನ್ನುಗಳು, ನಾಲ್ಕು ರಾಕೆಟ್ ಲಾಂಚರ್, ಐದು ಮೀಡಿಯಂ ಮಷಿನ್‌ಗನ್ನುಗಳು, ಎರಡು ರೀಕಾಯ್ಲ್‌ಲೆಸ್ ಗನ್ನುಗಳನ್ನು ಅಳವಡಿಸಿದ್ದ ಜೀಪು ಮತ್ತು ಅಪಾರವಾದ ಮದ್ದುಗುಂಡುಗಳ ಪೆಟ್ಟಿಗೆಗಳು ನಮ್ಮ ವಶವಾದವು.

ಕ್ಕಿಂತಲೂ ಮುಂಚಿತವಾಗಿಯೇ ಮುಗಿಯಿತು. ಕದನ ವಿರಾಮ ಜಾರಿಗೆ ಬರಲು ಕೆಲವು ಗಂಟೆಗಳು ಮಾತ್ರ ಉಳಿದಿತ್ತು. ನಮ್ಮ ದಾಳಿ ಮುಗಿದಾಗ ಇನ್ನೂ ಕತ್ತಲೆಯಾಗಿತ್ತು. ಬೆಳಗಾಗುತ್ತಿದ್ದಂತೆ ಶತ್ರುಗಳು ಅಡಗಿದ್ದ ಪಿಲ್‌ಬಾಕ್ಸುಗಳನ್ನು ಶೋಧಿಸುತ್ತಾ ನಡೆದಾಗ ನಾವು ಕಂಡ ದೃಶ್ಯ ಮನ ಕಲಕುವಂತಿತ್ತು. ಪಿಲ್‌ಬಾಕ್ಸಿನ ಪಕ್ಕದಲ್ಲಿ ನಾರಾಯಣನ್ ಮತ್ತು ಭಾಸ್ಕರನ್ ಹೆಪ್ಪುಗಟ್ಟಿದ ರಕ್ತದ ಮಡುವಿನಲ್ಲಿ ಸತ್ತು ಬಿದ್ದಿದ್ದರು. ನಾರಾಯಣನ್‌ರ ಮುಖದಲ್ಲಿ ಸುಮಾರು ಆರು ಗುಂಡುಗಳು ಹಾದು ಹೋಗಿದ್ದುವು.

ಪಿಲ್‌ಬಾಕ್ಸಿನಿಂದ ಬರುತ್ತಿದ್ದ ಶತ್ರುಗಳ ಗುಂಡಿನ ದಾಳಿಯಿಂದ ನಮ್ಮ ಪ್ಲಾಟೂನಿನ ಮುನ್ನಡೆ ಸ್ಥಗಿತಗೊಂಡಾಗ ಈ ಇಬ್ಬರು ಧೀರ ಸಿಪಾಯಿಗಳು ಶತ್ರುಗಳ ಪಿಲ್‌ಬಾಕ್ಸಿನೆಡೆಗೆ ತೆವಳಿಕೊಂಡು ಹೋಗಿದ್ದರು. ಗುಂಡು ಹಾರುತ್ತಿದ್ದ ಗನ್ನುಗಳನ್ನು ಲೆಕ್ಕಿಸದೆ ಪಿಲ್‌ಬಾಕ್ಸಿನ ಕಿಂಡಿಯೊಳಕ್ಕೆ ಗ್ರೆನೇಡನ್ನು ಹಾಕಿದಾಗ ಅದರ ಭಾರಿ ಆಸ್ಫೋಟದಿಂದ ಒಳಗಿದ್ದ ಶತ್ರು ಸೈನಿಕರೆಲ್ಲಾ ಅಸುನೀಗಿದ್ದರು. ಆನಂತರ ನಡೆದ ಕದನದಲ್ಲಿ ಈ ಸಿಪಾಯಿಗಳು ಸತ್ತಿರಬೇಕು. ಈ ಧೀರ ಸೈನಿಕರಿಬ್ಬರ ಧೈರ್ಯ ಮತ್ತು ಬಲಿದಾನದಿಂದಾಗಿ ನಮ್ಮ ಪಡೆ ಶೀಘ್ರವಾಗಿ ಮುನ್ನಡೆದು ಶತ್ರುಗಳನ್ನು ನಿರ್ನಾಮ ಮಾಡಿ, ಕೈ ಬಿಟ್ಟಿದ್ದ ಪ್ರದೇಶವನ್ನು ಮತ್ತೆ ವಶಪಡಿಸಿಕೊಳ್ಳಲು ಸಾಧ್ಯವಾಯಿತು.

ಮತ್ತೊಂದು ದೃಶ್ಯವೆಂದರೆ ಎಂ. ಎಂ. ಜಿ. ಪ್ಲಾಟೂನಿನ ಸಿಪಾಯಿ ಮಲ್ಲಪ್ಪ ಕುಳಿತಿರುವ ಹಾಗೆಯೇ ಸತ್ತಿದ್ದ. ಅವನ ಹೊಟ್ಟೆಯಲ್ಲಿ ಶತ್ರುಗಳು ಎಸೆದ ಗ್ರೆನೇಡಿನ ಶೆಲ್ ಚೂರು ಹೊಕ್ಕಿತ್ತು. ಆದರೂ ಅವನ ಕೈ ಮಷೀನ್‌ಗನ್ನನ್ನು ಭದ್ರವಾಗಿ ಹಿಡಿದಿತ್ತು. ಸಿಪಾಯಿ ರಾಮಚಂದ್ರನ್ ಮಲ್ಲಪ್ಪನು ಫೈರ್ ಮಾಡುತ್ತಿದ್ದ ಗನ್ನಿಗೆ ತೋಟಾ ಬೆಲ್ಟನ್ನು ತೊಡಿಸುತ್ತಿದ್ದಂತೆಯೆ ಶತ್ರುವಿನ ಗುಂಡೊಂದು ಅವನ ತಲೆಯನ್ನು ಸೀಳಿತ್ತು. ಅವನು ಸತ್ತು ಬಿದ್ದಿದ್ದರೂ ಅವನ ಕೈಯು ತೋಟಾ ಬೆಲ್ಟನ್ನು ಭದ್ರವಾಗಿ ಹಿಡಿದಿತ್ತು.

ಕೆಲವು ತಿಂಗಳ ಹಿಂದೆ ಕಂಪೆನಿಯ ಮನರಂಜನಾ ಕಾರ್ಯಕ್ರಮವನ್ನು ಫಿರೋಜಪುರದಲ್ಲಿದ್ದಾಗ ಏರ್ಪಡಿಸಲಾಗಿದ್ದಿತು. ಆಗ ರಂಗಸ್ಥಳದಲ್ಲಿ "ವೀರ ಪಾಂಡ್ಯನ್ ಕಟ್ಟ ಬೊಮ್ಮನ್" ಎಂಬ ನಾಟಕದ ಪ್ರಯೋಗದಲ್ಲಿ ಈ ಇಬ್ಬರು ಸಿಪಾಯಿಗಳು ಒಟ್ಟಾಗಿ ಅಭಿನಯಿಸಿದ್ದರು. ಅದರಲ್ಲಿ ಒಬ್ಬನದು ಕಟ್ಟಬೊಮ್ಮನ ಪಾತ್ರ; ಮತ್ತೊಬ್ಬನದು ಅವನ ಗೆಳೆಯ ವೀರ ತಮಿಳನ ಪಾತ್ರ. ರಣಭೂಮಿಯಲ್ಲಿಯೂ ಈ ಧೀರ ಸಿಪಾಯಿಗಳು ವೀರಮರಣವನ್ನೇ ಅಪ್ಪಿದರು.

ನಮ್ಮ ಸೈನಿಕರ ಧೈರ್ಯ, ಕರ್ತವ್ಯ ನಿರ್ವಹಣೆ ಮತ್ತು ತ್ಯಾಗಗಳಿಗೆ ಇದು ಒಂದು ನಿದರ್ಶನ ಮಾತ್ರ. ಯುದ್ಧದಲ್ಲಿ ಕೆಲವರು ಸಾಯುತ್ತಾರೆ, ಮತ್ತೆ ಕೆಲವರು ಬದುಕುತ್ತಾರೆ. ಆದರೆ ಸತ್ತ ಈ ಧೀರ ಸೈನಿಕರು ಜನರ ಹೃದಯದಲ್ಲಿ ಸದಾ ಉಳಿಯುತ್ತಾರೆ. ಸತ್ತ ಈ ಸೈನಿಕರ ಶೌರ್ಯ ಸಾಹಸಗಳನ್ನು ಯುಗ ಯುಗಗಳು ಕಳೆದರೂ ಜನ ಹಾಡುತ್ತಿರುತ್ತಾರೆ. ಅವರು ಸತ್ತಿಲ್ಲ! ಜನರ ಹೃನ್ಮಂದಿರದಲ್ಲಿ ಚಿರಸ್ಥಾಯಿಯಾಗಿ ನೆಲೆಸಿ, ಶೌರ್ಯದ ಸಂಕೇತವಾಗಿರುತ್ತಾರೆ ಎಂದು ಒಬ್ಬರಿಗೊಬ್ಬರು ಹೇಳುತ್ತಿರುತ್ತಾರೆ.

ಈ ಕದನವನ್ನು ಕಣ್ಣಾರೆ ಕಂಡ ನನಗೆ ಒಂದು ಹೊಸ ಅನುಭವಕ್ಕೆ ಬಂದಿತು. ಸೈನಿಕ ನಮ್ಮವನಾಗಿರಲಿ ಅಥವಾ ಶತ್ರುವಾಗಿರಲಿ; ಅವನು ಎಷ್ಟೇ ಒಳ್ಳೆಯವನಿದ್ದರೂ ರಣೋನ್ಮತ್ತನಾದಾಗ, ಗೆಲುವಿನ ಅಮಲು ತಲೆಗೇರಿದಾಗ ಖಂಡಿತವಾಗಿಯೂ ರಾಕ್ಷಸನಾಗುತ್ತಾನೆ. ಮಾನವೀಯತೆಯ ಸಹಜಗುಣಗಳಾದ ಅನುಕಂಪ, ಕನಿಕರಗಳೆಲ್ಲ ಒಮ್ಮೆಲೆ ಮಾಯವಾಗಿ ಬಿಡುತ್ತವೆ. ಈ ಸಂದರ್ಭದಲ್ಲಿ ನನ್ನ ಮೃದುಹೃದಯದ ಸಿಪಾಯಿಗಳೆಲ್ಲರೂ ರಾಕ್ಷಸೀ ಕಳೆಯಿಂದ ವಿಜೃಂಭಿಸುತ್ತಾ ರಣೋತ್ಸಾಹದಿಂದ ಬಂದೂಕಿನ ಸನೀನಿನಿಂದ ಶತ್ರುಗಳನ್ನು ತಿವಿದು ಕೊಲ್ಲುತ್ತಿದ್ದುದನ್ನು ಕಂಡು ನಡುಗಿಹೋಗಿದ್ದೇನೆ. ಆಗ ಅವರು ಅವರಾಗಿರಲಿಲ್ಲ. ✡

# ಇದುವೇ ಜೀವ ಇದು ಜೀವನ

ಕಳೆದ ನವೆಂಬರ್ ಒಂದು. ಎಲ್ಲೆಲ್ಲೂ ರಾಜ್ಯೋತ್ಸವದ ಸಡಗರ. ನನ್ನ ಹೆಂಡತಿಯ ತಂಗಿಯನ್ನು ಚೊಚ್ಚಿಲು ಹೆರಿಗೆಗೆಂದು ಆಸ್ಪತ್ರೆಗೆ ಸೇರಿಸಲಾಗಿತ್ತು. ತಂದೆ-ತಾಯಿಗಳಿಬ್ಬರನ್ನೂ ಕಳೆದುಕೊಂಡ ಆಕೆಯ ಮದುವೆ ವರ್ಷದ ಹಿಂದಷ್ಟೇ ಆಗಿತ್ತು. ಆದರೆ ವೈದ್ಯರ ತಪ್ಪು ಲೆಕ್ಕಾಚಾರದಿಂದ ಮಗುವಿನ ಪ್ರಾಣ ತಾಯಿಯ ಗರ್ಭದಲ್ಲೇ ಹಾರಿಹೋಗಿತ್ತು. ಐದಾರು ದಿನಗಳ ಹಿಂದಾಗಿದ್ದರೆ ಶಸ್ತ್ರಚಿಕಿತ್ಸೆಯಿಂದ ಹೆರಿಗೆ ಮಾಡಿಸಿ ಮಗುವನ್ನು ಉಳಿಸಬಹುದಿತ್ತು. ಈಗ ಶಸ್ತ್ರಚಿಕಿತ್ಸೆಯಿಲ್ಲದೆ ಮಗುವನ್ನು ಹೊರದೆಗೆಯಲು ನುರಿತ ವೈದ್ಯರು ಬೆಳಗಿನಿಂದಲೂ ಹೆಣಗಾಡುತ್ತಿದ್ದರು.

ಸಂಜೆಯ ಹೊತ್ತಿಗೆ ನಾವೆಲ್ಲ ವ್ಯಗ್ರಭಾವದಿಂದ ಆಸ್ಪತ್ರೆಯ ಆವಾರದಲ್ಲಿ ಅತ್ತಿತ್ತ ಅಡ್ಡಾಡುತ್ತಿದ್ದೆವು. ಇನ್ನೊಂದು ಕೋಣೆಯಲ್ಲಿ ೩೫ ವರ್ಷದ ಒಬ್ಬ ಯುವಕ ಆಗಾಗ ರಕ್ತ ಕಾರುತ್ತ ತೊಳಲಾಡುತ್ತಿದ್ದ. ಅವನಿಗೆ ರಕ್ತ ಹಾಕುವುದು ಅತ್ಯಗತ್ಯವಾಗಿತ್ತು. ಆದರೆ ಅಂದು ಎಲ್ಲ ಸಂಸ್ಥೆಗಳಿಗೂ ರಜಾ ದಿನವಾದ್ದರಿಂದ ಅವನಿಗೆ ಬೇಕಾದ 'ಅ' ಗುಂಪಿನ ರಕ್ತದಾನಿಗಳನ್ನು ಹುಡುಕುವುದು ಕಷ್ಟವಾಗಿತ್ತು. ನನ್ನದು 'ಅ' ಗುಂಪೆಂದು ವೈದ್ಯರಿಗೆ ಗೊತ್ತಿದ್ದರೂ ನನ್ನ ಮಾನಸಿಕ ಅವಸ್ಥೆಯನ್ನು ನೋಡಿ ಅವರು ನನ್ನನ್ನು ವಿಚಾರಿಸಿರಲಿಲ್ಲ. ಕೊನೆಗೆ ಅನಿವಾರ್ಯವಾಗಿ ಅವರು ಕೇಳಿದಾಗ, ಅದರ ಅವಶ್ಯಕತೆಯನ್ನು ಮನಗಂಡ ನಾನು ತಟ್ಟನೆ ಒಪ್ಪಿದೆ.

ನನ್ನಿಂದ ಪಡೆದ ರಕ್ತವನ್ನು ಆ ಯುವಕನಿಗೆ ಹಾಕುತ್ತಿದ್ದಂತೆಯೇ ನನ್ನ ಹೆಂಡತಿಯ ತಂಗಿಯ ಗರ್ಭದಿಂದ ಸತ್ತ ಮಗುವನ್ನು ಪ್ರಯಾಸದಿಂದ ಹೊರದೆಗೆದರು. ಮಗು ತುಂಬ ಮುದ್ದಾಗಿತ್ತು. ಆದರೇನು? ಅದರ ಅಂತ್ಯಕ್ರಿಯೆಯನ್ನೂ ನಾನೇ ಮಾಡಬೇಕಾಯಿತು. ಮಸಣದಲ್ಲಿ ನಾನು ಮೊಣಕಾಲೂರಿ ಕುಳಿತು, ಅದಕ್ಕಾಗಿ ತೋಡಿದ ಪುಟ್ಟ ಕುಣಿಯಲ್ಲಿ ಆ ಮಗುವನ್ನು ಇಟ್ಟು ವಿದಾಯ ಹೇಳುತ್ತಿದ್ದಂತೆಯೇ ಸೂರ್ಯ ಅಸ್ತಮಿಸುತ್ತಿದ್ದ. ಇತ್ತ ನನ್ನಿಂದ ಪಡೆದ ರಕ್ತ ಆಸ್ಪತ್ರೆಯಲ್ಲಿ ಆ ಯುವಕನ ಪ್ರಾಣ ರಕ್ಷಿಸುತ್ತಿತ್ತು!

-ಕೆ. ಎಸ್. ಪಂಚಭಾವಿ

ಮೊನ್ನೆ ಮೊನ್ನೆ ನಾನು ನನ್ನ ಅಕ್ಕನ ಊರಾದ ಹೊಸಪೇಟೆಯ ಹತ್ತಿರವಿರುವ ಮರಿಯಮ್ಮನ ಹಳ್ಳಿಗೆ ಹೋಗಿದ್ದೆ. ನಾನು ಅಲ್ಲಿಗೆ ಬಹಳ ದಿನಗಳ ನಂತರ ಹೋದದ್ದರಿಂದ ಒಂದೆರಡು ದಿನ ಇರುವ ಪ್ರಸಂಗ ಬಂದಿತು. ಹೀಗಾಗಿ ಎರಡು ದಿನ ಬೇಸರ ಕಳೆಯುವುದೇ ದೊಡ್ಡ ಸಮಸ್ಯೆಯಾಯಿತು. ದೊಡ್ಡ ಊರು. ರಾಷ್ಟ್ರೀಯ ಹೆದ್ದಾರಿ ಅಲ್ಲಿ ಹಾಯ್ದುದ್ದರಿಂದ ಒಂದು ದಿನ ಅಲ್ಲಿ ಇಲ್ಲಿ ಅಡ್ಡಾಡಿ ಹೇಗೋ ಬೇಜಾರು ಕಳೆದೆ. ಮರುದಿನ ಮಧ್ಯಾಹ್ನದ ವರೆಗೆ ಮನೆಯಲ್ಲಿ ವಿಶ್ರಾಂತಿಗಾಗಿ ಮಲಗಿದೆ. ನಿದ್ದೆ ಬಾರದೇ ಬೇಸರವಾಗಹತ್ತಿತು. ಏನು ಮಾಡುವುದೆಂದು ಎದ್ದು ಮುಖ ತೊಳೆದುಕೊಂಡು ಚಹಾ ಕುಡಿದು ಬಜಾರದ ಕಡೆಗೆ ಹೋದೆ. ದೊಡ್ಡ ಊರು, ಇಲ್ಲಿ ವಾಚನಾಲಯವಿದ್ದರೆ ಅಲ್ಲಿ ಬೇಸರ ಕಳೆಯಬಹುದೆಂದು ಭಾವಿಸಿ ಅಲ್ಲಿ ವಾಚನಾಲಯವಿದೆಯೇ ಎಂದು ಖಚಿತಪಡಿಸಿಕೊಳ್ಳಲು ಯಾರನ್ನು ಕೇಳಬೇಕೆಂದು ಶಂಕೆಪಡುತ್ತಿದ್ದಾಗ ನನ್ನ ಮಗ್ಗುಲಿಗೆ ಮಹಾಶಯರೊಬ್ಬರು ಭರ್ಜರಿ ಸೂಟ್‌ಧಾರಿಯಾಗಿ ಕೈಯಲ್ಲಿ ಯಾವುದೋ ಎರಡು ಕನ್ನಡ ಪುಸ್ತಕಗಳನ್ನು ಹಿಡಿದುಕೊಂಡು ಬರುತ್ತಿದ್ದರು. ಬಲಗೈಯಲ್ಲಿ ಕಿವಿಗೆ ಹತ್ತಿರ ಹಿಡಿದ ರೇಡಿಯೋದಲ್ಲಿ ಇಂಗ್ಲೀಷಿನ ಕ್ರಿಕೆಟ್ ಆಟದ ವೀಕ್ಷಕ ವಿವರಣೆಯನ್ನು ಕೇಳುತ್ತಿದ್ದರು. ಇವರನ್ನು

ಕೇಳಿದರಾಯಿತೆಂದು ಭಯದಿಂದ, "ನಮ-ಸ್ಕಾರ ಸಾರ್," ಎಂದೆ. ಪ್ರತಿ ನಮಸ್ಕಾರ ಮಾಡಿದರು. "ನಿಮ್ಮದು ಇದೇ ಊರಾ?" ಎಂದೆ "ಹೌದು" ಎಂದರು. "ಸಾರ್, ಇಲ್ಲಿ ಲೈಬ್ರರಿ ಎಲ್ಲಿ?" ಎಂದೆ. ಆ ಮಹಾಶಯರು, "ಅಂದರೆ ಲ್ಯಾಟ್ರಿನ್‌ಗೆ ಹೋಗುವದಾ ?" ಎನ್ನಬೇಕೆ? "ಅಲ್ಲಾ" ಎಂದೆ. "ಹಾಗೆಂದ ರೇನು ?" ಎಂದು ಕೇಳಿದರು. ವಾಚನಾ ಲಯವೆಂದು ಹೇಳಿ, ಅದು ಎಲ್ಲಿದೆ? ಎಂದೆ. ಆಗ, ಅವರು "ಮೂತ್ರಾಲಯವೆ ? ಅಲ್ಲಿದೆ ನೋಡಿ," ಎಂದರು. "ಅಲ್ಲಾ ಸಾರ್, ಹಾಗೆಂದರೆ ಅಲ್ಲಿ ಪುಸ್ತಕದ ಸಂಗ್ರಹ ವಿರುತ್ತೆ," ಎಂದು ಲೈಬ್ರರಿ ಬಗ್ಗೆ ಹೇಳಿದೆ. ಮಹಾಶಯರು, "ನಂಗೊತ್ತಿಲ್ಲಾ; ಚಹಾ ದಂಗಡಿಯಲ್ಲಿ ಕೇಳು," ಎಂದರು. ನನಗೂ ಅಷ್ಟೇ ಬೇಕಾಗಿತ್ತು- ಅಲ್ಲಿಂದ ಪಾರಾಗು ವುದು. ಅಲ್ಲೆ ಸ್ವಲ್ಪ ಮುಂದುಗಡೆ ಇನ್ನೊಬ್ಬರು ನಿಂತಿದ್ದರು. ಕೈಯಲ್ಲಿ ಕ್ಯಾಶ್ ಬ್ಯಾಗಿನಂಥ ಚರ್ಮದ ಚೀಲವಿತ್ತು. ನಮಸ್ಕಾರ ಹೇಳಿ ಎಲ್ಲಾ ಮುಗಿದ ನಂತರ, "ಸಾರ್ ನಿಮ್ಮೂರು ಇದೇನಾ ?" ಎಂದೆ. "ಈ ಊರು ನಮ್ಮದಲ್ಲ; ಆದರೆ ನಾನು ಇಲ್ಲಿಯೇ ೧೨ ವರ್ಷ ಯಾವುದೋ ಒಂದು ಸರ ಕಾರಿ ಕೆಲಸ ಮಾಡುತ್ತೇನೆ," ಎಂದರು. ಇವ ರಿಗಾದರೂ ಗೊತ್ತಿರಬಹುದೆಂದು, "ಸಾರ್, ಇಲ್ಲಿ ಲೈಬ್ರರಿ ಇದೆಯಾ ?" ಎಂದೆ. ಆಗ ಮಹಾನುಭಾವರು, "ನಾನು ಇಷ್ಟು ದಿನ-ವಿದ್ರೂ ನಂಗ ಗೊತ್ತೇ ಇಲ್ಲ ನೋಡ್ರಿ," ಎಂದು ಅಲ್ಲೇ ಮಗ್ಗಲಿದ್ದ ತಮ್ಮ ಗೆಳೆಯ ನನ್ನು ಕೇಳಿದರೆ ಆತನಿಂದಲೂ ಇದೇ ಬಂದಿತು. ಇಲ್ಲಿ ಬಹಳ ಹೊತ್ತು ನಿಂತರೆ ಇದೇ ಸ್ಥಿತಿ ಎಂದು ನಾನು ಹಲ್ಲು ಕಿರಿದು ನಮಸ್ಕಾರ ಹೇಳಿ ಮನೆ ದಾರಿ ಹಿಡಿದೆ.

—ಮಲ್ಲಿಕಾರ್ಜುನ ವೀ. ಕುಂಬಾರ

ನಮ್ಮ ಊರಿನಲ್ಲಿ ನನ್ನ ಸ್ನೇಹಿತ ತನ್ನ ನೂತನ ಜುವಾರಿ (ಗೊಬ್ಬರ) ಅಂಗಡಿ ಯನ್ನು ತೆರೆದಿದ್ದ. ಅಂದು ಅವನಿಗೆ ಪೇಟೆ ಯಲ್ಲಿ ಸ್ವಲ್ಪ ಕೆಲಸವಿದ್ದುದರಿಂದ ಗೊಬ್ಬರ ವ್ಯಾಪಾರದ ಬಗ್ಗೆ ಏನೂ ತಿಳಿಯದಿದ್ದ ನನ್ನನ್ನು ಅಂಗಡಿಯಲ್ಲಿ ಕೂರಿಸಿ ಈಗಲೇ ಬರುವುದಾಗಿ ಹೇಳಿ ಹೋದ.

ಸ್ವಲ್ಪ ಹೊತ್ತಾದ ಮೇಲೆ ಸುಮಾರು ೨೦-೨೨ರ ಪ್ರಾಯದ ಒಬ್ಬಳು ಮುಗ್ಧ ಹಳ್ಳಿ ಯುವತಿ ಅಂಗಡಿಗೆ ಬಂದು, "ಸಾಹುಕಾರ್ರು ಇಲ್ಲವೇ?" ಎಂದು ಕೇಳಿದಳು. ನಾನು ಇಲ್ಲ ಎಂದ ಮೇಲೆ, "ಹಾಗಾದರೆ ವೀರ್ಯ ಉಂಟೆ?" ಎಂದಳು. ಆ ಹುಡುಗಿಯ ಅಂದ ಚೆಂದದ ತುಲನೆಯಲ್ಲಿದ್ದ ನನಗೆ ಈ ಮಾತಿನಿಂದ ಆಶ್ಚರ್ಯವಾಗಿ, ನನ್ನ ಕಿವಿಯನ್ನು ನಾನೇ ನಂಬದೇ ಹೋದೆ. ಮತ್ತೊಮ್ಮೆ ಸ್ವಲ್ಪ ಧೈರ್ಯ ತಂದುಕೊಂಡು ಏನು ಬೇಕು? ಎಂದು ವಿಚಾರಿಸಿದೆ. "೫ ಕೆ. ಜಿ. ವೀರ್ಯ ಕೊಡಿ," ಎಂದು ಮತ್ತೆ ಹೇಳಿದಳು. ಏನೂ ಮಾತ ನಾಡಲು ತೋಚದೆ ನಾಚಿಕೆಯಿಂದ ತತ್ತರಿ ಸಿದೆ. ನನ್ನನ್ನು ಈ ಇಕ್ಕಟ್ಟಿನ ಪರಿಸ್ಥಿತಿ ಯಲ್ಲಿ ಸಿಲುಕಿಸಿದ ನನ್ನ ಸ್ನೇಹಿತನನ್ನು ಮನಸಾರೆ ಮನಸ್ಸಿನಲ್ಲೇ ಶಪಿಸಿದೆ.

ಏನು ಉತ್ತರ ಕೊಡಬೇಕು ಎಂಬ ಯೋಚನೆಯಲ್ಲಿ ಇದ್ದಾಗ, ನನ್ನ ಅದೃಷ್ಟಕ್ಕೆ ನನ್ನ ಸ್ನೇಹಿತ ತನ್ನ ಕಾರ್ಯ ಮುಗಿಸಿ ಕೊಂಡು ಅಂಗಡಿಗೆ ದಯಮಾಡಿಸಿದ. ನಡೆದ ದ್ದನ್ನೆಲ್ಲ ಅವನ ಕಿವಿಯಲ್ಲಿ ಪಿಸುಗುಟ್ಟಿದೆ. ಇದನ್ನು ಕೇಳಿ ಜೋರಾಗಿ ನಕ್ಕು ಅಂಗಡಿಯ ಮೂಲೆಯಲ್ಲಿ ಮೂಟೆಯಲ್ಲಿಟ್ಟಿದ್ದ ಯೂರಿ-ಯಾ ಗೊಬ್ಬರವನ್ನು ೫ ಕೆ ಜಿ. ತೂಕಮಾಡಿ ಕೊಟ್ಟು, ಹಣ ಪಡೆದು ಆಕೆಯನ್ನು ಅಂಗಡಿಯಿಂದ ಬೀಳ್ಕೊಟ್ಟ.

—ಎಸ್. ರಾಮಚಂದ್ರ



ಎಂ. ರಾಜು

ನಿರೂಪಣೆ :
ಪುದಿಯತಂಡ ಸುಬ್ಬಯ್ಯನವರು

# ಬೇಟೆಯಾಡದ ಬೇಟೆಗಾರರು

ಈ ಘಟನೆ ನಡೆದದ್ದು ಸುಮಾರು ಹದಿಮೂರು ವರ್ಷಗಳ ಹಿಂದೆ. ೧೯೬೮ ರ ಅಕ್ಟೋಬರ್ ತಿಂಗಳ ಮಧ್ಯ ಭಾಗ. ಐದಾರು ತಿಂಗಳ ಕಾಲ ಕೊಡಗನ್ನು ಮುಸುಕಿ ಸತತವಾಗಿ ಮಳೆಗರೆದ ಮೋಡಗಳೆಲ್ಲ ಮಾಯವಾಗಿ ಆಕಾಶ ಶುಭ್ರವಾಗತೊಡಗಿತ್ತು. ಈ ದೀರ್ಘಾವಧಿಯ ಜಡಿ ಮಳೆಯಿಂದಾಗಿ ಬೇಸರವೆನಿಸಿ, ಎಂದು ಈ ಮಳೆಗಾಲ ಮುಗಿದೀತೋ ಎಂದು ಕಾಯುವ ಕೊಡಗರಿಗೆ ಆಕಾಶ ನಿರಭ್ರವಾಗಿ ಬಿಸಿಲು ಬೀಳತೊಡಗಿತೆಂದರೆ ಎಲ್ಲಿಲ್ಲದ ಉತ್ಸಾಹ. ಅಂಗಳದಲ್ಲಿ ಕುಣಿದು ಕುಪ್ಪಳಿಸುವ ಮಕ್ಕಳು, ತುಕ್ಕು ಹಿಡಿಯತೊಡಗಿರುವ ತಮ್ಮ ಬಂದೂಕುಗಳನ್ನು ಉಜ್ಜಿ, ತಿಕ್ಕಿ ಸ್ವಚ್ಛಗೊಳಿಸುವ ಯುವಕರು, ಅನುಭವಿ ಬೇಟೆಗಾರರು ಎಲ್ಲೆಲ್ಲೂ ಕಂಡುಬರುತ್ತಾರೆ. ಪ್ರತಿ ವರ್ಷ ಮಳೆಯ ಹಾವಳಿ ಮುಗಿಯುತ್ತಿದ್ದಂತೆಯೇ ಕೊಡಗರು ಕಾವೇರಿ ಹಬ್ಬವನ್ನಾಚರಿಸುತ್ತಾರೆ. ತಮ್ಮ ನೆಲವನ್ನು ಸಂಪದ್ಭರಿತಗೊಳಿಸುವ ಕಾವೇರಿಯ ಕುರಿತು ಕೊಡಗರಿಗೆ ಎಲ್ಲಿಲ್ಲದ ಅಭಿಮಾನ. ಅಂತೆಯೇ ಕಾವೇರಿಯನ್ನು ಆರಾಧಿಸುವ ಈ ಹಬ್ಬ ಕೂಡ ಇವರಿಗೆ ತುಂಬ ಮಹತ್ವದ್ದು. ಕಾಡಿನಿಂದಾವೃತ್ತವಾದ ಹಳ್ಳಿಗಳಲ್ಲಿ ವಾಸಿಸುವ ಕೊಡಗರಿಗೆ ಬೇಟೆಯೆಂಬುದು ಹಬ್ಬಗಳ ಬಹು ಮುಖ್ಯ, ಅವಿಭಾಜ್ಯವಾದ ಅಂಗವೆಂದೇ ಹೇಳಬಹುದು.

ಮಡಿಕೇರಿಗೆ ಹೋಗುವ ಮಾರ್ಗದಲ್ಲಿ ಮಡಿಕೇರಿಯಿಂದ ಸುಮಾರು ೨೦ ಮೈಲುಗಳ ಈಚೆಗೆ ಸಿಗುತ್ತದೆ ಮಾದಾಪುರ. ಮಾದಾಪುರದಿಂದ ಪಶ್ಚಿಮಕ್ಕೆ ಸುಮಾರು ಒಂಭತ್ತು ಮೈಲುಗಳ ದೂರದಲ್ಲಿ ಹುಟ್ಟುವಳ್ಳಿ ಎಂಬ ಹಳ್ಳಿಯುಂಟು. ಈ ಹಳ್ಳಿ ಕೂಡ ಬಹುತೇಕ ಕೊಡಗಿನ ಹಳ್ಳಿಗಳ ಹಾಗೆ ಕಾಡಿನಿಂದಾವೃತ್ತವಾದ ಒಂದು ಗ್ರಾಮ. ಈ ಗ್ರಾಮದಿಂದ ಎರಡು ಮೂರು ಮೈಲುಗಳ ದೂರದಲ್ಲಿ ಕೋಟೆಬೆಟ್ಟ ಎಂದು ಕರೆಯಲ್ಪಡುವ ಒಂದು ಬೆಟ್ಟವುಂಟು. ಈ ಬೆಟ್ಟದ ಮೇಲೆ ಬೂಟ್ಲಪ್ಪ ಎಂಬ ದೇವರ ಒಂದು ಸಾಧಾರಣವಾದ ಗುಡಿಯೂ ಇದೆ. ಆದರೂ ಈ ಬೆಟ್ಟದಲ್ಲಿ ಜನಸಂಚಾರ ತುಂಬ ಕಡಿಮೆ. ದಟ್ಟವಾಗಿ ಬೆಳೆದ ಮರಗಳು, ಪೊದೆಗಳು, ಅಸಂಖ್ಯ ಗುಹೆ ಮತ್ತು ಬಿಲಗಳಿರುವ ಈ ಬೆಟ್ಟದಲ್ಲಿ ಕಾಡು ಕುರಿ ಮುಳ್ಳುಹಂದಿ, ಕಡವೆ ಮುಂತಾದ ಪ್ರಾಣಿಗಳು ಹೇರಳವಾಗಿರುತ್ತಿದ್ದವು. ಆಗಾಗ್ಗೆ ಹುಲಿಗಳೂ ಕಂಡುಬರುತ್ತಿದ್ದವು. ಅಪರೂಪಕ್ಕೊಮ್ಮೆ ಕರಡಿಗಳೂ ಕಾಣಸಿಗುತ್ತಿದ್ದವು. ಊರಲ್ಲಿಯ ಜಾನುವಾರುಗಳು ತೋಟ-ಗದ್ದೆಗಳಿಗೆ ನುಗ್ಗಿ ಹಾಳು ಮಾಡುತ್ತವೆ, ಮತ್ತು ಮನೆಯಲ್ಲೇ ಕಟ್ಟಿ ಹಾಕಿ ಅವುಗಳಿಗೆ ಸಾಕಷ್ಟು ಮೇವನ್ನು ಒದಗಿಸಲಾಗುವುದಿಲ್ಲ ಎಂಬ ಕಾರಣದಿಂದ ಅವನ್ನು ಬೆಟ್ಟಕ್ಕೆ ಅಟ್ಟಿಬಿಡುವುದು ಅಲ್ಲಿಯ ರೂಢಿ. ಹೀಗೆ ಅಟ್ಟ



ಲ್ಪಟ್ಟ ಜಾನುವಾರುಗಳ ವಾರಸುದಾರರು ಆಗೊಮ್ಮೆ ಈಗೊಮ್ಮೆ ಬೆಟ್ಟದಲ್ಲೆಲ್ಲ ಸುತ್ತಾಡಿ ತಮ್ಮ ಹಸು, ಎತ್ತುಗಳು ಎಂಥ ಸ್ಥಿತಿಯಲ್ಲಿವೆ ಎಂಬುದನ್ನು ತಿಳಿದು ಬರುವುದೂ ರೂಢಿ. ಇಂಥ ಸಮಯದಲ್ಲಿ ಬೆಟ್ಟದಲ್ಲಿ ಸೇರಿಕೊಂಡ ಹುಲಿಗೆ ಈ ಜಾನುವಾರುಗಳು ಬಹು ಸುಲಭವಾಗಿ ಆಹಾರವಾಗುತ್ತಿದ್ದುದೂ ಉಂಟು.

ಈ ಬಾರಿಯ ಕಾವೇರಿಯ ಹಬ್ಬದಂದೂ ಎಲ್ಲೆಲ್ಲೂ ಸಂಭ್ರಮದ ವಾತಾವರಣ. ಪುದಿಯ ತಂಡ ಮಾದಪ್ಪ ಮತ್ತು ಪೋಟಹಳ್ಳಿಯ ಪೂವಯ್ಯ ಇಬ್ಬರೂ ಮುಟ್ಲುಹಳ್ಳಿಯ ಸಮರ್ಥ ಬೇಟೆಗಾರರು. ಏನಾದರೂ ಬೇಟೆ ಸಿಕ್ಕಿದರೆ ನೋಡುವಾ ಎಂದುಕೊಂಡು ಇಬ್ಬರೂ ತಮ್ಮ ಜೋಡುನಳಿಗೆಯ ಬಂದೂಕನ್ನು ತೆಗೆದುಕೊಂಡು ತಮ್ಮ ಬೇಟೆ ನಾಯಿಗಳನ್ನೂ ಕರೆದುಕೊಂಡು ಹೊರಟರು. ತಾವೇ ಬೇಟೆಯಾಡಿದ ಯಾವುದಾದರೂ ಕಾಡು ಪ್ರಾಣಿಯ ಮಾಂಸದ ಅಡುಗೆಯ ಹೊರತಾದ ಹಬ್ಬ ಅವರಿಗೆ ಹಬ್ಬವೇ ಅಲ್ಲ. [illegible] ಇಬ್ಬರೂ ಗುರಿಯಿಡು [illegible]ಗಳೇ. ಬೆಟ್ಟವನ್ನು ತಲುಪಿದವರೆ ಗುಹೆ, ಬಿಲಗಳ ಎದುರು ಪ್ರಾಣಿಗಳ ಓಡಾಟದಿಂದ ಉಂಟಾದ ಜಾಡನ್ನು ಹಿಡಿದು. [illegible] ಬೇಟೆ ನಾಯಿಗಳನ್ನು ಅಟ್ಟಿ ಬೇಟೆಯನ್ನ[illegible] ಗಿದರು. ಇವರ ಹುಡುಕಾಟದಲ್ಲಿ [illegible]



ಕಳೆದುಹೋಗಿತ್ತು. ಇಬ್ಬರಿಗೂ ಸಾಕಷ್ಟು ದಣಿವೂ ಆಗಿತ್ತು. ನಾಯಿಗಳು ಇದ್ದಕ್ಕಿದ್ದಂತೆಯೇ ಯಾವುದೋ ವಾಸನೆಯನ್ನು ಗ್ರಹಿಸಿ ಬಹಳ ಜೋರಾಗಿ ಬೊಗಳತೊಡಗಿದವು. ಇವರ ಎದುರಿಗಿದ್ದ ಪೊದೆಯ ಹಿಂದಿದ್ದ ಗುಹೆಯಲ್ಲಿ ಭಾರೀ ಗಾತ್ರದ ಹುಲಿಯೊಂದು ಸೇರಿಕೊಂಡದ್ದು ಇವರಿಗೆ ತಿಳಿದಿರಲಿಲ್ಲ. ನಾಯಿಯ ಬೊಗಳುವಿಕೆ ಇವರ ಮಾತು, ಓಡಾಟದ ಸರಬರ ಸದ್ದಿಗೆ ಗುಹೆಯಿಂದ ಹೊರಬಂದ ಹುಲಿ ಪಲಾಯನ ಮಾಡಲು ಯತ್ನಿಸಿತು. ವಿಪರೀತ ಮಳೆಯಿಂದಾಗಿ ಗುಹೆಯ ದ್ವಾರದ ಕೆಸರುಮಣ್ಣು ಮೈಗೆಲ್ಲ ಮೆತ್ತಿಕೊಂಡಿದ್ದ ಹುಲಿಯನ್ನು ಫಕ್ಕನೆ ಗುರುತಿಸಲು ಇವರಿಗೆ ಸಾಧ್ಯವಾಗಲಿಲ್ಲ. ಬೆಳಗಿನಿಂದ ಯಾವುದೇ ಬೇಟೆ ಸಿಗದೇ ನಿರಾಶರಾಗಿದ್ದ ಇಬ್ಬರಿಗೂ ಭಾರೀ ಗಾತ್ರದ ಹಂದಿಯೋ ಮತ್ತೇನೋ ದೊರೆಯಿತೆಂಬ ಖುಷಿ. ಕ್ಷಣಾರ್ಧದಲ್ಲಿ ಇಬ್ಬರೂ ಕಾರ್ಯಪ್ರವೃತ್ತರಾದರು. ಪುದಿಯತಂಡ ಮಾದಪ್ಪನ ಬಂದೂಕಿನಿಂದ ಹಾರಿದ ಗುಂಡಿನ ಶಬ್ದದೊಂದಿಗೇ ಹುಲಿಯ ಭಯಂಕರ ಗರ್ಜನೆಯೂ ಬೆಟ್ಟದಲ್ಲಿ ಪ್ರತಿಧ್ವನಿಸಿತು. ಸಾಮಾನ್ಯ ಮನುಷ್ಯನ ರಕ್ತವನ್ನು ಹೆಪ್ಪುಗಟ್ಟಿಸಿ, ಹೃದಯ ಬಡಿತವನ್ನು ನಿಲ್ಲಿಸುವಂಥ ಆ ಗರ್ಜನೆಗೆ ಕೊಡಗಿನ ಆ ಕಲಿಗಳು ಸ್ವಲ್ಪ ಅಳುಕಿದರೂ ಎದೆಗುಂದದೆ ಮತ್ತೆ ನಾಲ್ಕಾರು ಗುಂಡುಗಳನ್ನು ಹಾರಿಸಿದರು. ಅದ

ರಲ್ಲಿದ್ದ ನಾಲ್ಕೈದು ತೋಟಾಗಳೂ ಅಷ್ಟು ಹೊತ್ತಿಗೆ ಖರ್ಚಾಗಿಹೋಗಿದ್ದವು. ಹುಲಿಯೂ ತಪ್ಪಿಸಿಕೊಂಡಿತ್ತು. ಏಟು ತಿಂದ ಹುಲಿ ನಮ್ಮ ಕಲ್ಪನೆಗೂ ಮೀರಿದಷ್ಟು ಅಪಾಯಕಾರಿ. ಅದನ್ನು ಹಾಗೆಯೇ ಬಿಡುವ ಹಾಗಿಲ್ಲ. ಪುದಿಯ ತಂಡ ಮಾದಪ್ಪ ಪೂವಯ್ಯನಿಗೆ ಹೇಳಿದರು. ಪೂವಯ್ಯ, 'ಇದು ಭಾರೀ ಹುಲಿ, ಇದನ್ನು ಹಾಗೇ ಬಿಡುವ ಹಾಗಿಲ್ಲ. ಬೇಗ ಊರಿಗೆ ಹೋಗಿ ವಿಷಯ ತಿಳಿಸು. ಎಷ್ಟು ಜನ ಸಿಕ್ಕರೂ ಕರೆದು ಕೊಂಡು ಬಾ. ನಾನು ಇಲ್ಲಿಯೇ ಇದ್ದು ಹುಲಿಯ ಚಲನವಲನವನ್ನು ಗಮನಿಸುತ್ತಿರುತ್ತೇನೆ,' ಎಂದ.

ಮೋಟಹಳ್ಳಿ ಪೂವಯ್ಯ ಬಂದು ಊರಲ್ಲಿ ವಿಷಯ ತಿಳಿಸುತ್ತಿದ್ದಂತೆಯೇ ಹಬ್ಬದ ಸಂಭ್ರಮದಲ್ಲಿದ್ದ ಎಲ್ಲರಿಗೂ ಎಲ್ಲಿಲ್ಲದ ಉತ್ಸಾಹ. 'ಹುಲಿಯನ್ನು ಒಂದೇ ಏಟಿಗೆ ಮುಗಿಸುತ್ತೇನೆ, ಚಿಂದಿ ಚಿಂದಿ ಮಾಡುತ್ತೇನೆ, ಹುಲಿ ಮದುಮಗನಾಗುತ್ತೇನೆ.' ಎಂದೆಲ್ಲ ಬಡಾಯಿ ಕೊಚ್ಚುವವರೆ. ಸುಮಾರು ಐವತ್ತರ ಹರೆಯದ ಪುದಿಯ ತಂಡ ಪೂವಯ್ಯ ಬೊಟ್ಟ್ಯಪಾಂಡ ರಾಮಪ್ಪ ಮುಂತಾದ ಪ್ರಮುಖ ಬೇಟೆಗಾರರಿಂದ ಸುಮಾರು ಇಪ್ಪತ್ತು ಜನರ ಒಂದು ತಂಡ ತಮ್ಮ ಬಂದೂಕು ಹಾಗೂ ನಾಯಿಗಳೊಡನೆ ಹೊರಟಿತು. ಪುದಿಯತಂಡ ಪೂವಯ್ಯ ಹಲವಾರು ಹುಲಿ ಬೇಟೆ ಆಡಿ, ಆ ಸುತ್ತುಮುತ್ತಲ ಪ್ರದೇಶದಲ್ಲಿ ಖ್ಯಾತ ಗುರಿಕಾರ ಹಾಗೂ ಅನುಭವಿ ಬೇಟೆಗಾರರೆಂದು ಹೆಸರು ಮಾಡಿದ್ದವರು; ಅವರು ಹುಲಿ ಮದುವೆ* ಕೂಡ ಆಗಿದ್ದರು.

ಬೊಟ್ಟ್ಯಪಾಂಡ ರಾಮಪ್ಪ ಕೂಡ ಸಮರ್ಥ ಬೇಟೆಗಾರನೇ. ಈ ತಂಡ ಕಾಡನ್ನು ತಲುಪುವಾಗ ಆಗಲೇ ಸಂಜೆ ಐದು ಗಂಟೆಯ ಸಮಯ. ಅನುಭವವಿಲ್ಲದ ಯುವಕರನ್ನೂ ವಯೋವೃದ್ಧರಾದವರನ್ನೂ ಬಿಲ್ಲು ನಿಲ್ಲಿಸಿ (ಯಾವುದೇ ಪ್ರಾಣಿ ಇರಬಹುದೆಂದು ಶಂಕಿಸಿದ ಜಾಗ ಪ್ರದೇಶದಲ್ಲಿ ಅದು ತಪ್ಪಿಸಿಕೊಳ್ಳದಂತೆ ಸುತ್ತಲೂ ಕಾವಲು ನಿಲ್ಲುವುದಕ್ಕೆ ಬಿಲ್ಲು ನಿಲ್ಲುವುದೆಂದು ಹೆಸರು.) ಬೊಟ್ಟ್ಯಪಾಂಡ ರಾಮಪ್ಪ ಮತ್ತು ಪುದಿಯತಂಡ ರಾಮಪ್ಪ ಬಹು ಎಚ್ಚರಿಕೆಯಿಂದ ತಮ್ಮ ನಾಯಿಗಳನ್ನು ಮುಂದಿಟ್ಟು ಕೊಂಡು, ಬಂದೂಕುಗಳನ್ನು ಸಜ್ಜುಗೊಳಿಸಿ ಕೊಂಡು ಹುಲಿಯನ್ನರಸುತ್ತ ಮುನ್ನಡೆದರು. ಗಾಯಗೊಂಡ ಹುಲಿ ಎಷ್ಟು ಅಪಾಯಕರ ಎಂಬುದೂ ಅದು ಯಾವ ಕ್ಷಣದಲ್ಲೂ ತಮ್ಮ ಮೇಲೆ ಆಕ್ರಮಣ ನಡೆಸಬಹುದೆಂಬುದೂ ಅವರಿಗೆ ಸ್ಪಷ್ಟವಾಗಿಯೇ ತಿಳಿದಿತ್ತು. ಅಕ್ಕಪಕ್ಕದಲ್ಲೆಲ್ಲಾದರೂ ಹುಲಿ ಕಂಡೀತೆ ಎಂದು ನೋಡಲು ಪುದಿಯ ತಂಡ ಪೂವಯ್ಯ ಮರವೊಂದನ್ನು ಹತ್ತಿದರು. ಇದ್ದಕ್ಕಿದ್ದಂತೆಯೇ ಬೆಚ್ಚಿ ಬೀಳಿಸುವ ಹುಲಿಯ ಗರ್ಜನೆಯನ್ನು ತಮ್ಮ ಜೊತೆಗಾರರ ಚೀತ್ಕಾರವನ್ನೂ ಕೇಳಿ ಹಿಂದಿರುಗಿದ ಪುದಿಯ ತಂಡ ಪೂವಯ್ಯನವರು ಕಂಡ ದೃಶ್ಯ ಹೃದಯ ವಿದ್ರಾವಕವಾದುದಾಗಿತ್ತು. ಮುಂದೆ ಚಾಚಿಕೊಂಡಂತಿದ್ದ ಬಂಡೆಯ ಅಡಿಯಲ್ಲಿದ್ದ ಹುಲಿ ಮಿಂಚಿನ ವೇಗದಲ್ಲಿ ಹೊರಬಿದ್ದು ಪುದಿಯತಂಡ ಮಾದಪ್ಪ ಮತ್ತು ಬೊಟ್ಟ್ಯಪಾಂಡ ರಾಮಪ್ಪನವರ ಮೇಲೆ ಆಕ್ರಮಣ ನಡೆಸಿತ್ತು. ಪುದಿಯ ತಂಡ ಮಾದಪ್ಪನವರ ಹೊಟ್ಟೆಯ ಭಾಗಕ್ಕೆ ಬಾಯಿ ಹಾಕಿ ಅವರನ್ನು ಬೀಸಿ ಒಗೆದ ರಭಸಕ್ಕೆ ಅವರು ಪಕ್ಕದಲ್ಲಿದ್ದ ಮರದ ಕೊಂಬೆಯೊಂದಕ್ಕೆ ಸಿಕ್ಕುಹಾಕಿಕೊಂಡು ನೇತಾಡತೊಡಗಿದರು. ಬೊಟ್ಟ್ಯಪಾಂಡ ರಾಮಪ್ಪನವರ ತಲೆಗೆ ಮುಂಗಾಲಿನಿಂದ ಬಾರಿಸಿದ ರಭಸಕ್ಕೆ ಅವರು ಆಯತಪ್ಪಿ ಪಕ್ಕದಲ್ಲಿದ್ದ ಸುಮಾರು ೫೦ ಅಡಿ ಆಳದ ಕಮರಿಗೆ ಉರುಳಿದರು. ಇಬ್ಬರನ್ನೂ ಗಾಸಿಗೊಳಿಸಿದ ಹುಲಿ ಮತ್ತೆ ಮರೆಯಾಗಿತ್ತು... ಹುಲಿಯ

* ಹುಲಿ ಬೇಟೆಯಲ್ಲಿ ತಮ್ಮ ಶೌರ್ಯ ಸಾಹಸಗಳನ್ನು ಮೆರೆದ ಬೇಟೆಗಾರರಿಗೆ ಅವರು ಕೊಂದ ಹುಲಿಯೊಡನೆ ಮದುವೆ ಮಾಡುವುದು ಕೊಡಗಿನಲ್ಲಿರುವ ಒಂದು ಪದ್ಧತಿ. ಈ ಮದುವೆಗೂ ಇತರ ಮದುವೆಯಂತೆ ತಮ್ಮ ಬಂಧು ಬಾಂಧವರನ್ನೆಲ್ಲ ಆಹ್ವಾನಿಸಿ, ಒಳ್ಳೆಯ ಊಟ ಉಪಚಾರ ಮಾಡುವುದೂ ಸಾಂಪ್ರದಾಯಿಕ ರೀತಿಯಲ್ಲಿ ಸಿಂಗರಿಸಿದ ಬೇಟೆಗಾರರನ್ನು ಅವನು ಕೊಂದ ಹುಲಿಯ ಜೊತೆ ಕೂರಿಸಿ ಉಡುಗೊರೆಗಳನ್ನು ಕೊಡುವುದೂ ರೂಢಿ.

ಗರ್ಜನೆ ಮತ್ತು ತಮ್ಮ ಸಂಗಡಿಗರ ಚೀತ್ಕಾರ ಕೇಳಿದ ಬಿಲ್ಲು ನಿಂತಿದ್ದವರಿಗೆಲ್ಲ ನಡುಕ ಪ್ರಾರಂಭವಾಗಿತ್ತು. ಮರದ ಮೇಲಿದ್ದ ಪೂವಯ್ಯ ತಾವಿದ್ದ ಮರದಲ್ಲಿಯೇ ಬಂದೂಕನ್ನು ಬಿಟ್ಟು ಒಂದೆರಡು ಮರಗಳಿಗೆ ದಾಟಿ ಪಕ್ಕದಲ್ಲಿದ್ದ ಬಂಡೆಯ ಮೇಲೆ ನೀರು ಸುತ್ತ ನಿಂತಿದ್ದವರನ್ನು ಎಚ್ಚರಿಸಲು ಕೂಗು ಹಾಕಿದರು. ಪುದಿಯತಂಡ ಪೂವಯ್ಯನವರು ನಿಂತಿದ್ದ ಅದೇ ಬಂಡೆಯ ಕೆಳಗೆ ಅಡಗಿದ್ದ ಹುಲಿ ಮತ್ತೊಮ್ಮೆ ಪೂವಯ್ಯನವರ ಮೇಲೆ ಹಾರಿತು. ಅವರ ಮುಂಗಾಲನ್ನು ಜೋರಾಗಿ ಕಚ್ಚಿದ್ದರಿಂದ ಅವರ ಮುಂಗಾಲು ತುಂಡಾಗಿತ್ತು. ಇನ್ನೊಮ್ಮೆ ಅವರ ತೊಡೆಗೆ ಬಾಯಿ ಹಾಕಿದ ಹುಲಿ ತೊಡೆಯ ಮಾಂಸವೆಲ್ಲ ಛಿದ್ರ ಛಿದ್ರವಾಗುವಂತೆ ಎಳೆದು ಹಾಕಿತು. ಇಷ್ಟಾದರೂ ಹೇಗೋ ಸಾವರಿಸಿಕೊಂಡ ಪೂವಯ್ಯನವರು ಕೈಗೆ ಸಿಕ್ಕಿದ ಮರದ ಕೊಂಬೆಯೊಂದನ್ನು ಹಿಡಿದುಕೊಂಡು, ಕಷ್ಟಪಟ್ಟು ಮರ ಹತ್ತಿ ತಾವು ಬಂದೂಕನ್ನು ಬಿಟ್ಟು ಬಂದಿದ್ದ ಮರಕ್ಕೆ ಬರುವುದರೊಳಗೆ ಹುಲಿ ಮತ್ತೆ ಮಾಯವಾಗಿತ್ತು. ಅತೀವ ಯಾತನೆ ಮತ್ತು ರಕ್ತಸ್ರಾವವಾಗುತ್ತಿದ್ದರೂ ಪುದಿಯತಂಡ ಪೂವಯ್ಯನವರು ಎದೆಗುಂದದೆ ತಮ್ಮ ಜೊತೆಗಾರರಿಗೆ ನಡೆದಿರುವುದನ್ನೆಲ್ಲ ಹೇಳಿ ಎಚ್ಚರಿಸಿದರು. ಅಷ್ಟು ಹೊತ್ತಿಗೆ ಸಂಜೆ ಸುಮಾರು ಏಳು ಗಂಟೆಯ ಸಮಯ. ಕತ್ತಲು ಕಾಡನ್ನಾವರಿಸತೊಡಗಿತ್ತು. ಪುದಿಯತಂಡ ಮಾದಪ್ಪ ಮತ್ತು ಬೊಟ್ಟುಮಾಂಡ ರಾಮಪ್ಪ ಇಬ್ಬರೂ ಪ್ರಜ್ಞೆ ತಪ್ಪಿದ್ದರು. ಪುದಿಯತಂಡ ಪೂವಯ್ಯನವರು ವಿಪರೀತ ಬಳಲುತ್ತಿದ್ದರೂ ಪ್ರಜ್ಞೆ ತಪ್ಪಿರಲಿಲ್ಲ. ತೊಡೆಯ ಮಾಂಸವೆಲ್ಲ ಕಿತ್ತು ಬಂದು ಮುಂಗಾಲು ಜೋತಾಡುತ್ತಿದ್ದರೂ ಅವರು ಮರದ ಮೇಲಿಂದ ತಮ್ಮ ಸಂಗಡಿಗರಿಗೆ ಎಚ್ಚರಿಕೆ ನೀಡುತ್ತಲೇ ಇದ್ದರು. ಈ ಮೂವರೂ ಹುಲಿಯ ಆಕ್ರಮಣದಿಂದ ಅರೆಜೀವವಾದುದನ್ನು ಕಂಡು ಬಹಳಷ್ಟು ಜನರಿಗೆ ಹೃದಯ ಬಾಯಿಗೆ ಬಂದಂತಾಗಿತ್ತು. ಊರಿಂದ ಹೊರಟಾಗ ಅವರಲ್ಲಿದ್ದ ಉತ್ಸಾಹವೆಲ್ಲ ಯಾವಾಗಲೋ ಹಾರಿ ಹೋಗಿತ್ತು.

ಅಷ್ಟು ಹೊತ್ತಿಗೆ ಸಂಪೂರ್ಣ ಕತ್ತಲು ಕವಿದಿದ್ದರಿಂದ ಎಲ್ಲರೂ ಬದಿಯಲ್ಲಿಯೇ ಇದ್ದ ಸುಮ ತಟ್ಟಾದ ಸುರಕ್ಷಿತ ಸ್ಥಳದಲ್ಲಿ ಕಲೆತರು. ಅನುಭವಿಗಳೂ ಸಮರ್ಥರೂ ಆದ ಬೇಟೆಗಾರರೇ ಅರೆಜೀವವಾದದ್ದರಿಂದ ಅವರೆಲ್ಲ ದಿಙ್ಮೂಢರಾಗಿದ್ದರು. ಕತ್ತಲಲ್ಲಿ ನಡೆದಾಡಿ ಗಾಯಾಳುಗಳಿಗೆ ಸಹಾಯ ನೀಡುವಷ್ಟು ಧೈರ್ಯ ಯಾರಲ್ಲೂ ಉಳಿದಿರಲಿಲ್ಲ. ಕೊನೆಗೆ ಕೆಲವರು ಅಲ್ಲೇ ಇರುಳನ್ನು ಕಳೆಯುವುದು, ಮಿಕ್ಕವರು ಊರಿಗೆ ಹಿಂದಿರುಗುವುದು, ಬೆಳಕು ಹರಿದ ನಂತರ ಗಾಯಾಳುಗಳು ಬದುಕಿದ್ದರೆ




"ಮುಂಡೇದೆ... ನಿನೊಬ್ಬನಾದ್ರೂ ಯಾಕೆ ಬಂದ್ಯೋ? ಇಲ್ಲದಿದ್ರೆ ನಾನು ಮನೆಗೆ ಹೋಗಿ ಹಾಯಾಗಿ ನಿದ್ರೆ ಮಾಡ್ತಿದ್ದೆ...!"

ಅವರಿಗೆ ಚಿಕಿತ್ಸೆ ಕೊಡಿಸುವುದು, ಇಲ್ಲದಿದ್ದರೆ ಮುಂದಿನ ವ್ಯವಸ್ಥೆ ಮಾಡುವುದೆಂದು ತೀರ್ಮಾನಿಸಿದರು. ಗುಂಡಿನಲ್ಲಿದ್ದ ಮತ್ತೊಬ್ಬ ಮಾದಪ್ಪ– ಪುದಿಯತಂಡ ಪೂವಯ್ಯನವರ ತಮ್ಮ ಅದಮ್ಯ ಶಕ್ತಿ ಚೈತನ್ಯದ, ಅಸೀಮ ಧೈರ್ಯ ಸಾಹಸದ ಈ ಯುವಕನಿಗೆ ತನ್ನ ಅಣ್ಣ ಮತ್ತು ಇತರೇ ಇಬ್ಬರು ಬಂಧುಗಳನ್ನು ರಾತ್ರಿಯಲ್ಲಿ ಅದೇ ಸ್ಥಿತಿಯಲ್ಲಿ ಬಿಟ್ಟು ಬಿಡುವುದು ಸರಿ ಎನಿಸಲಿಲ್ಲ. ಹುಲಿ ತನ್ನನ್ನೂ ಕೊಂದರೂ ಸರಿಯೆ, ಅವರನ್ನೆಲ್ಲ ಹೊತ್ತು ತರುತ್ತೇನೆ ಎಂದು ತನ್ನ ಸಂಗಡಿಗರ ಪ್ರತಿರೋಧವನ್ನು ಲೆಕ್ಕಿಸದೇ ಆ ಯುವಕ ತನ್ನ ಬಂದೂಕಿನೊಂದಿಗೆ ಹೊರಟ. ದಟ್ಟವಾಗಿ ಕತ್ತಲು ಕವಿದಿದ್ದರೂ ಆ ಸ್ಥಳದ ಪರಿಚಯವಿದ್ದ ಅವನು ತಡಕಾಡುತ್ತ ಇಳುಕಲಿನಲ್ಲಿಳಿದು ತಲೆಗೆ ಏಟು ತಿಂದು ಅರ್ಧ ಪ್ರಜ್ಞಾವಸ್ಥೆಯಲ್ಲಿದ್ದ ಬೊಟ್ಟುಪಾಂಡ ರಾಮಪ್ಪನನ್ನು ಬೆನ್ನ ಮೇಲೆ ಹೊತ್ತುಕೊಂಡು ತನ್ನ ಬಂದೂಕನ್ನೇ ಊರೆಗೋಲಿನಂತೆ ಊರಿಕೊಂಡು ಸುರಕ್ಷಿತ ಸ್ಥಳ ತಲುಪಿದ. ರಾಮಪ್ಪನನ್ನು ತನ್ನ ಸಂಗಡಿಗರ ವಶಕ್ಕೆ ಒಪ್ಪಿಸಿ ಮತ್ತೊಮ್ಮೆ ಕಾಡಿನೊಳಕ್ಕೆ ಹೋಗಿ ಮರದಲ್ಲಿ ನೇತಾಡುತ್ತಿದ್ದ ಪುದಿಯತಂಡ ಮಾದಪ್ಪನನ್ನೂ ಇಳಿಸಿಕೊಂಡು ಬಂದ. ಮೂರನೆಯ ಬಾರಿ ಪೂವಯ್ಯನವರನ್ನೂ ಹಾಗೇ ಇಳಿಸಿಕೊಂಡು ಬಂದ. ಈಗ ತಂಡದವರೆಲ್ಲ ತಾವು ಮೊದಲು ತೆಗೆದುಕೊಂಡ ತೀರ್ಮಾನವನ್ನು ಬದಲಿಸಿದರು. ಕೆಲವರು ಗಾಯಾಳುಗಳನ್ನು ಕಾಯುತ್ತ ಅಲ್ಲೇ ಉಳಿಯುವುದು, ಇನ್ನು ಕೆಲವರು ಮಾದಾಪುರಕ್ಕೆ ನಡೆದು ಹೋಗಿ ಯಾವುದಾದರೂ ಎಸ್ಟೇಟಿನವರಿಗೆ ವಿಷಯ ತಿಳಿಸಿ ಜೀಪು ತೆಗೆದುಕೊಂಡು ಬರುವುದು ಎಂದು ತೀರ್ಮಾನಿಸಿದರು. ಅಂತೆಯೇ ಕೆಲವರು ಮಾದಾಪುರಕ್ಕೆ ನಡೆದುಕೊಂಡು ಹೋದರು. ಜೀಪು ಬರುವಾಗ ಆಗಲೇ ಬೆಳಕು ಹರಿಯತೊಡಗಿತ್ತು. ಜೀಪು ಬರುವುದಕ್ಕೆ ಮೊದಲೇ ಹೊಟ್ಟೆಯ ಭಾಗದಲ್ಲಿ ಆಳವಾದ ಗಾಯವಾಗಿದ್ದ ಪುದಿಯತಂಡ ಮಾದಪ್ಪ ಕೊನೆಯುಸಿರೆಳೆದಿದ್ದರು. ಪುದಿಯತಂಡ ಪೂವಯ್ಯನವರನ್ನೂ ಬೊಟ್ಟುಪಾಂಡ ರಾಮಪ್ಪನನ್ನೂ ಜೀಪಿನಲ್ಲಿ ಮಡಿಕೇರಿಗೆ ಕರೆದೊಯ್ದರು. ನಡು ಹಾದಿಯಲ್ಲೇ ಪುದಿಯತಂಡ ಪೂವಯ್ಯನವರೂ ಕೊನೆಯುಸಿರೆಳೆದರು. ಬೊಟ್ಟುಪಾಂಡ ರಾಮಪ್ಪನನ್ನು ಮಡಿಕೇರಿಯ ಆಸ್ಪತ್ರೆಗೆ ಸೇರಿಸಲಾಯಿತು.

ತಮ್ಮ ಊರಿನ ಇಬ್ಬರು ಸಮರ್ಥ ಬೇಟೆಗಾರರನ್ನು ಕಳೆದುಕೊಂಡಿದ್ದ ಮುಟ್ಲುಹಳ್ಳಿಯ ಜನ ತತ್ಕಾಲಕ್ಕೆ ಹುಲಿಯನ್ನು ಮರೆತು ಮೃತರ ಬಂಧುಗಳನ್ನು ಸಂತೈಸುವುದರಲ್ಲಿಯೂ ಮತ್ತು ಮೃತರ ಅಂತ್ಯ ಸಂಸ್ಕಾರದ ಸಿದ್ಧತೆಯಲ್ಲೂ ತೊಡಗಿದರು. ಈ ಸುದ್ದಿ ಬಹಳ ಬೇಗ ಅಕ್ಕ ಪಕ್ಕದ ಹಳ್ಳಿಗಳಿಗೂ ಹಬ್ಬಿತು. ಗಾಯಗೊಂಡ ಹುಲಿಯನ್ನು ಹಾಗೆಯೇ ಬಿಡುವುದು ಅಪಾಯಕರವಾದ್ದರಿಂದ ಅದನ್ನು ಮುಗಿಸಿಬಿಡಬೇಕೆಂದು ಪಕ್ಕದ ಹಳ್ಳಿಯ ಕೆಲವರು ಬೇಟೆಗಾರರು ಅದನ್ನರಸುತ್ತ ಹೊರಟರು. ಹಿಂದಿನ ದಿನ ಮುಟ್ಲುಟಹಳ್ಳಿ ಪೂವಯ್ಯ ಮತ್ತು ಪುದಿಯತಂಡ ಮಾದಪ್ಪನವರ ಗುಂಡೇಟಿಗೆ ಜರ್ಜರಿತವಾಗಿದ್ದ ಹುಲಿಯೂ ರಾತ್ರಿಯೇ ಸತ್ತುಹೋಗಿತ್ತು. ಒಂದೆರಡು ಗುಂಡು ಹಾರಿಸಿ ಹುಲಿ ಸತ್ತಿರುವುದನ್ನು ಖಚಿತಪಡಿಸಿಕೊಂಡ ಅವರು ಮುಟ್ಲುಹಳ್ಳಿಗೆ ವಿಷಯ ತಿಳಿಸಿದರು. ಮರುದಿನ ಸಕಲ ಮರ್ಯಾದೆಯೊಂದಿಗೆ ಪುದಿಯತಂಡ ಪೂವಯ್ಯ ಹಾಗೂ ಪುದಿಯತಂಡ ಮಾದಪ್ಪನವರ ಮೃತ ದೇಹಗಳಿಗೆ ಅಂತ್ಯ ಸಂಸ್ಕಾರ ಮಾಡಲಾಯಿತು. ಆ ಭಾರೀ ಗಾತ್ರದ ಹೆಬ್ಬುಲಿಯನ್ನೂ ಟ್ರ್ಯಾಕ್ಟರಿದಲ್ಲಿನ ಮಡಿಕೇರಿ ಪೇಟೆಯ ಬೀದಿಯಲ್ಲಿ ಮೆರವಣಿಗೆ ಮಾಡಲಾಯಿತು.

ಆಸ್ಪತ್ರೆಯಲ್ಲಿ ಬೊಟ್ಟುಪಾಂಡ ರಾಮಪ್ಪ ನಿಧಾನವಾಗಿ ದೈಹಿಕವಾಗಿ ಚೇತರಿಸಿಕೊಂಡರೂ ಮಾನಸಿಕವಾಗಿ ಆಘಾತಗೊಂಡಿದ್ದ ಅವರು ಕೆಲವು ದಿನಗಳಲ್ಲೇ ಮೃತರಾದರು. ಹೀಗೆ ಸಾಯುವ ಮುನ್ನ ಮೂವರನ್ನು ಬಲಿ ತೆಗೆದುಕೊಂಡ ಆ ಹುಲಿಯ ಕಥೆಯನ್ನು ಮುಟ್ಲುಹಳ್ಳಿಯ ಜನ ಪ್ರತಿ ಕಾವೇರಿ ಹಬ್ಬದಂದೂ ಸ್ಮರಿಸಿಕೊಳ್ಳುತ್ತಾರೆ. ★



ಶಶಿಧರ ವಿಶ್ವಾಮಿತ್ರ

# ಶಬ್ದ ಮಾಡದವೆಂದು. . . . . . . .

ಕಾಲಿಗೆ ಇರುವೆ ಕಚ್ಚಿತೆಂದು ಮುಖ ಸಿಂಗೆ ಗಟ್ಟಿಸಿ ಇಸ್ಸೆಂದು ಸಶಬ್ದ ಉಸಿರೆಳೆದುಕೊಂಡು ಕಚ್ಚಿದ ಇರುವೆ ಹೊಸಗಿಹಾಕಲು ಮುಂದಾದ ಕೈಗೆ ಅನುವಾಗಲು ಮೈ ಬಾಗಿದಾಗ ದೃಷ್ಟಿಯೂ ತಂತಾನೆ ಅತ್ತ ಬಿದ್ದಿತ್ತು. ಒಂದಲ್ಲ ಹಲವಾರು ಇರುವೆಗಳು ಕಾಲ ಮೇಲೆ ಹತ್ತಿವೆ. ಇನ್ನೂ ಅಷ್ಟು ಹತ್ತಲೆಳಸಿವೆ. ಕಾಲಿನ ಎರಡೂ ಪಕ್ಕ ನೂರಾರು ಇರುವೆಗಳು ಅಷ್ಟಸಾಲುಗಳ ಗುಂಪು ಕಟ್ಟಿ ಹರದಾಡುತ್ತಿವೆ. ಇಸ್ಸ್ ಇನ್ನೊಂದು ಇರುವೆ ಕಚ್ಚಿಬಿಟ್ಟಿತು. ಹಾ, ಮತ್ತೊಂದು. ಇನ್ನೂ ಒಂದು ಕಚ್ಚುವಷ್ಟರಲ್ಲಿ ಪಕ್ಕ ನೆಗೆದು ಕಚ್ಚಿಸೋತು ಮಾಡಿದ ಇರುವೆಗಳಿಗೆ ಹಿಡಿ ಶಾಪ ಹಾಕುತ್ತ ಕಾಲನ್ನು ನೆಲಕ್ಕೆ ಜಾಡಿಸಿದ್ದೆ. ಶಾಪ ಹಾಕುವುದು ಆಗಿ ಮುಗಿದು ತಪ್ಪು ನನ್ನದು ಇರುವೆಗಳದಲ್ಲ– ಕಣ್ಣಿರುವ ನಾನು ಇರುವೆಗಳಿಂದ ದೂರ ನಿಲ್ಲಬೇಕಾಗಿತ್ತು ಎಂಬ ಮಾತುಗಳು ಮನಸ್ಸಿಗೆ ಬರತೊಡಗಿದ ಹೊತ್ತು ದೃಷ್ಟಿ ಇರುವೆಗಳತ್ತ ಮತ್ತೊಮ್ಮೆ ನಾಟಿತು.

ತುಳಿದದ್ದು ಇರುವೆಗಳ ಗೂಡನ್ನಲ್ಲ, ಇರುವೆ ಸಾಲನ್ನು. ತಾವು ಹಿಡಿದ ಹಾದಿಗೆ ಅಡ್ಡ ಬಂದ ನನ್ನ ಕಾಲನ್ನು ಈ ಜಾಗದಲ್ಲಿ ಕಾಲಿಟ್ಟು ನಮಗೇಕೆ ತೊಂದರೆ ಕೊಡುತ್ತೀಯೋ? ಕಾಲನ್ನ ತೆಗೆ ದೂರ



ನಮ್ಮ ಭಾಷೆಯಲ್ಲಿ ಹೇಳಲಾಗದ ಅಥವಾ ಕಾಲನ್ನು ತಾವೇ ಎತ್ತಿ ಇಡಲಾಗದ ಇರುವೆಗಳು ಪಾಪ ಇನ್ನೇನು ಮಾಡಿಯಾವು? ಹಠಾತ್ ಬಂದೊದಗಿದ ಅಡಚಣೆ ದಿಗ್ಭ್ರಮೆ ತರಿಸಿರಬೇಕು; ತೊಂದರೆಯನ್ನು ತರಿಸಿರಬೇಕು. ಅಡಚಣೆಯ ನಿವಾರಣೆಯ ಯತ್ನದಲ್ಲಿ ಇದ್ದಾಗಲು ಸುತ್ತಿ ಮುತ್ತಿ ಹುಡುಕಿ ಮೇಲೇರಿ ಕೆಳಗಿಳಿದು ತಂತಮ್ಮ ಮುಖಮೋರೆ ಮುಟ್ಟಿ ಕಾಲೆತ್ತಿ ಕತ್ತೆತ್ತಿ ಬಾಯಾರಿ ತಾವು ಶ್ರಮ ಚರ್ಚಿಸಿರಬೇಕು. ದಾರಿ ದಾ ಚರ್ಚೆಯೋ ಸಂಚೋ ಅಥವಾ ಇನ್ನೊಂದು ಸ್ವರದ ಹಿಸುಕಿದ್ದೋ ಅಥವಾ

ಜೊತೆಸೆ ಹೇಗೂ ಸಂವೇದನೆ ಮೊದಲಾಗದೆ ಕಚ್ಚಿ ನೋಡೋಣ ಎಂಬ ನಿರ್ಧಾರಕ್ಕೆ ಬಂದು ಹಲವು ಬಾಯಿ ಇಕ್ಕಳವನ್ನು ನಾಟಿಸಿರಬೇಕು. ಒಡನೆ ಅಡಚಣೆ ನಿವಾರಣೆಯಾಗಿಬಿಟ್ಟಿತ್ತು.

ನನ್ನ ದೃಷ್ಟಿಗೆ ಈಗಾಗಲೇ ಎರಡೂ ಕಡೆಯಿಂದಲೂ ಮುರಿದ ಸಾಲನ್ನು ಒಂದುಗೂಡಿಸುವ ಯತ್ನದಲ್ಲಿ ಇರುವೆಗಳು ತೊಡಗಿರುವದು ಗೋಚರವಾಗಿತ್ತು. ಎಷ್ಟು ಬೇಗ ಕೆಲಸದಿಂದ ಕೆಲಸಕ್ಕೆ ಈ ಇರುವೆಗಳು ತಮ್ಮ ಸಿದ್ಧಿ ಬುದ್ಧಿಗಳನ್ನು ಹೊರಳಿಸಿಬಿಡುತ್ತವೆ. ಅಡಚಣೆ ನನ್ನ ಕಾಲಾಗಿರದೆ ಮುತ್ತಿ ಮೂಸಿ ಕಚ್ಚಿದರೂ ಸಗ್ಗದ ಮರದ ಕೊರಡಾಗಿದ್ದರೂ ಇರುವೆಗಳು ಮೂರು ಸಾಸಿವೆ ಕಾಳು ಗಾತ್ರದ ಇರುವೆಗಳು ಮೇಲೇರಿ ನಡೆದೊ ಬಳಸಿಯೋ ತಮ್ಮ ಹಾದಿಯನ್ನು ಹೇಗೋ ಕಂಡುಕೊಂಡು ಮುನ್ನಡೆದೇ ಎಲ ಎಷ್ಟು ಚುರುಕು ಇವು ಎಂದೆನ್ನುವ ಬೆರಗು. ಎಲ್ಲಿಂದೋ ಸತ್ತ ಜಿರಳೆಯನ್ನು ಹೇಗೊ ಕಂಡುಕೊಂಡು ಎಂಥೆಂಥದೋ ಅಡಚಣೆಗಳನ್ನು ದಾಟಿಸಿಕೊಂಡು ಗೂಡಿಗೆ ಹೊತ್ತೊಯ್ಯುವದನ್ನು ದಿನ ದಿನ ಕಂಡಿರುವ ಅನುಭವದಲ್ಲಿ ಅಡಗಿ ತೆಪ್ಪನಾಗಿ ಬಿಟ್ಟಿತು. ಅಡಚಣೆ ನಿವಾರಣೆ ಯತ್ನದಲ್ಲಿ ತಮ್ಮದೇ ಇರುವೆಗಳು ಸತ್ತಿವೆ ಎಂಬ ದುಃಖ ಮಿಕ್ಕವಕ್ಕಾಗಲಿ ಹಿಂದೆ ಮುಂದೆ ಕಾಣುವ ಅಡಚಣೆ ನಿವಾರಣೆ ಯತ್ನದಲ್ಲಿ ಮುನ್ನುಗ್ಗಿದರೆ ಜೀವದಂಡ ತೆರಬೇಕಾದೀತೆಂಬ ಭಯ ನನ್ನ ಕಾಲೇರಿದ ಇರುವೆಗಳಿಗಾಗಿ ಇದ್ದಿತೆಂದು ನನಗನ್ನಿಸಲಿಲ್ಲ. ಗ್ರಾಮದ ಉಳಿಕೆಗೆ ಕುಟುಂಬ ತ್ಯಾಗ ಎಂಬ ನಾಣ್ನುಡಿ ನಡಾವಳಿ ಇದೊಂದು ಘಟನೆಯೇ ಅಲ್ಲವೆಂಬಂತೆ ಇರುವೆಗಳ ಜೀವನದ ಸಾಧಾರಣ ಸ್ತರದಲ್ಲಿ ನಿಶ್ಯಬ್ದವಾಗಿ ಜರುಗಿ ಬಿಟ್ಟಿತು.

ಮೇಸುಖಂಡದ ಬಳಿ ಬುಳುಬುಳುವಾಗಿ ಫಟ್ಟನೆ ಕೈಹಾಕಿ ಇರುವೆಯೊಂದನ್ನು ಹಿಡಿದೆ. ಕಾಲು ಕೊಡವಿದ್ದರೂ ಬಿಟ್ಟು ಬಿಡದೆ ಕೈತಪ್ಪಿಸಿ ಮೇಲೇರಿದ್ದ ಈ ಇರುವೆಯನ್ನು ಹೊಸಗಿ ಎಸೆದು ಬಿಡುವ ಕೋಪ ಬಂದಿತ್ತಾದರೂ ತಾಳ್ಮೆ ತಂದುಕೊಂಡು ಅಂಗೈ ಮೇಲೆ ಬಿಟ್ಟುಕೊಂಡೆ. ಬೆರಳ ಚಿಟುಕೆಯಿಂದ ಮುಕ್ತವಾದ ಇರುವೆ ಮೈ ಮುರಿಯಿತು. ಅತ್ತಿತ್ತ ಕತ್ತಾಡಿಸಿತು. ಮುಖಮೀಸೆಯಾಡಿಸಿತು. ದಿಸನ್ನೇ ಕಂಡುಕೊಳ್ಳುವಂತೆ ಅತ್ತಿತ್ತ ತಾರಾಡಿತು. ಎಂಥದೋ ನಿರ್ಧಾರ ಮಾಡುವಂತೆ ಅಲ್ಲಲ್ಲಿ ನಿಂತು ಸುತ್ತೆಲ್ಲ ತಲೆ ಎತ್ತಿ ಕೊಂಕಿಸಿ ನೋಡಿತು. ನಂತರ ಚಟುವಟಿಕೆಯಿಂದ ಸರಸರ ಓಡಿಯಾಡಲು ತೊಡಗಿತು. ನಿಂತ ಕಡೆ ತಾನೇನೂ ಕಾಣೆ. ಆದ್ದರಿಂದ ಏನು ಕಾಣಲಿಕ್ಕಾದರೂ ತಾನು ಓಡಿಯಾಡಲೆಬೇಕು. ಓಡಿಯಾಡುತ್ತ ಕಡೆಗೊಮ್ಮೆ ತನ್ನವರನ್ನು ಕೂಡಿಕೊಳ್ಳುವ ಹಾದಿ ಕಂಡುಕೊಂಡೇನು. ತನ್ನವರನ್ನು ಕಂಡುಕೊಳ್ಳದೆ ತಾನು ಬಾಳುವಂತಿಲ್ಲ; ಅದ್ದರಿಂದಲಾದರೂ ತಾನು ಓಡಿಯಾಡಲೇಬೇಕು ಎಂದೆಲ್ಲ ತಿಳುವಳಿಕೆಗೆ ಪಕ್ವವಾದ ಇರುವೆಯಲ್ಲಿ ನಿರಾಶೆಗೆ ಜಡತೆಗೆ ಅವಕಾಶವೇ ಇರಲಿಲ್ಲ.

ನಾನಂತೂ ಮೂರು ಸಾಸಿವೆ ಕಾಳುಗಳಷ್ಟು ಉದ್ದದ ಇರುವೆಯ ಚಟುವಟಿಕೆಯನ್ನು ಬೆರಗಿನಿಂದ ಗಮನಿಸತೊಡಗಿದ್ದೆ. ಎಲ್ಲಿ ತನ್ನವರ ಉಳಿಕೆಗೆ ಜೀವದಂಡವನ್ನು ಲೆಕ್ಕಿಸದೆ ಮುಂದಾಗುವ ಈ ಇರುವೆ ಸುಮ್ಮಸುಮ್ಮನೆ ಸಾಯಲಿಚ್ಛಿಸದು. ಗುಂಪಿಲ್ಲದೆ ತಾನು ಒಂಟಿಯಾಗಿ ಬಾಳಲಾರೆ, ತನ್ನ ಸಿದ್ಧಿ ಬುದ್ಧಿ ಉಳಿವು ಅಳಿವು ಇರುವದೆಲ್ಲ ಗುಂಪಿನಲ್ಲಿ, ಗುಂಪಿಗಾಗಿ ಎಂಬ ಅರಿವನ್ನು ಪರಮಾದ್ಯ ಕರ್ತವ್ಯವಾಗಿ ಭಾವಿಸಿ ಗುಂಪು ಸೇರುವುದೆಂಬ ಕಾರ್ಯದಲ್ಲಿ ಚಲನೆಗೆ ತೊಡಗಿಕೊಂಡಿದೆಯಲ್ಲ ಈ ಇರುವೆ. ತನ್ನುಳಿಕೆಯನ್ನು ಸಾಧಿಸಲು ಪ್ರಯತ್ನಶೀಲ ದುಡು ಹುಡುಕಿ ತನ್ನವರನ್ನು ಕಡೆಗೂ ಕಾಣದೆ ತನ್ನ ನಷ್ಟ ಉದ್ದೇಶಗಳನ್ನು ಕಂಡುಕೊಳ್ಳದಲೆ ನಡೆನಡೆದು ಬಳಲಿ ಸತ್ತೀತು. ಅವರೆ ಸೋಲೊಪ್ಪದು. ತಂತಾನೆ ಸಾಯಲೊಪ್ಪದು; ಇದು ಯೋಚಿಸುತ್ತನೆ ಓಡಿ ಅಂಗೈಯ ಮೇಲೆ ಹರದಾಡುತ್ತಿದ್ದ ಇರುವೆಯನ್ನು ಹಾರಿಸಿಬಿಟ್ಟೆ. ಎಲ್ಲೇ ಹೇಗೇ ಬೀಳಲಿ ಈ ಇರುವೆ ಸತ್ತಿರಲಿಕ್ಕಿಲ್ಲ ಎಂದು ನನಗೆ ಗೊತ್ತು. ಇರುವೆಯು ಈ ಒಂದೇ ಸಾಮ್ಯದಿಂದ ಮನುಷ್ಯನೇನಾದರೂ ಟಿಕಮತ್ತು ತೋರಿಸಹೋದರೆ ಬೀಸ ಘಾತಕ್ಕೆ ಮೊದಲೇ ಎದೆಯೊಡೆದು ಸತ್ತಾನು. ಮನುಷ್ಯನ ನಾಮದಲ್ಲಿ ನಾನು ಹೂಡಿದ

ಗಂಟೆಗೆ ಸಾವಿರಾರು ಮೈಲಿಗಳ ರಭಸ. ಆ ಬೀಳು ಸಾವಿರಾರು ಅಡಿಗಳದ್ದು.

ಬೆಳಗಿನಿಂದ ಚುರುಕುಗೊಂಡ ನನ್ನ ದೃಷ್ಟಿ ಇರುವೆಗಳ ಸಾಲನ್ನೇ ಅನುಸರಿಸಿತು. ಸಾಲು ಸಾಲಿನ ಇರುವೆಗಳು ಹುಲ್ಲಿನ ಸಂದಿಯಾಗಿ ನಡೆದು ಕಲ್ಲೊಂದಿ ಇಳಿದು ತುಂಬೆ ಗಿಡದ ಬುಡದಡಿ ನಡೆದು ಆ. ತಮ್ಮ ಸಾವಿರ ಸಂಖ್ಯೆಯಲ್ಲಿ ನೆರೆದಿವೆ. ಹೇಗೆ ಕಂಡುಕೊಂಡವೋ, ಇನ್ನೂ ಜೀವವಿದ್ದ ಎರೆ ಹುಳುವಿನ ಮೈ ಪೂರ ಲಗ್ಗೆ ಮುತ್ತಿ ಕಚ್ಚಿ ಹಿಡಿದಿವೆ. ಎರೆ ಹುಳು ಮೈ ಒದರಿದಂತೆ ಮೇಲಿಂದ ಮೇಲೆ ಸಾಲುಗಟ್ಟಿ ಬರುತ್ತಿದ್ದ ಇರುವೆಗಳು ತಾವು ಬಾಯಿ ಹಾಕುವ ಹೊಸ ಕಾರಣಗಳಿಗಾಗಿ ಆಗಲೇ ಹೊತ್ತು ಹಿಡಿದ ಇರುವೆಗಳ ಮೇಲೆ ಕೆಳಗೆಲ್ಲ ತಲೆ ತೂರಿಸಿ ಹೊಲೆಗೆ ಬಾಯಿ ಹಾಕುವಂತೆ ಬಾಯಿಕೊಂಡಿಗಳನ್ನು ಊರತೊಡಗಿವೆ. ಎರೆ ಹುಳುವಿನ ಪ್ರಾಣಾಂತ ವಿಕಾರ ತೀವ್ರವಾದಂತೆ ಇರುವೆಗಳ ಮರ್ದನಶಕ್ತಿಯೂ ಹೆಚ್ಚಿದೆ. ರೈತನ ಬಂಧು ಎಂದು ಕರಯಿಸಿಕೊಳ್ಳುವ, ಹೋರು ಶಕ್ತಿಯಿಲ್ಲ ಕೈಕಾಲು ಬಾಯಿ ಇಲ್ಲದ ಎರೆ ಹುಳುವಿನ ಮುಲುಗುವಿಕೆ, ಗುಕ್ಕಿನ ಪಟ್ಟು ಬಿಡದ ಇರುವೆಗಳ ಆಕ್ರಮಣಶೀಲತೆ ಇವೆರಡೂ ನನ್ನಲ್ಲಿ ಕನಿಕರ—ನಿಸ್ಸಹಾಯ ಎಳೆ ಹುಳುವಿನ ಬಗೆಗೆ; ಕ್ರೌರ್ಯ— ಜೀವಂತ ಹುಳುವನ್ನೇ ಮುತ್ತಿ ಕಿತ್ತು ತಿನ್ನುತ್ತಿದ್ದ ಇರುವೆಗಳ ಬಗೆಗೆ ಹುಟ್ಟಿಸಿತು. ಆದರೆ ನಾನೇನೂ ಮಾಡುವಂತಿರಲಿಲ್ಲ. ಈಗಾಗಲೇ ಮೇಲ್ಪದರ ಬಹಳಷ್ಟು ತಿಂದು ಹೋದ ಎರೆ ಹುಳು ಇನ್ನೇನು ಸತ್ತು ನಿಷ್ಪಂದವಾಗಿಬಿಡುತ್ತದೆ. ಮುತ್ತಿದ ಸಾವಿರ ಸಾವಿರ ಇರುವೆಗಳ ಬಾಯಿ ಇಕ್ಕಳದಿಂದ ಇದನ್ನು ಹೇಗೂ ಬಿಡಿಸಲಾರೆ, ಇದನ್ನುಂಡ ಇರುವೆಗಳು ತಮ್ಮ ಗೂಡಿಗೆ ಮರಳುತ್ತವೆ, ಅಥವ ಇನ್ನೆಲ್ಲೋ ಬೇಟೆ ಹೊಂಚಲು ತೆರಳುತ್ತವೆ. ಕ್ರೌರ್ಯ, ಕನಿಕರ, ಇವಿಡ್ಡೂ ನಾನೇನೂ ಮಾಡಲಾರೆ. ಏನೂ ಮಾಡಲಾರೆ. ನಿಸ್ಸಹಾಯಕತೆ ನನ್ನನ್ನು ಬಳಸಿ ನೋಟದಲ್ಲಿ ದೃಷ್ಟಿ ಸ್ವಾರಸ್ಯವನ್ನು ಕಳೆದುಕೊಂಡಿತು.

ಬೆಳಿಗ್ಗೆ ತಾನೆ ಕಾಂಪೌಂಡಿನ ಮೂಲೆಯಲ್ಲಿ ಜೇಡ ನೆಯ್ದ ಬಲೆಯೊಂದನ್ನು ನೋಡಿದ್ದೆ. ಸಣ್ಣ ಸಣ್ಣ ಹಿಮಮಣಿಗಳನ್ನು ಪೋಣಿಸಿಕೊಂಡಿದ್ದ ಸುಂದರವಾದ ತಂತುಜಾಲಗಳ ಬಲೆ, ಮಧ್ಯ ಮೈಸುತ್ತ ಕಾಲುಗಳನ್ನು ಬಿಟ್ಟುಕೊಂಡು ಕಾದಿದ್ದ ಜೇಡ. ತನ್ನಂತೆ ಹಾರಿ ಬರುವ ಸೊಳ್ಳೆಯನ್ನೋ ನೊಣವನ್ನೋ ದುಂಬಿಯನ್ನೋ, ತುತ್ತಾಗಬಲ್ಲ ಎಂಥ ಕೀಟ ಬಲೆಗೆ ಬಿತ್ತೆಂದರೆ ಕೂಡಲೇ ಜೇಡ ಹ್ಯಾಗೆ ಧಾವಿಸಿ ಜಾಲದ ಸೆರೆ ಸಿಕ್ಕ ವಿಲಗುಡುವ ಕೀಟದ ಸುತ್ತ ಮುತ್ತ ಮುತ್ತಿ ಅಷ್ಟದಿಗ್ಬಂಧನ ಮಾಡಿ ಕುಟುಕಿ ಜೀವ ರಸಗಳನ್ನು ಸಾವಧಾನವಾಗಿ ಹೀರಿ ಹೀರಿ ಬರಿದೆ ಕಳೇ ಬರವನ್ನು ಗಾಳಿಯಲ್ಲಿ ತೂರಿ ಬಿಡುತ್ತದೆ!

ಜೀವ ಜೀವವನ್ನು ಆಧರಿಸದೆ ಇನ್ನು ಹೇಗೂ ಬಾಳುವಂತಿಲ್ಲ. ಹಾರಿ ಬರುವ ಕೀಟವನ್ನು ತನ್ನ ಸಿದ್ಧಿ ಬುದ್ಧಿ ಚೋದಿಸುವ ಜಾಣ್ಮೆಗಳಿಂದ



ಹಿಡಿದು ಹೀರದಲೆ ಕುಳಿತರೆ ಜೇಡ ಸಾಯುತ್ತದೆ. ಜೇಡಗಳು ಕೀಟಗಳನ್ನು ಹಿಡಿಯದೆ ಹೋದರೆ ಕೀಟಗಳು ವರ್ಧಿಸಿ ಗಾಳಿ ಪೂರ ತುಂಬಿಬಿಟ್ಟಾವು. ಈ ಕೀಟಗಳೂ ಇನ್ನೊಂದನ್ನೋ ತಿಂದೇ ಬದುಕನ್ನು ಸಾಧಿಸುತ್ತವೆ ತಾನೆ? ಮಣ್ಣಡಿ ಹೂತಿರುವ ಎರೆ ಹುಳುವನ್ನು ಹಿಡಿಯಲು ಇರುವೆಗಳು ಎಷ್ಟು ಸಾಧನೆ ಮಾಡಿರಬೇಡ! ಮಣ್ಣಿನ ರಕ್ಷೆಯೊಳಗಿಂದ ಈ ಎರೆ ಹುಳುವಾದರೂ ಹೊರಗೇಕೆ ಬಂತು? ಎಲ್ಲಿ ಬೇಕಾದರೂ ಹಾರಿ ಹೋಗಬಲ್ಲ ಚೈತನ್ಯವಿದ್ದೂ ಕೀಟಗಳು ಗೋಡೆ ಮೂಲೆಯ ಜೇಡನ ಬಲೆಯೊಳಗೆ ನುಸುಳಿಹೋಗುತ್ತದೆಯೋಕೆ? ಜೀವಗಳ ಹುಟ್ಟು ಉಳಿವು ಅಳಿವುಗಳ ಪರಿ ವಿಚಿತ್ರವಾದದ್ದು. ಇಲ್ಲಿ ಕ್ರೌರ್ಯ ಕನಿಕರಗಳನ್ನು ಕಾಣ ಹೋಗುವುದು ಮೂಕುತನ.

ಆದರೂ ಹೊಟ್ಟೆ ಕಲೆಸಿತು. ಎರೆ ಹುಳು ಮಣ್ಣ ಕೀಟ, ಪಾಪ, ಮಣ್ಣನ್ನು ಒಗೆದು ಅಗೆದು ಮುಕ್ಕಿ ಹೊಟ್ಟೆಯಲ್ಲಿ ಹೊರಳಿಸಿ ಮೆತ್ತಗೆ ಮಾಡಿ ಉಂಡ ತರಗೆಲೆಗಳ ಕರುಳ ರಸದೊಡನೆ ಬೆರೆಸಿ ಸಸ್ಯಗಳೂ ಕೀಟಗಳೂ ಇಷ್ಟಪಡುವ ಪೈರು ಗೊಬ್ಬರ ಮಾಡಿ ಹೊರ ಹಾಕುವ ಅತ್ಯಂತ ಶ್ಲಾಘ್ಯ ಕಾರ್ಯವನ್ನು ನಿತ್ಯವೂ ಮಾಡುತ್ತ, ಕಡೆಗೆ ಕ್ರಿಮಿಗೋ, ಕೀಟಕ್ಕೋ ತಾನೇ ತುತ್ತಾಗಿ ಆಖೈರು ಮಣ್ಣೇ ಆಗಿ ಹೋಗುವಂಥ ಹುಳ. ಇಂಥ ಹುಳುವನ್ನೂ ಮಣ್ಣ ಪಾಟುಗಳಲ್ಲಿ ಸಹಸ್ರ ಸಂಖ್ಯೆಯ ಲೆಕ್ಕದಲ್ಲಿ ಬೆಳೆಯಿಸಿ ಮಾರಾಟಕ್ಕಿಟ್ಟಿತ್ತು! ಹೋಟೆಲಿನ ವೈಭವದಲ್ಲಿ ತಿನ್ನುವ ನಾಲಿಗೆ ರುಚಿಯನ್ನು ಮನುಷ್ಯ ಕಂಡುಕೊಂಡಿದ್ದಾನಂತೆ. ಎರೆ ಸಿರಿಗೆ ಗಟ್ಟಿತ್ತು. ಕ್ಷಣದ ಹಿಂದೆ ಇರುವೆಗಳನ್ನು ಕಾಲಡಿ ತುಳಿದು ನಿಂತಿದ್ದೆನಲ್ಲ, ಆಗ, ಆ ಮೇಲೆ ಇರುವೆಗಳು ಕಚ್ಚಿದಾಗ ಇನ್ನೆಂದು ಮುಖ ಕಿವಿಚಿ ಕಾಲು ಝಾಡಿಸಿದೆನಲ್ಲ. ಆಗ ಸತ್ತಿರಬಹುದಾದ ಅನೇಕಾನೇಕ ಇರುವೆಗಳ ಬಗೆಗೆ ನಾನು ಕನಿಕರಿಸಲೂ ಇಲ್ಲ; ಆ ಕೃತ್ಯವನ್ನು ಕ್ರೌರ್ಯವೆಂದು ಬಗೆಯಲೂ ಇಲ್ಲವೇಕೆ? ಆದರೂ, ಅಪಜಯದ ನಿವಾರಣೆಯ ಕಾರ್ಯದಲ್ಲಿ ಸತ್ತಿರಬಹುದಾದ ಇರುವೆಗಳ ಬಗೆಗೆ ಇರುವೆಗಳಿಗೇ ಆಸ್ಥೆ ಇರುವಂತೆ ಕಾಣಲಿಲ್ಲವಲ್ಲ ಎಂಬ ಕಳಕಳಿಯನ್ನು ಪಟ್ಟೆನೇಕೆ, ಎಲ್ಲಿ ಮನುಷ್ಯನ ವಿಚಿತ್ರ ಮನಸ್ಸೇ ಎಂದುಕೊಳ್ಳುತ್ತಾ ಒಳಗೆ ನಡೆದಿದ್ದೆ. ಲೂಯಿಸ್ ಥಾಮಸ್ ಎಂಬ ಜೀವಶಾಸ್ತ್ರಜ್ಞರು ಒಂದೆಡೆ ಹೀಗೆ ಬರೆದಿದ್ದುದು ಜ್ಞಾಪಕವಾಯಿತು: ನಂಬಿಕೆ ದೈನ್ಯ ಕ್ಷಮೆ ಮಿತವ್ಯಯ ತ್ಯಾಗ ಇವನ್ನು ಬೋಧಿಸುವ ಸಾಹಿತ್ಯಗಳ ಆಕರವಾಗಿ ಸಂಘ ಸಂಸ್ಥೆಗಳ ಕೌಶಲವನ್ನು ಕಲಿಸುವ ಮಾದರಿಯಾಗಿ ಗುಂಪು ಕೀಟಗಳನ್ನು ಅದರಲ್ಲೂ ಇರುವೆಗಳ ದೃಷ್ಟಾಂತವನ್ನು ಬಳಸುತ್ತಾರೆ. ಈಗೀಗ ಇವುಗಳನ್ನು ಕಲಾಕೃತಿಗಾಗಿಯೂ ಬಳಸಲಾಯಿತು. ನ್ಯೂಯಾರ್ಕಿನ ಕಲಾ ಸಂಸ್ಥೆಯೊಂದು ಆಕೃತಿಗಳು ಮತ್ತು ನಮೂನೆಗಳು ಎಂಬ ಪ್ರದರ್ಶನಕ್ಕೆಂದು ಮಧ್ಯ ಅಮೇರಿಕದಿಂದ ಇಪ್ಪತ್ತು ಲಕ್ಷ ಇರುವೆಗಳನ್ನು ತಂದು ಎತ್ತರದ ಪಾರದರ್ಶಕ ತೊಟ್ಟಿಯೊಳಗಿನ ಮರಳಿನಲ್ಲಿಟ್ಟಿತ್ತು. ಆಹಾರದ ಎಡೆ ಬದಲಾಯಿಸಿದಂತೆ ಅತ್ತ ಇತ್ತ ಹಗ್ಗವಾಗಿ ನಡೆಯುವ ಇರುವೆಗಳು ಎಷ್ಟೆಲ್ಲ ರಖಂ ಆಕೃತಿಗಳನ್ನು ರಚಿಸಿರುವವೆಂದರೆ ಈ ಇರುವೆಗಳೂ ಇವುಗಳು ರಚಿಸಿದ ವರ್ತುಲಗಳು, ಅ



ವರ್ತುಲಗಳು ವಕ್ರವರ್ತುಲಗಳು ಇತ್ಯಾದಿ ನಮೂನೆಗಳನ್ನು ನೋಡಲು ಸಾಲುಗಟ್ಟಿ ಬಂದು ಒಳ ನಡೆದು ಇರುವೆಗಳಂತೆಯೇ ಅವರೆ ಪಾರದರ್ಶಕ ತೊಟ್ಟಿಯ ಹೊರಗೆ ಸುತ್ತುಗಟ್ಟಿ ಅಲ್ಲಲ್ಲಿ ನಿಂತು ಕತ್ತೆತ್ತಿ ಇಳಿಸಿ ಕೈ ಆಡಿಸಿ ವಿಚಾರ ವಿನಿಮಯ ನಡೆಸುತ್ತ ನಮ್ಮ ಹಿಂದೆ ಸಾಲುಗಟ್ಟಿ ಬಂದ ಹೊಸಬರಿಗೆ ದಾರಿ ಕೊಡುವ ನ್ಯೂಯಾರ್ಕಿನ ಜನರೂ, ಒಟ್ಟಾರೆ ಒಂದೇ ನೋಟವಾಗಿ ಒಂದು ಭವ್ಯ ಜೀವಂತ ಕಲಾಕೃತಿಯಂತೆ, ಜೀವದ ಮೆರವಣಿಗೆಯಂತೆ, ಚಲನಚಿತ್ರದಂತೆ, ಒಂದು ಘಟನೆಯಂತೆ, ಒಂದು ವಿಪರ್ಯಾಸದಂತೆ ತೋರಿತು.

ಆದರೀ ಭವ್ಯ ಕಲಾಕೃತಿ ಇದ್ದಕ್ಕಿದ್ದ ಹಾಗೆ ಧೂಳಿಧೂಸರವಾಗಿಬಿಟ್ಟಿತು. ಈ ಬೆಳಿಗ್ಗೆ ಇರುವೆಗಳು ಏಕೋ ಚಟುವಟಿಕೆ ಕಳೆದುಕೊಂಡವು. ನಿಸ್ತೇಜವಾದ ಇರುವೆಗಳಿನ್ನು ಯಾವಾಗ ಸಾವು ತಟ್ಟಿತ್ತೋ, ದಿನದೊಳಗೆ ಎಲ್ಲ ಇಪ್ಪತ್ತು ಲಕ್ಷ ಇರುವೆಗಳೂ ಸತ್ತು, ಪ್ಲಾಸ್ಟಿಕ್ಕು ಚೀಲಗಳಲ್ಲಿ ತುಂಬಲ್ಪಟ್ಟು, ನಗರ ನೈರ್ಮಲ್ಯದ ಲಾರಿಗಳ ಕಸವಾಗಿ ಹೋದವು. ಮಧ್ಯ ಅಮೇರಿಕಾದ ಕಾಡುಗಳಲ್ಲಿ, ಸಿಮೆಂಟು ಪೈರುಗಳು ಗಾಜು ಪೈಪುಗಳ ನಡುವೆ ಪ್ಲಾಸ್ಟಿಕ್ಕು ತೊಟ್ಟಿಯೊಳಗಿನ ಮರಳಲ್ಲಿ? ಕಾರ್ಪಣ್ಯ-ಕನಿಕರ ಮನುಷ್ಯ-ಕೀಟಗಳು, ನನ್ನ ಹೊಟ್ಟೆ ತೊಳಸು ಬೆಚ್ಚಿತು.

ಒಳಗಿರಲಾರದೆ ಹೊರಬಂದು ನಿಂತೆ. ಇಷ್ಟು ಹೊತ್ತಿನಲ್ಲಿ ಇಲ್ಲಿವರೆಗೂ ಕಾಣದ ವಿಳಿದಾಳು ಅಸು ನೀಗಿದ್ದ ಪದಿಯತ್ತ ದೃಷ್ಟಿಸಲೂ ಮನಸ್ಸು ಬರಲಿಲ್ಲ. ಎಲ್ಲಿಯೂ ಗಮನವಿಡದೆ ಬೆಪ್ಪನಂತೆ ನಿಂತಿದ್ದ ನನ್ನ ದೃಷ್ಟಿಯನ್ನು ಚಿಟ್ಟೆಯೊಂದು ಸೆಳೆಯಿತು. ಅದೇನು ಕವಿಸಮಯದಲ್ಲಿ ನವಿರೆದ್ದ ನಾಗರಿಕರು ಹಾಡುವ ಹೂವೆಂದು ಹಾಡಿಹೊಗಳುವ ಬಣ್ಣ ಬಣ್ಣದ ಚಿಟ್ಟೆಯಾಗಿರಲಿಲ್ಲ. ಬೆಳ್ಳಂಬೆಳ್ಳನೆಯೋ ಪಚ್ಚಂ ಪಸಿರಿನದೋ ಅಥವ ದೊಡ್ಡ ಗಾತ್ರದ್ದೋ ಆಗಿರಲಿಲ್ಲ. ಅದೊಂದು ಮಾಸಲು ಬೂದು ಬಣ್ಣದ ಸಣ್ಣ ಚಿಟ್ಟೆ, ನನ್ನ ದೃಷ್ಟಿ ಸೆಳೆದುಕೊಂಡ ಚಿಟ್ಟೆ ಅರಿಸಿನದ ಗುಲಾಬಿಯೋ ದಾಸವಾಳವೋ ಆಗಿರಲಿಲ್ಲ. ತುಂಬೆಯ ಗಿಡ. ಹಾರುತ್ತ ತುಂಬೆಯ ಹೂವಿನ ಮೇಲೆ ಕೂತೊಡನೆ ಚಿಟ್ಟೆ ಬಿಮ್ಮಿಟ್ಟು ಇನ್ನೊಂದು ಹೂವಿಗೆ ಹಾರಿ ಅಲ್ಲಿಯೂ ಕೂರದೆ ಮತ್ತೊಂದು ಗಿಡದ ಹೂವಿಗೆ ಹಾರಿತು. ಆ ಗಿಡದ ಹೂವೂ ಇನ್ನೊಂದು ಗಿಡಕ್ಕೆ, ಅಲ್ಲಿಂದಲೂ ಮತ್ತೊಂದು ಗಿಡಕ್ಕೆ ಹಾರಿ ಕಡೆಗೊಂದು ಹೂವಿನ ಮೇಲೆ ಕೂತು ಸುಖವಾಗಿ ಕೊಳವೆ ಇಟ್ಟು ಮಕರಂದ ಹೀರಿ ಅದೇ ಗಿಡದ ಇನ್ನೊಂದು ಮತ್ತೊಂದು ಹೂಗಳಿಗೆ ಹಾರಿ ಹಾರಿ ಮಕರಂದವುಂಡು ಕಡೆಗೆ ತನ್ನಷ್ಟಕ್ಕೆ ಹಾರಿಹೋಯಿತು.

ಚಿಟ್ಟೆ ಹಾರಿ ಹೋದ ಮೇಲೆ ನನಗನ್ನಿಸಿತು. ನಾನು ಹೆಸರಿಸಲೂ ಬಾರದಂಥ ಈ ಸಣ್ಣ ಚಿಟ್ಟೆ ಬಂದದ್ದೆಲ್ಲಿಂದ? ಹೋದೀತೆಲ್ಲಿಗೆ? ಇದು ಎಲ್ಲಿ



ತಾನು ನೋಡಿದೆ? ಎಲ್ಲಿ ನೋಡಿದರೂ ಸಿಮೆಂಟು ಟಾರು ಹರಡಿಕೊಂಡಿರುವ ಈ ಜನಾರಣ್ಯದಲ್ಲಿ ಉಳಿಸು ಹೊಂಚಿ ನನ್ನ ತಾಣವನ್ನು ಮಾರಿ ಕೊಡು ಕೊಂಡೀತು ಹೇಗೆ ಎಂಬ ಬೆರಗು, ಎಲ ಎಲ್ಲಿಂದ ಬಂತೋ, ಅಂತೂ ಆಹಾರ ಅರಸಿ ಬಂದ ಈ ಚಿಟ್ಟೆ ಕಾಂಪೌಂಡಿನ ನಿರ್ಬಂಧನದ ನಡುವೆ ಇರುವ ಸಣ್ಣ ಅಂಗಳದಲ್ಲಿ ಬೆಳೆದಿದ್ದ ತುಂಬೆ ಗಿಡಗಳನ್ನು ಕಂಡುಕೊಂಡಿತು ಮಾತ್ರವಲ್ಲದೆ ತನ್ನದ್ಯಾವುದು ಪರರದ್ಯಾವುದು ಎಂಬುದನ್ನೂ ಕಂಡುಕೊಂಡು ತನ್ನ ಪಾಲುಂಡು ಮಿಕ್ಕವರದಕ್ಕೆ ಬಾಯಿ ಹಾಕದೆ ತನ್ನ ಹಾದಿ ಹಿಡಿದು ಹೋಯಿತಲ್ಲ; ಇದೇನಿದು ಪ್ರಪಂಚದ ಮೊದಲ ಚಿಟ್ಟೆಯಲ್ಲ. ಇದು ಸತ್ತರೆ ಕೊನೆಯ ಚಿಟ್ಟೆಯೂ ಆಗಲಾರದು ಜೀವನದ ಪರಿಗಳಲ್ಲಿ ಎಂತೆಂಥ ವೈಚಿತ್ರ್ಯಗಳಿವೆ ಎಂಬ ಪರಮಾಶ್ಚರ್ಯದಲ್ಲಿ ವಿಸ್ತಾರಗೊಂಡಿತು. ಅಂದ ಮೇಲೆ ತನ್ನ ದೇಹದ ಪ್ರಜ್ಞೆ ಹಾಗೂ ಪರಿಸರದ ವಿಧಿಗನುಗುಣವಾಗಿ ಬದುಕು ಸಾಗಿಸುವ ಜೀವಪ್ರತಿ ಅಂದಿನಿಂದ ಇಂದಿನವರೆವಿಗೋ ಬಾಳುವ ಪ್ರತಿ ತಳಿಯಲ್ಲಿಯೂ ಚಿತ್ರದೀಪದ ಜ್ವಾಲೆಯಂತೆ ಅಖಂಡವಾಗಿ ಲಾಲಿಯಾಡುತ್ತಿದೆ. ತನ್ನದಾದ ಹಲವು ಹಗಲುಗಳಲ್ಲಿ ಈ ಸಣ್ಣನ್ನ ಬಾಡನ್ನ ಹಸರಿಸಲಾಗದ ಚಿಟ್ಟೆ ಬದುಕಿನ ಸ್ಪರ್ಧೋಟ ಒಡ್ಡುವ ಎಲ್ಲ ಹಗರಣಗಳನ್ನೆದುರಿಸಿ ತನ್ನ ಪಾಲನೆ ಪೋಷಣೆಯ ಬದುಕು ಬಾಳುತ್ತ ತನ್ನ ಕುಲದುಳಿಕೆಗಾಗಿ ಪ್ರತಿಸೃಷ್ಟಿಯನ್ನೂ ಸಾಧಿಸಿಬಿಡುತ್ತದಲ್ಲ ಎಂಬ ಸಾಧಾರಣ ಅರಿವಿನಲ್ಲಿ ಆ ಪರಮಾಶ್ಚರ್ಯವೂ ಅಡಗಿ ಕುಳಿತಿತ್ತು.

ಗೆಳೆಯರೊಬ್ಬರು ಒಂದು ಸಂಜೆ ಕಪಿಲಾ ನದಿಯ ದಂಡೆಯ ಮೇಲೆ ಹಾಯಾಗಿ ಕುಳಿತಿದ್ದರು. ಅಪರೂಪದ ಹಕ್ಕಿಯ ಕೂಗು ಹರಿಯುವ ನೀರಿನ ಮೊರೆತದ ವಿನಾ ಇನ್ನೇನೂ ಕೇಳಿ ಬರುತ್ತಿರಲಿಲ್ಲ. ಹೀಗೆ ಇವರು ಕುಳಿತಿದ್ದಾಗ ನದಿಯ ನೀರಿನ ಹರಹಿನ ಮೇಲೆ ಚಿಟ್ಟೆಗಳು ಹಾರಿ ಹೋಗುತ್ತಿದ್ದುದನ್ನು 'ಗಮನಿಸಿದರು. ಸಣ್ಣ ಸಣ್ಣ ಚಿಟ್ಟೆಗಳು, ಕೆಲವಂತೂ ನೀರ ಮೇಲೆ ಹಲವೇ ಅಡಿಗಳಷ್ಟು ಎತ್ತರದಲ್ಲಿ ಹಾರುತ್ತಿದ್ದುವು. ಹಾರುವುದರಲ್ಲಿ ಸೋಲಾಯಿತೋ, ತೂಕ ಸ್ವಾಸ್ಥ್ಯ ಸ್ಥೈರ್ಯ ಆಯ ಯಾವುದು ತಪ್ಪಿತೋ, ಹಾರುತ್ತಿದ್ದ ಒಂದು ಚಿಟ್ಟೆ ನೀರಿನಲ್ಲಿ ಬಿದ್ದುಬಿಟ್ಟಿತು. ಒಡನೆಯೇ ರೆಕ್ಕೆ ರಭಾಡಿಸಿ ಮೇಲೇಳಲೆಳಸಿತು, ಒಂದು ರೆಕ್ಕೆ ನೀರ ಮೇಲೆ ಊರಿದರೂ ಮತ್ತೊಂದು ಪ್ರಾಣಿಕ ನೀರಿನ ಮೇಲ್ಪದರದ ಒತ್ತಡದ ಹಿಡಿತದಲ್ಲಿ ಸಿಕ್ಕಿಕೊಂಡ ಕಾರಣ ನೀರಿಗಂಟಿ ನಿಂತಿತು. ಈ ಈ ಸಿಕ್ಕಿನಿಂದ ಬಿಡಿಸಿಕೊಳ್ಳಲು ಚಿಟ್ಟೆ ಬಿಡುವಿದ್ದ ರೆಕ್ಕೆಯನ್ನು ಒಡಬಡನೆ ಹಣಹಣಿಸಿತು. ಹೀಗೆ ತೂರಾಡುತ್ತಿದ್ದ ಚಿಟ್ಟೆ ಯಾವ ಭಾಷೆಯಲ್ಲಿ ಆರ್ತನಾದ ಮಾಡಿತೋ ಯಾವ ಸ್ತರದಲ್ಲಿ ಸುದ್ದಿ ಮುಟ್ಟಿಸಿತೋ ಮೇಲೆ ಹಾರುತ್ತಿದ್ದ ಚಿಟ್ಟೆಗಳಲ್ಲೊಂದು ತಟ್ಟನೆ ಕೆಳಗಿಳಿಯಿತು. ತನ್ನ ಸಂಗಾತಿಗೆ ರೆಕ್ಕೆ ಬಿದ್ದ ತನಗೆ ಇದ್ದ ಸಕಲ ಬಲ ಶಕ್ತಿಗಳನ್ನು ಉಪಯೋಗಿಸಿ ಸಂಗಾತಿಯನ್ನು ನೀರಿನ ಸಿಕ್ಕಿನಿಂದ ಬಿಡಿಸುವುದರಲ್ಲಿ ಯಶಸ್ವಿಯಾಯಿತು. ಶಾಂತವಾದ ಆಕಾಶದಲ್ಲಿ ಮಿಂಚು ತಂತಾನೆ ಮರೆಯಾಗಿ ಹೋಗುವಂತೆ ಪ್ರಾಣಿಗೆ ಪ್ರಾಣಿಯಾಗಬೇಕು ಎಂಬ ಆಪ್ತ ಸಮಯದ ಆತ್ಯಂತಿಕವನ್ನು ತೋರಿದ ಈ ಎರಡು ಚಿಟ್ಟೆಗಳು, ಆ ಕ್ಷಣ ಸೃಷ್ಟಿಸಿದ ಸನ್ನಿವೇಶದಲ್ಲಿ ತಮ್ಮದಲ್ಲವನ್ನೂ ತೊಡಗಿಸಿ ಯಾವುದೇ ಅಸಾಧ್ಯಸಾಧ್ಯ ಕೌತುಕವನ್ನು ಸಾಧಿಸಿದ್ದೇನೆ ಎಂಬುದನ್ನೂ ಗಮನಿಸದಲೆ ತಮ್ಮಷ್ಟಕ್ಕೆ ಹಾರಿಹೋಗಿಬಿಟ್ಟಿದ್ದುವು. ಇನ್ನೊಂದು ಘಳಿಗೆಯಲ್ಲಿ ಚಿಟ್ಟೆಗಳ ಇನ್ನೊಂದು ಗುಂಪು ಹಾದು ಹೋಯಿತು.

ತಾವೀಗ ನೋಡಿದ್ದು ನಿಜವೆ ಎಂಬ ಆಶ್ಚರ್ಯ ಗೆಳೆಯರಿಗೆ ಈಗಲೇ ಇಲ್ಲವಂತೆ. ಮತ್ತೊಮ್ಮೆ ಕಣ್ಣಿಟ್ಟು ನೋಡಿದಷ್ಟು ಮನಸ್ಸಿಟ್ಟು ಧೇನಿಸಿದಷ್ಟು ಬದುಕಿನಲ್ಲಿ ಕನಿಕರ ಇದ್ದಷ್ಟು [illegible] ಮೇಲೆ ಬೆರಗು ಬುರುಗಿನಂತೆ ಎದ್ದು ಮರೆಯಾಗುತ್ತದೆಂದು ಇವರು ಹೇಳುತ್ತಲೇ ಇರುತ್ತಾರೆ.

✡



ಶಾಸ್ತ್ರಿ
ಚುರಮುರಿಯವರು

ಶ್ರೀಮನ್ಮಹಾ ಕವಿ ಕಾಲಿದಾಸ ಕೃತ.

# ಶಾಕುಂತಲ ನಾಟಕವು.

ಕೇಶೋ ರಾಮ ಚಂದ್ರ ಚುರಮುರೀ ಓವ್ಹರಸೀಯರ ಸೆಕಂಡ ಗ್ರೇಡ
ಪಬ್ಲಿಕ ವರ್ಕ್ಸ ಡಿಪಾರ್ಟಮೆಂಟ ಎಂಬವರಿಂದ ಕನ್ನಡಿಸಲ್ಪಟ್ಟಿತು.

---

ಮುಂಬೈಯಲ್ಲಿ,
ಎಜ್ಯುಕೇಶನಲ ಸೊಸಾಯಟೀ ಪ್ರೆಸ ಎಂಬ ಮುದ್ರಾಕ್ಷರ
ಶಾಲೆಯೊಳಗೆ ಮುದ್ರಿಸಲ್ಪಟ್ಟಿರುತ್ತದೆ.

ಶಕೆ ೧೭೯೧.
ಸನ ೧೮೭೦

ಮುದಗಲ್ಲ

# ನಾಟ್ಯಾಚಾರ್ಯ ಚುರಮುರಿ

ಹೊಸ ಕನ್ನಡದ ಅರುಣೋದಯದ ಸಮಯದಲ್ಲಿ ಮಿಂಚಿಹೋದ ಕನ್ನಡ ಲೇಖಕರಲ್ಲಿ ಶೇಷೋ ರಾಮಚಂದ್ರ ಚುರಮುರಿ ಜನಮಾನಸದಲ್ಲಿ ಅಷ್ಟಾಗಿ ಉಳಿದಿಲ್ಲ. ವೃತ್ತಿಯಿಂದ ಓವರ್‌ಸೀಯರ್ ಆಗಿದ್ದರೂ ಕಾವ್ಯದಲ್ಲಿ, ಕನ್ನಡ ಭಾಷಾಭ್ಯುದಯದಲ್ಲಿ ತೀವ್ರ ಆಸಕ್ತಿಯಿದ್ದ ಚುರಮುರಿಯವರು ಕಾಳಿದಾಸನನ್ನು ಕನ್ನಡಿಸಿದ ಮೊದಲ ಸಾಹಿತಿ. ಸಾಹಿತ್ಯ ಚರಿತ್ರೆ ಅವರಿಗೆ ಆ ಸ್ಥಾನ ನೀಡಬೇಕಾದದ್ದು ಅತ್ಯಗತ್ಯ.

ಮರಾಠಿ ರಂಗಭೂಮಿಯ ಇತಿಹಾಸದಲ್ಲಿ ೩೧ ಅಕ್ಟೋಬರ್ ೧೮೮೦ಕ್ಕೆ ಮಹತ್ವದ ಸ್ಥಾನವಿದೆ. ಅಂದು ಮಹಾಕವಿ ಕಾಳಿದಾಸನ 'ಶಾಕುಂತಲ' ನಾಟಕವನ್ನು ಮರಾಠಿ ವ್ಯಾವಸಾಯಿಕ ಸಂಗೀತ ರಂಗಭೂಮಿಯ ಪಿತಾಮಹರಾದ ಅಣ್ಣಾಸಾಹೇಬ ಕಿರ್ಲೋಸ್ಕರರು ಮರಾಠಿಗೆ ಪರಿವರ್ತಿಸಿ ಪುಣೆ ಪಟ್ಟಣದಲ್ಲಿ ರಂಗ ಪ್ರದರ್ಶನ ಕೈಕೊಂಡರೆಂದು ಮಹಾರಾಷ್ಟ್ರದ ನಾಟ್ಯ ಸಂಶೋಧಕರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಲೋಕಮಾನ್ಯ ಟಿಳಕರು ಈ ನಾಟಕವನ್ನು ನೋಡಿ ಮನಸಾರೆ ಕೊಂಡಾಡಿದರಲ್ಲದೆ "ರಂಗಭೂಮಿಯನ್ನು ಕೇವಲ ಮನೋರಂಜನದ ಮಾಧ್ಯಮವಾಗಿ ಬಳಸದೇ ಹಿಂದುಸ್ಥಾನದ ಪುರಾತನ ಸಂಸ್ಕೃತಿಯ ಪುನರುಜ್ಜೀವನಕ್ಕಾಗಿ ಇದರ ಆಶ್ರಯ ಪಡೆಯುವುದು ಅವಶ್ಯ ಎಂದು ಉದ್ಗಾರ ತೆಗೆದರು. ಕನ್ನಡ ರಂಗಭೂಮಿಯ ಸಂಶೋಧಕರು ಅಣ್ಣಾ ಕಿರ್ಲೋಸ್ಕರರ ಶಾಕುಂತಲ ನಾಟಕದ ಬಗ್ಗೆ ಅಣ್ಣಾಸಾಹೇಬ್ ಕಿರ್ಲೋಸ್ಕರರ ಮಿತ್ರ ಶೇಷೋ ರಾಮಚಂದ್ರ ಚುರಮುರಿ ಕನ್ನಡಿಸಿದ ಕನ್ನಡ ಶಾಕುಂತಲ (೧೮೭೦)ದಿಂದ ಸ್ಫೂರ್ತಿ ಪಡೆದು ತಮ್ಮ ಮರಾಠಿ ನಾಟಕದಲ್ಲಿ ಅದೇ ಬಗೆಯ ನಾಟ್ಯ ತಂತ್ರಗಳನ್ನು ಕೆಲವು ಮಾರ್ಪಾಟು ಮಾಡಿ ಬಳಸಿದರೆಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಮರಾಠಿ ನಾಟ್ಯ ಸಾಹಿತ್ಯದಲ್ಲಿ ಅಣ್ಣಾ ಕಿರ್ಲೋಸ್ಕರರ ಕೃತಿಗಳ ಬಗ್ಗೆ ಅನೇಕ ಸಂಶೋಧನೆಗಳು ಆಗಿದ್ದು ಇನ್ನೂ ಕೆಲವು ಬಗೆಯ ಸಂಶೋಧನೆಗಳು ಸಾಗಿವೆ. ಆದರೆ ಕನ್ನಡ ಶಾಕುಂತಲ ನಾಟಕದ ರಚಯಿತ ನಾಟ್ಯಾಚಾರ್ಯ ಚುರಮುರಿಯವರ ಬಗ್ಗೆ ಅಷ್ಟೊಂದು ಅಭ್ಯಾಸವಾದಂತೆ ಕಾಣುವುದಿಲ್ಲ. ಇದೊಂದು ವಿಷಾದದ ಸಂಗತಿಯಾಗಿದೆ.

ಶೇಷೋ ರಾಮಚಂದ್ರ ಚುರಮುರಿ ಕನ್ನಡದಲ್ಲಿ 'ಶಾಕುಂತಲ' ನಾಟಕವನ್ನು ಪರಿವರ್ತಿಸಿದವರಲ್ಲಿ ಮೊಟ್ಟ ಮೊದಲಿಗರು. ಆ ಬಳಿಕ ಪಂಡಿತ ಬಸವಪ್ಪ ಶಾಸ್ತ್ರಿಗಳು ಮತ್ತು ಬಿ. ಕೃಷ್ಣಪ್ಪನವರು ಆ ಪ್ರಯತ್ನವನ್ನು ಮಾಡಿದರು. ಇದಲ್ಲದೆ ಚುರಮುರಿಯವರು ಕ್ರಿಸ್ತ ಶಕ ೧೮೮೨ರಲ್ಲಿ 'ಮೃಚ್ಛಕಟಿಕ' ನಾಟಕವನ್ನು ಗದ್ಯದಲ್ಲಿ ರೂಪಾಂತರಿಸಿದರು. ೧೮೯೫ರಲ್ಲಿ ಕರಾಚಿಯಲ್ಲಿ ಜರುಗಿದ ದಕ್ಷಿಣೀ ಸಭೆಯಲ್ಲಿ 'ಸ್ತ್ರೀ[illegible]' ಎಂಬ ತಾತ್ಪರ್ಯದ ಭಾಷಣವನ್ನು ಮರಾಠಿಯಲ್ಲಿ ಮಾಡಿದರು. ಈ ಎರಡೂ ಕೃತಿಗಳೂ 'ಬೆಳಗಾಂವ ಸಮಾಚಾರ' ಛಾಪಖಾನೆಯಲ್ಲಿ ಮುದ್ರಣಗೊಂಡಿದ್ದರೂ ಇನ್ನೂವರೆಗೆ ಅನುಪಲಬ್ಧವಾಗಿದೆ.

ಮರಾಠಿಯಲ್ಲಿ ಚುರುಮುರಿಯವರು ಕವಿತೆಗಳನ್ನು ರಚಿಸಿದ್ದಾರೆ. ಲೇಖನವನ್ನು ಬರೆದು ಪ್ರಕಟಿಸಿದ್ದಾರೆ. ಸಂಸ್ಕೃತ, ಕನ್ನಡ, ಮರಾಠಿ, ಹಿಂದೀ, ಉರ್ದು ಮತ್ತು ಲ್ಯಾಟಿನ್ ಭಾಷೆಗಳ ಮೇಲೆ ಅವರಿಗೆ ಪಾಂಡಿತ್ಯವಿದ್ದಿತು. ಆದರೆ ನಮಗೆ ಅವರ ಛಾಯಾಚಿತ್ರ, ಸಂಪೂರ್ಣ ಜೀವನ ಚರಿತ್ರೆ, ಪತ್ರವ್ಯವಹಾರಗಳು ಉಪಲಬ್ಧವಾಗಿರುವದಿಲ್ಲ. ಕನ್ನಡ-ಮರಾಠಿ ನಾಟ್ಯ ಸಂಶೋಧಕರು ಒಂದಿಲ್ಲ ಒಂದು ರೀತಿಯಲ್ಲಿ ಇವರ ಉಲ್ಲೇಖ ಮಾಡಬೇ ತಮ್ಮ ಸಂಶೋಧನೆಯಲ್ಲಿ ಮುಂದೆ ನಾಗುವದಿಲ್ಲ.

ನಾಟ್ಯಾಚಾರ್ಯ ಚುರಮುರಿಯವರ ಮೂಲ ಮನೆತನ ಬೆಳಗಾಂವ ಜಿಲ್ಲೆಯ ರಾಮದುರ್ಗದ್ದು. ಇದೊಂದು ಸಂಸ್ಥಾನ. ಇದರ ಅಧಿಪತಿ ಶ್ರೀ ಭಾವೆ ಎಂಬುವವರು. ಆದ್ದರಿಂದ ಇಲ್ಲಿ ಮರಾಠಿ ಮತ್ತು ಕನ್ನಡ ಭಾಷೆಗಳು ವ್ಯವಹಾರದಲ್ಲಿದ್ದವು. ಶೇಷಗಿರಿಯ ಪೂರ್ವಜರಿಗೆ "ಮುದಕವಿ" ಎಂದು ಕರೆಯುತ್ತಿದ್ದರು. ಯಾವ ಕಾರಣದಿಂದಲೋ ಈ ಮನೆತನದ ಪೂರ್ವಜರು ಧಾರವಾಡಕ್ಕೆ ವಲಸೆ ಬಂದರು. ಉದರ ನಿರ್ವಾಹಕ್ಕಾಗಿ ಚುರುಮುರಿ ಎಂಬ ಪ್ರಸಿದ್ಧ ವೀರಶೈವ ವ್ಯಾಪಾರಿಯ ಮುಖ್ಯ ಗುಮಾಸ್ತರಾಗಿ ಕೆಲಸ ಮಾಡತೊಡಗಿದರು. ಕಾಲಾಂತರದಿಂದ ಮುದಕವಿ ಎಂಬ ಹೆಸರು ಮರೆತು ಜನರು ಇವರಿಗೂ ಚುರುಮುರಿ ಎಂದೇ ಸಂಬೋಧಿಸತೊಡಗಿದರು. ಇನ್ನುಳಿದ ಕೆಲವು ಸಂಬಂಧಿಕರು ಮುದಕವಿ ಎಂಬ ಹೆಸರನ್ನೇ ಕಾಯಂ ಆಗಿ ಇಟ್ಟುಕೊಂಡಿದ್ದರು. ಅವರಲ್ಲಿ ಶೇಷಗಿರಿರಾವ್ ಮುದಕವಿ ಎಂಬವರು ಮಾಮಲೇದಾರರಾಗಿದ್ದರು. ರಾಮದುರ್ಗದಲ್ಲಿ ಮುದಕವಿ ಎಂಬ ಹೆಸರಿನ ಮೂರು ನಾಲ್ಕು ಮನೆತನಗಳು ಈಗಲೂ ಇವೆ. ಕೆಲವರು ಸರಾಫಿ ಕೆಲಸ ಮಾಡುತ್ತಿದ್ದಾರೆ. ಅವರನ್ನು "ನಾಯಕ" ಎಂದು ಕರೆಯುತ್ತಾರೆ. ರಾಮದುರ್ಗದ ಪಕ್ಕದಲ್ಲಿ ೩-೪ ಮೈಲು ಅಂತರದ ಮೇಲೆ ಮುದಕವಿ ಎಂಬ ಗ್ರಾಮವಿದೆ. ಇವರು ಆ ಊರಿನವರು.

ನಮ್ಮ ಚರಿತ್ರನಾಯಕರಾದ ಶೇಷಗಿರಿಯ ತಂದೆ ರಾಮಚಂದ್ರರಾಯರು ಪೋಲೀಸ್ ಖಾತೆಯಲ್ಲಿ ಕೆಲಸ ಮಾಡುತ್ತಿದ್ದರು. ಕಕ್ಕ ಕೃಷ್ಣರಾಯರು ಆಗ ಪರಸಗಡ ತಾಲೂಕ ಸವದತ್ತಿಯಲ್ಲಿ ವಕೀಲರಾಗಿದ್ದರು. ಧಾರವಾಡದ ಪಕ್ಕದಲ್ಲಿರುವ ಗೋವನಕೊಪ್ಪ ಗ್ರಾಮದ ವತನದಾರ ಗೌಡಕೀ ಪಕ್ಕಾ ಕೂಡ ಈ ಮನೆತನಕ್ಕೆ ಸೇರಿತ್ತು. ನ್ಯಾಯ ನಿಷ್ಠುರರಾದ ರಾಮಚಂದ್ರರಾಯರು ವರಿಷ್ಠ ಅಧಿಕಾರಿಯೊಡನೆ ಭಿನ್ನಾಭಿಪ್ರಾಯ ಉಂಟಾದುದರಿಂದ ಸರಕಾರಿ ಕೆಲಸವನ್ನು ಬಿಟ್ಟುಕೊಟ್ಟರು. ತಮ್ಮ ಉತ್ತರಾರ್ಧ ಜೀವನವನ್ನು ಭಾಗವತ ಪುರಾಣ, ಕೀರ್ತನೆ ಹೇಳುವದರಲ್ಲಿ ಕಳೆಯುತೊಡಗಿದರು. ಶಿವರಾತ್ರಿಯ ಉತ್ಸವ ಪ್ರಸಂಗವಲ್ಲಿ ಆರತಿ ಪದಗಳನ್ನು ರಚಿಸಿ ಹೇಳುತ್ತಿದ್ದರು. ಇವರ ಕವಿತ್ವ ಶಕ್ತಿಯನ್ನೂ ಸಂಗೀತದಲ್ಲಿನ ಪಾಂಡಿತ್ಯವನ್ನೂ ಮೆಚ್ಚಿನ ಮಿತ್ರರು ಇವರಿಗೆ "ಗವಾಯಿ ರಾಮಚಂದ್ರ"ನೆಂದೂ ಕರೆಯುತ್ತಿದ್ದರು.

ರಾಮಚಂದ್ರರಾಯರ ಹಿರಿಯ ಮಗ ಶೇಷಗಿರಿಯ ಜನ್ಮ ೧೮೭೭ ರಲ್ಲಿ. ತಾರೀಖು ಮತ್ತು ಜನ್ಮ ಕುಂಡಲಿ ಉಪಲಬ್ಧವಿಲ್ಲ. ರಾಮಚಂದ್ರರಾಯರಿಗೆ ಎಷ್ಟು ಜನ ಮಕ್ಕಳೆಂಬುದೂ ತಿಳಿಯುವದಿಲ್ಲ. ಚಿಕ್ಕಂದಿನಲ್ಲಿಯೇ ಶೇಷಗಿರಿ ಸಂಸ್ಕೃತ, ಕನ್ನಡ, ಮರಾಠಿ ಭಾಷೆಗಳ ಅಧ್ಯಯನ ಮಾಡಿದನಲ್ಲದೇ ಲಕ್ಷ್ಮೀಶ ಕವಿಯ ಜೈಮಿನಿ ಭಾರತವು ಈತನ ಮನ ಸೆಳೆಯಿತು. ತಂದೆಯ ಸಂಗೀತ ಕಚೇರಿಗಳಲ್ಲಿ ಶೇಷಗಿರಿಯು ಆಸ್ಥೆಯಿಂದ ಭಾಗವಹಿಸುತ್ತಿದ್ದನು. ನಾಟ್ಯಕಲೆ ಮತ್ತು ಸಂಗೀತದಲ್ಲಿನ ಪಾಂಡಿತ್ಯಕ್ಕೆ ತಂದೆಯೇ ಮಾರ್ಗದರ್ಶನದ ಕಾರಣ ಬಂದಿತು. ಪ್ರಾಥಮಿಕ ಶಿಕ್ಷಣದ ನಂತರ ಶೇಷಗಿರಿ ಉಚ್ಚಶಿಕ್ಷಣಕ್ಕಾಗಿ ಪುಣೆಗೆ ತೆರಳಿದನು. ಮುಂಬೈ ವಿಶ್ವವಿದ್ಯಾಲಯದ ಸ್ಥಾಪನೆಯಾದದ್ದು ೧೮೫೭ ರಲ್ಲಿ. ಅದಕ್ಕೆ ಮೊದಲು ಬೋರ್ಡ್ ಆಫ್ ಎಜ್ಯುಕೇಶನ್ ಎಂಬ ಸರಕಾರಿ ಮಂಡಳಿಯ ಇಂಗ್ಲಿಷ್ ಶಾಲೆಯಲ್ಲಿ ಶಿಕ್ಷಣ ಪಡೆಯಬೇಕಾಗುತ್ತಿತ್ತು. ನಾಲ್ಕಾರು ವರುಷ ಓದಿದವರು ಸರಕಾರದ ಮನ್ನಣೆ ಪಡೆಯುತ್ತಿದ್ದರು. ಶೇಷಗಿರಿ ಇದೆಲ್ಲವನ್ನೂ ಕೈಕೊಂಡ ಬಳಿಕ ಪುಣೆ ಇಂಜಿನಿಯರಿಂಗ್ ಕಾಲೇಜದಲ್ಲಿ ಶಿಕ್ಷಣ ಪಡೆದನು. ವಿದ್ಯಾರ್ಥಿ ಜೀವನದ ಕಾಲದಲ್ಲಿ ತನ್ನ ಕನ್ನಡ

ಮತ್ತು ಮರಾಠಿ ಮಿತ್ರರನ್ನು ತನ್ನ ಮಧುರ ಕಂಠದಿಂದ ಆಕರ್ಷಿಸಿದನು. ಹುಟ್ಟಿ ಬೆಳೆದ ಊರಿಂದ ದೂರವಾದ ಪುಣೆಯಲ್ಲಿದ್ದ ಸಮಯದಲ್ಲಿ ಶೇಷಗಿರಿಯ ಪರಿಚಯ ಶ್ರೀ ಚೆನ್ನಬಸಪ್ಪ ಧಾರವಾಡ (ಡೆಪ್ಯುಟಿ ಚೆನ್ನಬಸಪ್ಪ) ಇವರೊಡನೆ ಆಯಿತು. ಶೇಷಗಿರಿಯ ಸಂಗೀತ–ಪಾಂಡಿತ್ಯ ಚೆನ್ನಬಸಪ್ಪನವರ ಧ್ಯೇಯನಿಷ್ಠ ಸ್ವಭಾವ. ಪರೋಪಕಾರ ಬುದ್ಧಿಗಳು ಪರಸ್ಪರ ಮೇಲೆ ಪ್ರಭಾವ ಬೀರಿದವು. ಶೇಷಗಿರಿರಾಯರು ತಮ್ಮ ಕನ್ನಡ ಶಾಕುಂತಲದಲ್ಲಿ ಚೆನ್ನಬಸಪ್ಪನವರನ್ನು ತಮ್ಮ ಸಾಹಿತ್ಯ ಗುರು ಎಂದು ಸಂಬೋಧಿಸಿದ್ದಾರೆ.

ಬಡವರ ವಿದ್ಯೆಕಾಗಿ ತನುವಿಂ
ಮನದಿಂ ಧನದಿಂದೆ ಸಾಹಸಂ।
ಬಡುತಿಹ ಧೀರ ಚೆನ್ನಬಸವೇಶ್ವರ ದಿವ್ಯರ
ಪಾದಭೂಷಣಂ ॥

ಸಿವ್ಹಿಲ್ ಎಂಜಿನಿಯರಿಂಗ್ ಅಭ್ಯಾಸದ ನಂತರ ಶೇಷಗಿರಿರಾಯರು ಪಬ್ಲಿಕ್ ವರ್ಕ್ಸ್ ಖಾತೆಯಲ್ಲಿ ಓವ್ಹರ್‌ಸೀಯರ್ ಎಂದು ಕೆಲಸ ಮಾಡತೊಡಗಿದರು. ಸೆಕೆಂಡ್ ಗ್ರೇಡ್ ಓವ್ಹರ್‌ಸೀಯರ್ ಎಂದು ೧೮೬೯ ರ ಸುಮಾರಿಗೆ ಬಡತಿ ದೊರೆಯಿತು. ಮುಂಬೈಯ ಭೂವಿಸ್ತಾರ ಯೋಜನೆಯಲ್ಲಿ ತಮ್ಮ ನೈಪುಣ್ಯವನ್ನು ತೋರಿಸಿದರು. ಅಂದಿನ ಕಾಲದ ಯುರೋಪಿಯನ್ ಅಧಿಕಾರಿಗಳು ಶೇಷಗಿರಿರಾಯರು ಓರ್ವ ವಿಶ್ವಾಸಿತ ಮತ್ತು ಕರ್ತವ್ಯನಿಷ್ಠ ಕೆಲಸಗಾರರೆಂದು ಅಭಿಪ್ರಾಯಪಟ್ಟಿದ್ದರು. ಕಲ್ಲು ಮಣ್ಣುಗಳೊಡನೆ ಸಂಬಂಧವಿದ್ದ ಶೇಷಗಿರಿರಾಯರು ಅದರಲ್ಲಿಯೂ ರಸಿಕತೆಯನ್ನು ಕಂಡ ಪ್ರತಿಭಾವಂತರು. ಪ್ರತಿ ದಿನದ ಕೆಲಸದ ನಂತರ ತಮ್ಮ [illegible] ಮರಳಿದ ಬಳಿಕ ಮರುದಿನ ಬೇಕಾಗುವ ಸಲಕರಣೆಗಳನ್ನು ಸ್ವತಃ ತಯಾರಿಸುವದರಲ್ಲಿ ತೊಡಗಿರುತ್ತಿದ್ದರು.

ಶೇಷಗಿರಿರಾಯರ ಲಗ್ನ ಕೂಡ ಅಂದಿನ ಕಾಲದ ರೂಢಿಯಂತೆ ಚಿಕ್ಕಂದಿನಲ್ಲಿಯೇ ಜರುಗಿತು. ಹೆಂಡತಿಯ ಹೆಸರು [illegible]. ತವರೂರು ನರಗುಂದ. ಮುಂಬೈಯಲ್ಲಿದ್ದಾಗ ಎರಡು ಚಿಕ್ಕ

ಹೆಣ್ಣುಮಕ್ಕಳ ಜವಾಬ್ದಾರಿಯನ್ನು ಪತಿಗೆ ಒಪ್ಪಿಸಿ ಭೀಮಾಬಾಯಿ ಪರಲೋಕವಾಸಿಯಾದಳು. ಈ ತಬ್ಬಲಿ ಮಕ್ಕಳ ವಿದ್ಯಾರ್ಜನೆ ಹಾಗೂ ಮದುವೆಯ ಜವಾಬ್ದಾರಿಗಳನ್ನು ಇವರ ಚಿಕ್ಕ ಕೃಷ್ಣರಾಯರೇ ವಹಿಸಿದರು. [illegible] ಮನೆತನದ [illegible], ಇನ್ನೊಬ್ಬಳನ್ನು ಅವಧಾನಿ ಮನೆತನಕ್ಕೆ ಕೊಟ್ಟು ನೆರವೇರಿಸಿದರು. ಬೆಳಗಾಂವಿಯಲ್ಲಿ ಹೆಸರು ಪಡೆದ ಕೋಣನ್ನೂರ ವೆಂಕಟರಾಯರು ಡಿಸ್ಟ್ರಿಕ್ಟ್ ಇನ್ಸ್‌ಪೆಕ್ಟರ್ ಆಫ್ ಲ್ಯಾಂಡ್ ರೆಕಾರ್ಡ್ಸ್ ಎಂದು ಕೆಲಸ ಮಾಡುತ್ತಿದ್ದರು. ಇವರು ಶೇಷಗಿರಿರಾಯರ ಹಿರಿಯ ಮಗಳ ಮಗ. ಧಾರವಾಡದ ಅವಧಾನೀ ಗುರುರಾಜಾಚಾರ್ಯರು ಎರಡನೆಯ ಮಗಳ ಮಗ. ಚಿಕ್ಕ ವಯಸ್ಸಿನಲ್ಲಿ ಹೆಂಡತಿ ಸ್ವರ್ಗವಾಸಿಯಾದುದರ ಆಘಾತದ ಪರಿಣಾಮ 'ಮುಂದಿವಂ ಬಟ್ಟುವದಲ್ಲದೆನ್ನ ಮರಣಂ ಯಾವಾಗಲೋ' ಎಂಬ ಶಾಕುಂತಲ ನಾಟಕದ ಸೂಚನೆ ಪದ್ಯ ಎರಡರ ಮೇಲಿಂದ ತೋರುವುದು.

ಶೇಷಗಿರಿರಾಯರು ಮತ್ತು ಡೆಪ್ಯುಟಿ ಚೆನ್ನಬಸಪ್ಪನವರು 'ವಿವಿಧ ಜ್ಞಾನ ವಿಸ್ತಾರ' ಎಂಬ ಪ್ರಸಿದ್ಧ ಮರಾಠಿ ಮಾಸಪತ್ರಿಕೆಯ ವಾರ್ಷಿಕ ಚಂದಾದಾರರಾಗಿದ್ದರು ಎಂಬ ಸಂಗತಿ ಸೆಪ್ಟೆಂಬರ್ ೧೮೬೭ ಅಂಕ ೪ ಮತ್ತು ೫, ಪುಸ್ತಕ ೧ ರಲ್ಲಿ ಛಾಪಿಸಿದ ಚಂದಾದಾರರ ಹೆಸರಿನ ಪಟ್ಟಿಯಿಂದ ತಿಳಿದು ಬರುವದು. ಆ ಕಾಲದಲ್ಲಿ ಚೆನ್ನಬಸಪ್ಪನವರು ಬೆಳಗಾಂವಿಯಲ್ಲಿದ್ದರು. ಶೇಷಗಿರಿರಾಯರು ಮುಂಬೈಯಲ್ಲಿ ವಾಸಿಸುತ್ತಿದ್ದರು. 'ವಿವಿಧ ಜ್ಞಾನ ವಿಸ್ತಾರ'ದಲ್ಲಿ ಚಂದಾದಾರರ ಹೆಸರಿನ ಎದುರು ಬರೆದ ವಿಳಾಸ ಇದಕ್ಕೆ ಆಧಾರವಾಗಿದೆ. ಭೂಮಾಪನ ಖಾತೆಯಲ್ಲಿ ಕೆಲಸವನ್ನು ಮಾಡುತ್ತ ಶೇಷಗಿರಿರಾಯರು ಮರಾಠಿ ಭಾಷೆಯಲ್ಲಿ ಕೆಲವು ಕವನಗಳನ್ನು ಬರೆದು 'ವಿವಿಧ ಜ್ಞಾನ ವಿಸ್ತಾರ' ಪತ್ರಿಕೆಯಲ್ಲಿ ಪ್ರಕಟಿಸಿದರು. ಅವುಗಳಲ್ಲಿ 'ಕಾನಡಿ ಭಾಷಾ (ಕನ್ನಡ ಭಾಷೆ) ವಿವಿಧ ಜ್ಞಾನ ವಿಸ್ತಾರ' ಅಂಕು ೬ ಪುಸ್ತಕ ೧ ಡಿಸೆಂಬರ್ ೧೮೬೭ (ಪುಟ ೮೫ ರಿಂದ ೮೯), 'ಸ್ಫುಟ ವಿಷಯ ಬಹಿರ್ಲಾಪಿ' (ಕೋಡಿ) ಕವನಗಳು ಅಂಕು ೬, ಪುಸ್ತಕ

೧ ಡಿಸೆಂಬರ್ ೧೮೩೯ (ಪುಟ ೯೩, ಮತ್ತು ೧೧೧) ಜೈಮಿನಿಭಾರತ ಪೀಠಿಕಾ ಸಂಧೀ ಮರಾಠಿ ಅನುವಾದ ಮತ್ತು ಇತರ ಕವನಗಳು (ಅಂಕ ೨ ಪುಸ್ತಕ ೧ ಜನೆವರಿ ೧೮೩೮ ರ ಪುಟ ೧೦೯ ರಿಂದ ೧೧೨) ಮುಖ್ಯವಾಗಿವೆ.

'ಕಾನಡಿ ಭಾಷಾ' ಎಂಬ ಲೇಖನದಲ್ಲಿ ಕನ್ನಡ ಮರಾಠಿ ಮತ್ತು ಲ್ಯಾಟಿನ್ ಭಾಷೆಗಳ ಮೇಲೆ ಇವರ ಪ್ರಭುತ್ವ ಇದ್ದುದು ಕಂಡುಬರುತ್ತದೆ. ತಮ್ಮ ಈ ಲೇಖನದಲ್ಲಿ "ಪಾಶ್ಚಿಮಾತ್ಯರು ಕೈಕೊಂಡ ಎಲ್ಲ ಶೋಧಗಳು ಸಮಂಜಸವಾಗಿರುತ್ತವೆ ಎಂದು ತಿಳಿಯುವುದೂ ಮತ್ತು ಆ ಶೋಧಗಳ ಬಗ್ಗೆ ಮತ್ತಷ್ಟು ಸಂಶೋಧನೆ ಕೈಕೊಳ್ಳುವುದು ಅವಶ್ಯವಿಲ್ಲ ಎಂದು ಕಲ್ಪಿಸುವುದೂ ಮೂರ್ಖತನವಾಗಿದೆ."

"ಯಾವುದರ ಬಗ್ಗೆ ಹಿಂದುಸ್ತಾನದಲ್ಲಿ ವಾಸ್ತವಿಕವಾಗಿ ಮಾನ್ಯವಿದೆಯೋ ಸಿದ್ಧಗೊಳಿಸಲು ಯಾವ ಯಾವ ತೊಂದರೆ ಇರುವುದಿಲ್ಲವೋ ಅದು ಹಾಗಿಲ್ಲ, ತದ್ವಿರುದ್ಧವಾಗಿದೆ ಎಂಬ ವಿಚಾರಗಳ ಪಾಶ್ಚಿಮಾತ್ಯರ ಪಾಂಡಿತ್ಯದ ಪ್ರಭಾವದಿಂದ ಜನರು ಪಡೆಯುವುದು. ತದ್ವಿರುದ್ಧ ವಿಚಾರಗಳು ಮಾನ್ಯವಾದ ಬಳಿಕ ಹಿಂದುಸ್ತಾನದಲ್ಲಿ ಮೊದಲಿನಿಂದಲೂ ಸತ್ಯವಾಗಿ ಇದ್ದ ವಿಚಾರಗಳೆಲ್ಲವೂ ಅಸತ್ಯವಾಗಿ ತೋರುವವು. ಆಂಗ್ಲರು ತಾವು ನಿಶ್ಚಯಿಸಿದುದೇ ಸತ್ಯ ಎಂಬುದನ್ನು ಹಿಂದುಸ್ತಾನದ ಜನರಿಗೆ ಉಪದೇಶಿಸಲು ಪ್ರಾರಂಭಿಸುತ್ತಾರೆ."

"ಜರ್ಮನ್ ಪಂಡಿತ ಬೇನ್ಫಿ ಈತನಿಗೆ ಸಂಸ್ಕೃತ ಭಾಷೆಯನ್ನು ಅಧ್ಯಯನ ಮಾಡಿರುವೆನೆಂಬ ಗರ್ವವಿದೆ. ಟ, ಠ, ಡ, ಢ, ಣ ಇವುಗಳ ಉಚ್ಚಾರಣೆ ಹಲ್ಲುಗಳ ಮೇಲಿನ ತಾಲವ್ಯದ ಭಾಗವಾಗಿದೆ. ನಾಲಿಗೆಯನ್ನು ಮೇಲ್ಭಾಗಕ್ಕೆ ಒತ್ತಿ ಹಿಂದಿನ ಜನರು ಉಚ್ಚರಿಸುವರು ಎಂದು ಬೇನ್ಫಿ ವ್ಯಕ್ತಪಡಿಸಿದ್ದಾನೆ. ಸಂಸ್ಕೃತ ಭಾಷೆಯಲ್ಲಿಯ, ತ, ಥ, ದ, ಧ, ನ ಇವುಗಳಿಗೆ ಅನುಕ್ರಮವಾಗಿ ರಕಾರವನ್ನು ಜೋಡಿಸಿದರೆ ತ್ರ, ಥ್ರ, ದ್ರ, ನ್ರ ಹೀಗೆ ಉಚ್ಚಾರವಾಗುವದು ಎಂಬುದು ಬೇನ್ಫಿಯ ವಿಚಾರವಾಗಿರಬಹುದು. ಆದರೆ ಇವು ಪ್ರಾಥಮಿಕ ಉಚ್ಚಾರಗಳಾಗಿರುವುದಿಲ್ಲ."

"ಬೇನ್ಫಿಯ ಸಮಕಾಲೀನ ಮ್ಯಾಕ್ಸ್ ಮುಲ್ಲರ್ ಸಂಸ್ಕೃತ ಭಾಷೆಯ ದೇವನಾಗರಿ ಲಿಪಿ ಭರತ ಖಂಡದಲ್ಲಿ ಸ್ವತಂತ್ರವಾಗಿ ಅಸ್ತಿತ್ವದಲ್ಲಿ ಬಂದಿದೆ ಎಂಬುದು ಅಸಂಭವನೀಯ ಎಂದು ಹೇಳುತ್ತಾನೆ. ಅವನು ಪ್ರಾಚೀನ ಕಾಲದಲ್ಲಿಯ ದೊರೆತ ಕೆಲವು ತಾಮ್ರಪಟಗಳನ್ನು ಇದಲ್ಲಕ್ಕೆ ಆಧಾರವಾಗಿ ಇಟ್ಟುಕೊಂಡಿದ್ದಾನೆ. ದೊರೆತ ಕೆಲವು ತಾಮ್ರಪಟಗಳಲ್ಲಿ ಒಂದೆರಡು ಸಂಸ್ಕೃತ ಭಾಷೆಯಲ್ಲಿವೆ. ಬೇರೆ ತಾಮ್ರಪಟಗಳಲ್ಲಿ ಯವನರ ಲಿಪಿಯಂತೆ ಇರುವುದಲ್ಲದೆ ಆ ಲಿಪಿ ಬಲದಿಂದ ಪ್ರಾರಂಭವಾಗಿ ಎಡಗಡೆಗೆ ಮುಕ್ತಾಯವಾಗುತ್ತದೆ. ಆದುದರಿಂದ ದೇವನಾಗರಿ ಲಿಪಿಯೂ ಇದೇ ರೀತಿಯಿಂದ ಜನುಮ ಪಡೆದಿರಬಹುದು. ಇದಕ್ಕೆಲ್ಲ ವಿಶೇಷ ಆಧಾರವಾಗಿ ದೇವನಾಗರಿ ಲಿಪಿಯಲ್ಲಿ ಊಕಾರ, ಡಕಾರ ಇತ್ಯಾದಿ ಕೆಲವು ಅಕ್ಷರಗಳ ವಲವು ಎಡಭಾಗಕ್ಕೆ ಇರುವದು. ಮೂಲ ಲಿಪಿಯಿಂದ ಬೇರೊಂದು ಲಿಪಿಯು ಹೊರ ಬರುವಾಗ್ಗೆ ಅದರ ರೂಪವು ಯಾವ ಯಾವ ರೀತಿಯಿಂದ ಕ್ರಮಶಃ ಪರಿವರ್ತನೆ ಹೊಂದುತ್ತ ಸಾಗಿತು ಎಂಬುದರ ಬಗ್ಗೆ ಇನ್ನೂ ವರೆಗೆ ಸಂಶೋಧನೆ ಉಂಟಾಗಿಲ್ಲ ಎಂಬ ಸಂಗತಿಯನ್ನು ಮ್ಯಾಕ್ಸ್ ಮುಲ್ಲರ್ ಒಪ್ಪಿಕೊಳ್ಳುತ್ತಾನೆ. ಮ್ಯಾಕ್ಸ್ ಮುಲ್ಲರ್ ತನ್ನ ವಿಚಾರಗಳಿಗೆ ನೀಡಿದ ಆಧಾರಗಳ ಮೇಲಿಂದ ಆತ ನಿಶ್ಚಯಿಸಿದುದನ್ನು ನೋಡಿ ನಗೆ ಬರುವದು."

"ಯುರೋಪ ಖಂಡದ ಭಾಷಾ ಪಂಡಿತರು ಕನ್ನಡ ಭಾಷೆಯಲ್ಲಿ ಬಳಸಲಾದ ಸಂಸ್ಕೃತ ಶಬ್ದಗಳು ಹಿಂದುಗಡೆ ಸೇರಿಕೊಂಡಿವೆ. ಅದಕ್ಕೂ ಮೊದಲು ಕನ್ನಡ ಭಾಷೆಯ ಸ್ವರೂಪ ಬೇರೆಯಾಗಿತ್ತು ಎಂಬ ವಿಚಾರದವರಾಗಿದ್ದಾರೆ. ಹಾಗಾದರೆ ಅವರ ಈ ವಿಚಾರ ಉತ್ತರದ ಮರಾಠಿ ಹಿಂದಿ ಬಂಗಾಲಿ ಇತ್ಯಾದಿ ಭಾಷೆಗಳಿಗೂ ಅನ್ವಯಿಸುವುದು. ಇದರಲ್ಲಿ ಸಂಶಯವಿಲ್ಲ; ಸಂಸ್ಕೃತ ಭಾಷೆಯಿಂದ ಅಪಭ್ರಂಶವಾಗಿ ಪಾಲಿ ಭಾಷೆ ಹೊರಬಂದಿತು. ಆ ಸಮಯದ ಇತ್ತೀಚಿನ ಮರಾಠಿ ಮತ್ತು ಬೇರೆ ಭಾಷೆಗಳಲ್ಲಿ ಸಾಕಷ್ಟು ಸಂಸ್ಕೃತ ಶಬ್ದಗಳು ಪ್ರಚಾರದಲ್ಲಿದ್ದವು. ಆದರೆ ಕನ್ನಡ ಭಾಷೆಯ ಪರಿಸ್ಥಿತಿ ಈ ರೀತಿ

ಯಲ್ಲಿ ಸಾಕಷ್ಟು ಕಾಲದ ವರೆಗೆ ಅದು ಉಳಿದ ಬಳಿಕ ಪುನರಪಿ ಶುದ್ಧ ಸಂಸ್ಕೃತ ಶಬ್ದಗಳು ಸೇರಿಕೊಳ್ಳಲಾಗಿ ಪುರಾತನ ಶಬ್ದಗಳು ಬೇರೆಯಾಗಿ ಕಾಣತೊಡಗಿದವು" ಎಂದು ಹೇಳಿದ್ದಾರೆ.

ಇಂದು ಬೆಳೆದು ಬಂದ ಕನ್ನಡ ಭಾಷಾಶಾಸ್ತ್ರಕ್ಕೆ ಚುರಮುರಿಯವರ ವಿಚಾರಗಳು ಸಮಂಜಸವಾಗಿ ತೋರಲಿಕ್ಕಿಲ್ಲ. ಆದರೆ ಈ ಲೇಖನವನ್ನು ಬರೆದ ಕಾಲ ವೆಂದರೆ ಅದೆ ತಾನೆ ಹತ್ತು ವರುಷ ಮೊದಲು ಕಂಪನಿ ಸರಕಾರದ ವಿರುದ್ಧ ಹಿಂದುಸ್ಥಾನದವರು ಕೈಕೊಂಡ ಕೊನೆಯ ಸ್ವಾತಂತ್ರ್ಯ ಸಂಗ್ರಾಮ. ಆದರೂ ತಮ್ಮ ಈ ಲೇಖನದಲ್ಲಿ ಯಾರಿಗೂ ಬೆದರದೆ ಅವರು ವ್ಯಕ್ತಪಡಿಸಿದ ವಿಚಾರಗಳನ್ನು ಅಳವಡಿಸಿದ ಶೇಷಗಿರಿರಾಯರು ಮೆಚ್ಚಿನ ಧೈರ್ಯವಂತರೇ ಸರಿ. ಮರಾಠಿ ಭಾಷೆಯಲ್ಲಿದ್ದ ಚುರಮುರಿಯವರ ಸಂಪೂರ್ಣ ಲೇಖನದ ಪ್ರತಿ ನನ್ನಲ್ಲಿದೆ. ಈ ವರೆಗೆ ಕನ್ನಡ ಸಾಹಿತ್ಯಕ್ಕೆ ಈ ಲೇಖನ ದೊರಕಿದ್ದಿಲ್ಲವೆಂದೂ ಕಾಣುವುದು.

ಚುರುಮುರಿಯವರು ಮರಾಠಿ ಭಾಷೆಯಲ್ಲಿ "ಸ್ಫುಟ ವಿಷಯ-ಬಹಿರ್ಲಾಪಿಕಾ (ಕೋಡಿ)" ಎಂಬ ಶೀರ್ಷಿಕೆಯಲ್ಲಿ ಹದಿನೇಳು ಕವಿತೆಗಳನ್ನು ರಚಿಸಿ ಪ್ರಕಟಿಸಿದ್ದಾರೆ. ಸಂಪೂರ್ಣ ಕವಿತೆಗಳು ದೊರೆತಿವೆ. ಅವುಗಳಲ್ಲಿ ಕೇವಲ ನಾಲ್ಕು ಕವಿತೆಗಳ ಉಲ್ಲೇಖ ಕೈಕೊಳ್ಳಲಾಗಿದೆ. ಕನ್ನಡದಲ್ಲಿ ರೂಪಾಂತರಿಸುವುದರಿಂದ ಮೂಲ ರಚನೆಗೆ ಧಕ್ಕೆ ತಗಲಬಹುದು ಎಂಬ ವಿಚಾರದಿಂದ ಇದ್ದಕ್ಕಿದ್ದಂತೆ ಭಾವಾರ್ಥ ದೊಡನೆ ತೋರಿಸಲಾಗಿದೆ.

**(೧) ಜ್ಯಾಂಚೆ ವರ್ಣನ ವಿಸ್ತರೇ ಚಿ ಕರಿತೀ**
**ತಾ ಯಂತ್ರಶಾಸ್ತ್ರೀ ಜನೀ। ಜ್ಯಾಂಚೆ**
**ಜಾಣುನಿ ಪೂರ್ಣ ತಾಮ್ರ ಮುಖಿ**
**ಜೇ ಗೇಲೇ ಧರಾ ವ್ಯಾಪುನಿ ॥**
**ಶಸ್ತ್ರೇ ಐಸಿ ಧರೀ ಕರೀ ಸತತ ತ್ಯಾ ಶಕ್ತೀಸ**
**ಮೀ ವಂದಿತೋ। ಭಾವೆ ನಮ್ರ ಹಣೆ**
**ಮತೀಸ ದೃಢತಾ ನಿರ್ವಿಘ್ನತಾ ಮಾಗತೊ॥**

ಈ ಕವನದಲ್ಲಿ ಕವಿಯು ಯಂತ್ರಶಾಸ್ತ್ರದಲ್ಲಿ ಉಪಯೋಗಿಸುವ ಸಲಕರಣೆಗಳನ್ನು ವಿಷ್ಣುವಿನ ಶಂಖ, ಚಕ್ರ, ಗದೆ, ಪದ್ಮಕ್ಕೆ ಹೋಲಿಸಿ ಪರಮಾತ್ಮನ ಆಶೀರ್ವಾದವನ್ನು ಬಯಸಿದ್ದಾನೆ.

(೨) ಭೂಮಿತ ವಾಸ ಕರಿತೊ ಕ್ರಿಮಿ ಕಿಂ
ನ ಜಾಣಾ। ರಾನೋ ಮಳ್ಯಾತ ಫಿರತೊ
ಪಶು ಕಿಂ ನ ಜಾಣಾ॥
ಆಕಾಶಿಚಾಲತ ಹಿ ಪಕ್ಷಿ ನವ್ಹೇಚಿ ಜಾಣಾ।
ಸಾಂಗೇಲ ತೋಚಿ ಬಹು ಥೋರ
ವಿಚಾರಿ ಜಾಣಾ॥

ಭಾವಾರ್ಥ :— ಭೂಮಿಯೊಳಗೆ ವಾಸಿಸುತ್ತೇನೆ. ಕ್ರಿಮಿಕೀಟಕವಲ್ಲ, ಅರಣ್ಯ ಹೊಲಗಳಲ್ಲಿ ತಿರುಗಾಡುತ್ತೇನೆ, ಪಶುವಲ್ಲ; ಆಕಾಶದಲ್ಲಿ ಹಾರಾಡುತ್ತೇನೆ, ಪಕ್ಷಿಯಲ್ಲ; ನಾನಾರು ? ವಿಚಾರವಂತರೆ ಹೇಳಿರಿ. ಈ ಒಗಟಿನ ಅರ್ಥ ನೀರು.

(೩) ಆಲಾಸಿ ತೂ ಮಜ ಕಡೆ
ಮನಮೋಹುನೀಯಾ॥
ತೋ ಬೈಸೂನೀ ಟಿಪತಸೆ ತುಜ
ಮೃತ್ಯುದ್ವಾರಿಯಾ॥ ಮಾರಷ್ಯಾ ಅಸೂ ದುಃಖ
ಹಲಾ ತುಜಲಾಗಿ ಹೋಲಾ। ಮಾಗೀಲ
ಜಾ ಮಜ ಮುಳೀ ಮುಕಸೀ ಜಿವಾಲಾ॥

ಭಾವಾರ್ಥ— ಸಂದರ್ಭ:— ಮೀನುಗಾರ ತನ್ನ ಬಲೆಗೆ ಒಂದು ಕೀಟವನ್ನು ಕಟ್ಟಿ ಮೀನು ಹಿಡಿಯುತ್ತಾನೆ. ಆ ಸಮಯ ಕೀಟವು ಮೀನಕ್ಕೆ ಸಂಬೋಧಿಸಿ ಮೋಹ ಪ್ರವರ್ತನಾಗಿ ನೀನು ಬಂದಿರುವಿ. ನಾನು ನಿನ್ನ ಮೃತ್ಯುವಿನ ದಾರಿಯನ್ನೇ ಕಾಯುತ್ತಿರುವೆ. ನಿನ್ನ ಜೀವವನ್ನು ವ್ಯರ್ಥವಾಗಿ ಕೊಡಬೇಡ. ದುಃಖವನ್ನುಂಟು ಮಾಡಬೇಡ. ಹೊರಟು ಹೋಗು ಎಂದು ನುಡಿದು ಒಂದು ಕಲ್ಪನೆಯ ಹಿನ್ನೆಲೆಯಲ್ಲಿ ಈ ಕವನವನ್ನು ರಚಿಸಿದ್ದಾರೆ.

(೪ "ನಾಜಣಿಕ ಮೀ ಅಸುನೀ ದೇಖೊನಿ
ವೀರ ಹೋತಿ। ಮಾಗೋನಿ ಮರ್ಕಟ
ಜಸಾ ದಿಸಸೀ ಜನಾಸೀ॥
ಪಾಹೋನಿ ಚಂಡಮೃಗ ಮ್ಯರಿಸೀ
ಮುಖಾಸೀ। ಮೀ ರಮ್ಯ ನಿರ್ಮಲ
ಅಸೀ ಅಸತಾ ಕಶಾಸೀ॥

ತಾತ್ಪರ್ಯ:— ಕನ್ನಡಿಯಲ್ಲಿ ಓರ್ವ ತರುಣ ತನ್ನ ಪ್ರತಿಬಿಂಬವನ್ನು ನೋಡತೊಡಗಿದ್ದಾನೆ. ಕನ್ನಡಿಯು ಆ ತರುಣನನ್ನು ಉದ್ದೇಶಿಸಿ ನುಡಿಯುವುದು ಎಂಬ ಕಾಲ್ಪನಿಕ ಹಿನ್ನೆಲೆ ಈ ಕವನಕ್ಕೆ ಇರುವದು. ಕನ್ನಡಿಯನ್ನು ನೋಡುವ ತರುಣ ಮೊದಲು ಮೀಸೆ ಮೇಲೆ ಕೈಯಾಡಿಸಿ ಬಳಿಕ ಹಲ್ಲು ಕಿರಿದು ನಾಲಿಗೆ ಹೊರಗೆ ತೆಗೆಯುವ.

ಮರಾಠಿ ಭಾಷೆಯಲ್ಲಿ ಅನುವಾದಿಸಿದ "ಜೈಮಿನಿ ಭಾರತ ಪಿಠಿಕಾ ಸಂಧಿ"ಗೆ ಚುರು ಮುರಿಯುವರು ಒಂದು ಪ್ರಸ್ತಾವನೆಯನ್ನು ಬರೆದಿದ್ದಾರೆ. ಇದುವರೆಗೆ ಈ ಸಂಗತಿ ಕನ್ನಡ ಸಾಹಿತಿಗಳಿಗೆ ಗೊತ್ತಿದ್ದಂತೆ ತೋರುವದಿಲ್ಲ. ಹೀಗಾಗಿ ಅದರ ಕನ್ನಡ ಅನುವಾದವನ್ನು ಕೆಳಗೆ ತೋರಿಸಿದೆ.

"ಅರ್ವಾಚೀನ ಕಾಲದ ಕನ್ನಡ ಸಾಹಿತ್ಯದಲ್ಲಿ ಹೆಸರು ಪಡೆದ ಉತ್ತಮ ಕವಿಗಳಲ್ಲಿ 'ಲಕ್ಷ್ಮೀಶ' ಕವಿಯು ಶ್ರೇಷ್ಠನೆಂದು ತಿಳಿಯಲಾಗಿದೆ. ಆತನು ರಚಿಸಿದ ಕವಿತೆ ಯಾವ ಬಗೆಯದ್ದಾಗಿದೆ ಎಂಬುದನ್ನು ನಮ್ಮ ಮಹಾರಾಷ್ಟ್ರ ದೇಶದ ಪಂಡಿತರಿಗೆ ಅರಿವಾಗಲಿ ಎಂಬ ಉದ್ದೇಶದಿಂದ ಆತನ 'ಜೈಮಿನಿ ಭಾರತ' ಉದ್‌ಗ್ರಂಥವನ್ನು ನನ್ನ ಶಕ್ತಿ ಮೇರೆಗೆ ಮರಾಠಿ ಭಾಷೆಯಲ್ಲಿ ಅನುವಾದ ಕೈಕೊಳ್ಳತೊಡಗಿರುವೆನು ..."

"ಒಂದು ಭಾಷೆಯಲ್ಲಿಯ ಕವನವನ್ನು ಬೇರೊಂದು ಭಾಷೆಯಲ್ಲಿ ತರುವಾಗ್ಗೆ ಅದರಲ್ಲಿಯ ಅರ್ಥದಷ್ಟಾದರೂ ಮೂಲ ರಸವನ್ನು ಕಾಯ್ದುಕೊಳ್ಳುವುದಕ್ಕೆ ಸಾಕಷ್ಟು ದುಸ್ತರವಾಗುತ್ತದೆ. ಅದರಲ್ಲಿ ಕನ್ನಡ ಭಾಷೆಯ ಕವಿತೆಯಲ್ಲಿ ಪ್ರಾಸದ ಸ್ಥಾನ ಶ್ಲೋಕದ ಪ್ರತಿ ಪದ್ಯದ ಎರಡನೆಯ ಅಕ್ಷರವಾಗಿದೆ. ಮತ್ತು ಪ್ರತಿ ಶ್ಲೋಕದಲ್ಲಿ ದೊಡ್ಡ ಆರು ಚರಣಗಳಿರುತ್ತವೆ. ಮೂರು ಮೂರು ಚರಣಗಳ ಒಂದೊಂದು ಭಾಗ, ಪ್ರತಿ ಭಾಗದಲ್ಲಿ ೭೨ ಮಾತ್ರಾಗಣಗಳು ಇರುತ್ತವೆ. ಹೀಗಾಗಿ ೧೪೪ ಮಾತ್ರಾಗಣಗಳ ಒಂದು ಶ್ಲೋಕ ಸಿದ್ಧವಾಗುತ್ತದೆ. ಮರಾಠಿ ಭಾಷೆಯಲ್ಲಿ ಒಂದು ಪದ್ಯದಲ್ಲಿ ೩೬ ಮಾತ್ರಾಗಣಗಳಿರುವ ವೃತ್ತಗಳನ್ನು ಪ್ರಯೋಗಿಸಬೇಕಾಗುವುದು. ಆವಾಗ್ಗೆ ಈ ಕವಿಯ ಶಬ್ದ ಪ್ರಯೋಗಗಳನ್ನು ಮರಾಠಿಯಲ್ಲಿ ತರಲು ಬರುವದು. ಆದರೆ ಇಂತಹ ವೃತ್ತಗಳು ಮರಾಠಿ ಭಾಷೆಯಲ್ಲಿ ಪ್ರಚಲಿತವಿದ್ದಂತೆ ಕಾಣುವದಿಲ್ಲ. ಕನ್ನಡ ಭಾಷೆಯಲ್ಲಿ ಹೆಚ್ಚಾಗಿ ಪ್ರತಿ ಶ್ಲೋಕದಲ್ಲಿ ವಾಕ್ಯದ ಪೂರ್ಣಾರ್ಥವು ಬಂದಿರುವುದು ಎಂಬುದು ಎಲ್ಲರಿಗೂ ಅರಿತ ಸಂಗತಿ. ಭಾಷಾಂತರ ಮಾಡುವಾಗ್ಗೆ ಒಂದು ಶ್ಲೋಕವನ್ನು ವಿಚ್ಛೇದಿಸಿ ಎರಡು ಕೈಕೊಂಡಲ್ಲಿ ಅರ್ಥದ ಸಂದರ್ಭದಲ್ಲಿ ಸಾಕಷ್ಟು ತೊಂದರೆ ಉಂಟಾಗಿ ಮೂಲದಲ್ಲಿದ್ದ ಸರಸವು ಕಡಿಮೆಯಾಗುವುದು. ಈ ಹಿನ್ನೆಲೆಯಲ್ಲಿ ಪ್ರತಿ ಶ್ಲೋಕಕ್ಕೆ ಒಂದು ಶ್ಲೋಕವನ್ನು ತೋರಿಸಿ ಭಾಷಾಂತರ ಕೈಕೊಂಡುದರಿಂದ ಕೆಲವು ಅಲಂಕಾರ ಶಬ್ದಗಳನ್ನು ಬಿಡಲಾಗಿದೆ. ಈ ಕವಿಯ ರಚನೆಯಲ್ಲಿ ಹೆಚ್ಚಾಗಿ ಜೋಡಾಕ್ಷರ ಅಥವಾ ದ್ವಿತ್ವಾಕ್ಷರಗಳನ್ನು ಬಳಸಿದ (ಣ್ಮ ದ್ರ ಳ ದ ತ್ತ ಇತ್ಯಾದಿ) ಕಠಿಣ ಪ್ರಾಸಗಳಿರುತ್ತವೆ. ಅಂತಹ ಪ್ರಾಸಗಳು ಮರಾಠಿ ಭಾಷೆಯಲ್ಲಿ ನನ್ನಂತಹ ಪ್ರಾರಂಭಿಕನಿಗೆ ಸಾಧಿಸುವದು ಕಠಿಣವಾಗಿದೆ. ಉದಾಹರಣೆಗಾಗಿ ಸಾಕಷ್ಟು [illegible] ಒಂದು ಶ್ಲೋಕವನ್ನು ತೋರಿಸಿ ಕೊಡುವೆನು.

ಎತ್ತಿಬಹ ಸತ್ತಿಗೆಯ ಮುತ್ತಂಗಳೆತ್ತಲುಂ।
ಕತ್ತಲಿಸೆ ಪೊತ್ತಮಸವೆತ್ತ ಬಲ್ಗತ್ತಿಗಳ!
ಕೆತ್ತು ಭಟರೆತ್ತಿ ಜಡಿಯುತ್ತಿರಲ್ಕತ
ಬೆಳ್ಗತ್ತು ಪವ್ವ ಮತ್ತೆ ಬಲಕ್ಕೆ॥
ಸುತ್ತಲುಂ ಕೆತ್ತೆನೊಲ್ಕುತ್ತಗಜ ದೆತ್ತಲುಂ
ಮತ್ತೆ ನಡೆಯುತ್ತಿರಲ್ ನೊತ್ತಿ ನಿಲಿಸುತ್ತಿರಲ್
ಪತ್ತು ಚಮರೋತ್ಥಿತ ಮರುತ್ತಲೆ
ಯೊಳುತ್ತಮ ಹಿಮೋತ್ತರಂ ಬಿತ್ತರಿಸಿತು॥

"ಜೈಮಿನಿ ಭಾರತದ ಕೃತಿಯಲ್ಲಿ ಎರಡು ಸಾವಿರದಷ್ಟು ಪದ್ಯಗಳಿವೆ. ಅವುಗಳನ್ನು ಸಮಯಕ್ಕನುಸರಿಸಿ ಸ್ವಲ್ಪ ಸ್ವಲ್ಪ ಭಾಗಗಳಲ್ಲಿ ಭಾಷಾಂತರಿಸಿ ಈ ಪತ್ರಿಕೆಗೆ ಕೊಡುವೆನು. ವಿದ್ವಜ್ಜನರಲ್ಲಿ ನಾನು ಈ ರೀತಿಯಾಗಿ ಪ್ರಾರ್ಥಿಸುವೆ:

ಕನ್ನಡ ಸಾಹಿತ್ಯಾರಣ್ಯದಲ್ಲಿ
[illegible]ತ್ವ ಮೋಹಿನಿಯಾದ ಈ ಕೃತಿಯನ್ನು
ಮರಾಠಿ ವಾಚಕರಿಗೆ ನೀಡಿರುವೆನು,

ವಿದ್ವಜ್ಜನರು ಇದನ್ನು ಅವಲೋಕಿಸಿ ನೀಡಿದ ಪ್ರಶಂಸೆ ಮಹಾಸಾಗರದಲ್ಲಿಯ ಒಂದು ಬಿಂದುವಾಗಿದೆ."

(ಮೂಲ ಮರಾಠಿ ಭಾಷೆಯಲ್ಲಿ ಕವನ ರೂಪದಲ್ಲಿ ಕೆಳಗಿನಂತಿದೆ.)

"ಅಪೂರ್ವ ಘನ ವಿಸ್ತಾರಕ ಅಸೆ
ಮಿಳಾಲೇಚಕೀ। ಮಲಾ ಸುಫಲ ಹೇ
ನವೆ ಸುರಿಸ, ರಾನ ಕರ್ನಾಟಕೀ।
ನ ಮಾಯೀನ ಚಿ ಫಿಲ್ಲ ಪಾಹುಬ
ಜನಾಂಸಿ ಶಾಬಾಸಕೀ। ಜಿಲಾ ವಿಕಿನ ತೀಚ
ಮಾಹಿನ ಚಿಮಚ್ಚ್ರಮಾ ದಿಡಕಿ"॥

"ವಿವಿಧ ಜ್ಞಾನ ವಿಸ್ತಾರ" ಪತ್ರಿಕೆಯಲ್ಲಿ ಪ್ರಕಾಶಿತವಾಗುತ್ತಿದ್ದ ಶೇಷಗಿರಿರಾಯರ ಲೇಖನಗಳನ್ನು ಅವಲೋಕಿಸಿದ ಡೆಪ್ಯುಟಿ ಚೆನ್ನಬಸಪ್ಪನವರು ಇವರಲ್ಲಿ ಅಡಗಿದ ಪ್ರತಿಭಾ ಶಕ್ತಿ [illegible] ಅರಿತರು. ಕನ್ನಡ ಭಾಷೆಯ ಸ್ವರೂಪ, ಸತ್ವಗಳ ಬಗ್ಗೆ ತಿಳಿಹೇಳಿ ಕನ್ನಡದಲ್ಲಿ ಉತ್ತಮ ಕೃತಿಗಳನ್ನು ರಚಿಸಿ ಪ್ರತಿಯೊಬ್ಬ ಸುಶಿಕ್ಷಿತನು ಭಾಷಾಪ್ರೇಮವನ್ನು ಸಮಾಜ ಕಲ್ಯಾಣಕ್ಕಾಗಿ [illegible] ಎಂದು ಎಚ್ಚರಿಸಿದರು. ಇದರ ಪರಿಣಾಮವೋ ಏನೋ ಶೇಷಗಿರಿರಾಯರು ಮರುವರ್ಷವೇ (೧೮೬೯) ಕನ್ನಡ ಭಾಷೆಯಲ್ಲಿ ಮಹಾಕವಿ ಕಾಳಿದಾಸನ ಶಾಕುಂತಲ ನಾಟಕವನ್ನು ತಮ್ಮ ಸ್ವತಂತ್ರ ಪ್ರತಿಭೆಯಿಂದ ಕನ್ನಡಿಸಿ ೧೮೭೦ ರಲ್ಲಿ 'ಮುಂಬೈ ಎಜ್ಯುಕೇಶನಲ್ ಸೊಸಾಯಿಟಿ ಪ್ರಿಂಟಿಂಗ್ ಪ್ರೆಸ್, ಬಾಯಖಳಾ' ಮುಂಬೈ [illegible] ಮುದ್ರಿಸಿ ಪ್ರಕಟಿಸಿದರು. ಈ ನಾಟಕದ [illegible] ಒಂದು [illegible] ಪದ್ಯದಲ್ಲಿ ಹೀಗೆ [illegible]:

"ನೂರಾನಾಲ್ಕದರಿಪ್ಪರಿಂ ಗುಣಿಸು ತೊಂಬತ್ತೈದನು ವರ್ಗಗೈ ತೋರಲಬ್ಧಗಳಲ್ಲಿಯಂ ಕಳೆವನು ಶುಕ್ಲಾಬ್ಧಿಕಾ ಪಕ್ಷದೊಳ್ 'ತಾರಾ [illegible] ಮಾಘಭಿತ್ರ ತೃವನೋರ್ಣಿವ್ವರಂ ದಿಂದಿರಾ ವಾರಕ್ಕೀ ಕೃತಿ ಪೂರ್ಣವಾಯ್ತು ಜಗದಾರಾಶಿಯಿಂ ಶೇಷನಿಂ." (೧೦೪'— ೯೫' = ೧೭೯೧ + ೭೯ = ೧೮೭೦) [illegible] ವಾಹನ ಶಕೆ ೧೭೯೧ ಕ್ರಿ.ಶ. ೧೮೭೦ ಎಂದು ಮೊದಲಿನ ಚರಣದ ಅರ್ಥವಾಗುವುದು. ಉಳಿದ ಚರಣಗಳು ಶುಕ್ರವಾರ ಪುಷ್ಯಮಾಸ ಸಂಕಷ್ಟಿ ಎಂಬ ಅರ್ಥವನ್ನು ತೋರಿಸುತ್ತವೆ.

ಇಂದು ನಮಗೆ ಶೇಷಗಿರಿರಾಯರ ಮೊದಲಿನ ಆವೃತ್ತಿ ನೋಡಲು ದೊರೆಯುವುದು ದುರ್ಲಭ. ಆದರೆ ಮೊದಲಿನ ಆವೃತ್ತಿಯ ಒಂದು ಪ್ರತಿ "ಇಂಡಿಯಾ ಆಫೀಸ್ ಲೈಬ್ರರಿ ಆ್ಯಂಡ್ ರೆಕಾರ್ಡ್ಸ್, ಲಂಡನ್" ನಲ್ಲಿ ಕಾಯ್ದಿಡಲಾಗಿದೆ. ಈ ಕೃತಿ ರಚಿತವಾದದ್ದು ಕವಿಯ ನಲವತ್ಮೂರನೆಯ ವಯಸ್ಸಿನಲ್ಲಿ. ಈ ನಾಟಕದ ಸೂಚನೆ (ಮುನ್ನುಡಿ) ಪದ್ಯದಲ್ಲಿ ಶೇಷಗಿರಿರಾಯರು ಆತ್ಮವಿಶ್ವಾಸದಿಂದ ತಮ್ಮ ಶಾಕುಂತಲ ನಾಟಕದ ಬಗ್ಗೆ ಕೆಳಗಿನಂತೆ ಹೇಳಿದ್ದಾರೆ.

"ಕವಿ ಜನರೆಲ್ಲ ನೋಡಬಹುದೆನ್ನಯ ಕೃತ್ಯವನ್ನು ದೇಶದೊಳ್ ವಿವಿಧ ಜನರ್ಕಳಿಂ ವಿವಿಧ ಭಾಷೆಯೊಳಂತರಿಸಿರ್ಪುವಂಗಳಂ। ಸವಿಯೊಳು [illegible] ಕವಿತೆಯ ಗಂಡು ಮೆಟ್ಟು ಕರನಾಟಕ ಬಿಟ್ಟು ತೆರಳ್ದು ಪೋಗುವೆಂ॥"

ಇಂದಿನ ವರೆಗೆ ಶೇಷಗಿರಿರಾಯರ ಕನ್ನಡ ಶಾಕುಂತಲವು ಕೇವಲ ನಾಲ್ಕು ಬಾರಿ ಮುದ್ರಿತವಾಗಿದೆ. ಇದೊಂದು ವಿಷಾದದ ಸಂಗತಿಯೇ ಆಗಿದೆ. ಈ ಕೃತಿಯ ಎರಡನೆಯ ಆವೃತ್ತಿ ೧೮೮೨ ರಲ್ಲಿ ಶೇಷಗಿರಿರಾಯರ ಮರಣಕ್ಕಿಂತ ಮೊದಲು ಜ್ಞಾನವರ್ಧಕ ಮುದ್ರಣಾಲಯ ಧಾರವಾಡದಲ್ಲಿ ಮುದ್ರಿತವಾಯಿತು. ಸ್ವತಃ ಲೇಖಕರೇ ಮೊದಲಿನ ಆವೃತ್ತಿಯಲ್ಲಿದ್ದ ಕೆಲವು ಪದಗಳನ್ನೂ ಸೂಚಿಸಿದ ಧಾಟಿಗಳನ್ನೂ ತೆಗೆದು ಹಾಕಿದ್ದಾರೆ. ಈ ಬಗ್ಗೆ ಲೇಖನದ ಉಳಿದ ಭಾಗದಲ್ಲಿ ವಿಚಾರ ಕೈಕೊಳ್ಳಲಾಗಿದೆ. ಮೂರನೆಯ ಆವೃತ್ತಿ ೧೯೫೩-೫೪ ರಲ್ಲಿ ಬೆಳಗಾಂವಿಯ ಶ್ರೀ ಅನಾಡ ಚೆನ್ನವೀರಪ್ಪನವರ ಕರ್ನಾಟಕ ಬುಕ್ [illegible] ನೆಯ ಆವೃತ್ತಿ ಬೆಳಗಾಂವಿಯ [illegible] ಗ್ರಂಥಮಾಲೆಯ [illegible]

ಪ್ರಕಾಶಗೊಂಡಿತು. ನಾಲ್ಕನೆಯ ಆವೃತ್ತಿಗೆ ಮುದವೀಡು ಅವರು ಪ್ರಸ್ತಾವನೆ ಬರೆದಿದ್ದಾರೆ.

ಧಾರವಾಡ ತಾಲೂಕಿನ ಮದಿಹಾಳ ಗ್ರಾಮದ ಪ್ರಾಚ್ಯ ಕ್ರೀಡಾ ಸಂವರ್ಧಕ ಮಂಡಳಿ ಕ್ರಿಸ್ತಶಕ ೧೮೯೬ ರಿಂದ ಪ್ರತಿ ವರುಷ ಒಂದು ಕನ್ನಡ ನಾಟಕವನ್ನು ಅಭಿನಯಿಸುತ್ತಿತ್ತು. ಭಾರತ ಕಲೋತ್ತೇಜಕ ಸಂಗೀತ ಸಮಾಜ ಎಂಬ ಹೆಸರನ್ನು ಧರಿಸಿದುದು ಸುಮಾರು ೧೮೯೭ರಲ್ಲಿ. ಇದಕ್ಕೂ ನಾಲ್ಕಾರು ವರುಷ ಮೊದಲು ಅಂದರೆ ೧೮೯೧ ಅಥವಾ ೧೮೯೩ ರ ಸುಮಾರಿಗೆ ಬಾದಾಮಿಯ ಕೆಲವು ಜನ ಸಂಗೀತ ಪ್ರೇಮಿಗಳು ಶ್ರೀ ಮಂಗಳಿ ಶ್ರೀನಿವಾಸರಾಯರ ನೇತೃತ್ವದಲ್ಲಿ ಚುರಮುರಿಯವರ ಶಾಕುಂತಲ ನಾಟಕವನ್ನು ಪ್ರಯೋಗಿಸಿದರು. ಶ್ರೀ ಮುದವೀಡು ಕೃಷ್ಣರಾಯರು ೧೮೯೯ ರಲ್ಲಿ ಬಾಗಲಕೋಟೆಗೆ ಭೆಟ್ಟಿ ಕೊಟ್ಟಿದ್ದರು. ಆ ಸಮಯ ಶ್ರೀ ಮಂಗಳಿ ಶ್ರೀನಿವಾಸರಾಯರು ಮತ್ತು ಬಾಗಲಕೋಟೆಯ ಇತರ ಪ್ರತಿಷ್ಠಿತರು ಈ ನಾಟಕದ ರಂಗ ಪ್ರಯೋಗ ಶ್ರೀನಿವಾಸರಾಯರ ನೇತೃತ್ವದಲ್ಲಿ ಕೈಕೊಂಡಿರುವನ್ನು ನೋಡಿದರು. ಅದರಂತೆ ವಿಜಾಪುರದಲ್ಲಿಯೂ ಶ್ರೀನಿವಾಸರಾಯರ ನೇತೃತ್ವದಲ್ಲಿ ಜರುಗಿತು. ಹೀಗಾಗಿ ಚುರುಮುರಿ ರಾಯರು ತಮ್ಮ ಈ ನಾಟಕವನ್ನು ರಂಗಭೂಮಿಯ ಮೇಲೆ ಪ್ರದರ್ಶಿಸುವುದನ್ನು ಕಂಡಿಲ್ಲ. ಭಾರತ ಕಲೋತ್ತೇಜಕ ಸಂಗೀತ ಸಮಾಜ ಧಾರವಾಡದ ವತಿಯಿಂದ ಈ ನಾಟಕವು ಫೆಬ್ರುವರಿ ೧೯೦೫ರಲ್ಲಿ ಧಾರವಾಡದ ವಿಕ್ಟೋರಿಯಾ ಥಿಯೇಟರಿನಲ್ಲಿ ರಂಗ ಪ್ರದರ್ಶನವನ್ನು ಪಡೆಯಿತು. ಈ ನಾಟಕವನ್ನು ನೋಡಿದ ಶೇಷಗಿರಿ ರಾಯರ ರಬ್ಯನ ಮಗ ಶ್ರೀ ಗೋವಿಂದರಾವ್ ಚುರುಮುರಿ ನಲಿದಾಡುತ್ತ "ನನ್ನ ಅಣ್ಣನೇ ಪುನಃ ಹುಟ್ಟಿ ಬಂದು ತನ್ನ ಮೆಚ್ಚಿನ ಹಾಡುಗಳನ್ನು ಹೇಳುತ್ತಿದ್ದಾನೆ. ಇಪ್ಪತ್ತು ವರುಷಗಳ ಹಿಂದೆ ಸ್ವರ್ಗಸ್ಥರಾದ ನಮ್ಮ ಅಣ್ಣಂದಿರ ಕೃತಿಯನ್ನು

[illegible]ಯಿಗೆ ರಂಗು ಭಾರತ ಕಲೋತ್ತೇಜಕ [illegible] ಸಮಾಜದವರು ತಮಗೆ ಪ್ರತ್ಯಕ್ಷ ದರ್ಶ[illegible] ಮಾಡಿಸಿದ ಹಾಗಾಯಿತೆಂದು ಸಾರ್ವ[illegible] ಸಮಾಜವನ್ನು ಅಭಿನಂದಿಸಿ [illegible]ಮಾನವನ್ನು ಕೊಟ್ಟರು. ಹೀಗಾಗಿ ಈ [illegible]ಕವು ಕನ್ನಡ ರಂಗಭೂಮಿಯ ಮೇಲೆ [illegible] 20 ರಿಂದ 25 ವರ್ಷ ದಾರಿ ಕಾಯ[illegible]. ಆದರೂ ಅಂದಿನ ಕಾಲದ [illegible]ಕ್ಷಿಡ ಜನಜೀವನದ ಮೇಲೆ ಸಾಕಷ್ಟು ಪ್ರಭಾವ [illegible]ದರ ಬಗ್ಗೆ ಶ್ರೀ ಮುದವೀಡು [illegible] ಕೆಳಗಿನಂತೆ ಹೇಳಿದ್ದಾರೆ: "ಆಗ ಸುಸಂಸ್ಕೃತರ ಮನೆ ಮನೆಗಳಲ್ಲಿ ಚುರುಮುರಿಯವರ ಶಾಕುಂತಲ [illegible] ನೋಡಲಿಕ್ಕೆ ದೊರೆಯುತ್ತಿತ್ತು. ಗೌರಿ-ಗಂಗೆಯರ ಆರತಿಯ ಪದಗಳಂತೆ 'ಪತಿಯ ಮಂದಿರಕೆ ನೀ ಪೋದ ಮ್ಯಾಲಿನಿತು ಪದ್ಧತಿ [illegible] ನಡೆಸಬೇಕಮ್ಮ ಕೇಳು' ಎಂಬುದಾಗಿ ಕಣ್ವ ಋಷಿಗಳು ಶಕುಂತಲೆಗೆ ಮಾಡಿದ ಉಪದೇಶದ ಪದ್ಯವು ಸುಶಿಕ್ಷಿತ ಪ್ರೌಢ ಗೃಹಿಣಿಯರ ಬಾಯಿಂದ ಕೇಳಲು ದೊರೆಯುತ್ತಿತ್ತು. [illegible]ವಂತರ ಉಲ್ಲಾಸ ಕೂಟಗಳಲ್ಲಿ, ಸಂಗೀತ ಸಮಾರಂಭಗಳಲ್ಲಿ ಶಾಕುಂತಲದ ಪದ್ಯಗಳನ್ನು ಗಾಯಕ[illegible] ಕೇಳಿ, ಸಂತೋಷಪಟ್ಟು ತಲೆ [illegible] ಸಭಿಕರ ತಂಡಗಳು ಈ ಭಾಗದಲ್ಲೆಲ್ಲ ಕಣ್ಣಿಗೆ ಬೀಳುತ್ತಿದ್ದವು. ಮುಂಜಿ, ಮದುವೆಗಳ ಮಂಗಲ ಪ್ರಸಂಗದಲ್ಲಾಗಲಿ, ವಸಂತೋತ್ಸವದ ಹಂದರಗಳಲ್ಲಾಗಲಿ ನಡೆಯು[illegible] ಗಾಯನ, ನರ್ತನ ಪ್ರಸಂಗಗಳಲ್ಲಿ, "ಬಾ [illegible] ಮೋಹನ್ನ ಆಯಾಸವನು ಪಡಬ್ಯಾಡಿ [illegible] ಚಿತ್ತ ಸಂಧಿಯೊಳು" ಮೊದಲಾದ ಪದಗಳನ್ನು ಸುಸ್ವರವಾಗಿ ಸರಸವಾಗಿ ಹಾಡುವ [illegible]ಯರನ್ನು ನೋಡಿ ರಸಭಾವಗಳನ್ನು ಕುಶಲತೆಯಿಂದ ವಿಶದಪಡಿಸುವ ಅವರ ಹಾಡುಗಾರಿಕೆಯನ್ನು ಕೇಳಿ ಬೆರಗಾಗಿ ಮೈಮರೆತು ಕುಳಿತಂಥ ಅನೇಕ ಪ್ರಸಂಗಗಳು ನನ್ನ ಸ್ವಂತ ಅನುಭವಕ್ಕೆ ಬಂದುಹೋಗಿವೆ. ಜಯದೇವ ಕವಿಯ 'ಗೀತಗೋವಿಂದ'ದ ಒಂದೆರಡು ಅಷ್ಟಪದಿಗಳನ್ನೂ, ಶಾಕುಂತಲದೊಳಗಿನ ಒಂದೆರಡು ಪದ್ಯಗಳನ್ನೂ ಗಾಯಕ ಗಾಯಕಿಯರಿಂದ ಹೇಳಿಸಿ ಕೇಳದೆ ಯಾವ ಸಂಗೀತ ಸಮಾರಂಭವೂ [illegible] ಕೊನೆಗಾಣುತ್ತಿರಲಿಲ್ಲ."

ಮರಾಠಿ ರಂಗಭೂಮಿಯ ಪಿತಾಮಹ ಅಣ್ಣಾ ಕಿರ್ಲೋಸ್ಕರ್ ಇವರು ಕನ್ನಡ ಕವಿ. ಇವರು ರಚಿಸಿದ ಕನ್ನಡ ಕವಿತೆಗಳಲ್ಲಿ '[illegible]' ಹಾಗೂ '[illegible]' ಎಂಬುವು ಉಪಲಬ್ಧವಿದ್ದು ಅವುಗಳಲ್ಲಿ ಕನ್ನಡ ಜಾನಪದದ [illegible] ಸಾಕಷ್ಟು ಇರುವುದು ಕಂಡುಬರುತ್ತದೆ. ಅಪರಾಳ ತಮ್ಮಣ್ಣ ಮತ್ತು ಕುಲಗೋಡ ತಿಮ್ಮಣ್ಣನವರ ಮೂಲ ಮತ್ತು ಪೂರ್ವರಂಗ ಶ್ರೀ ಕೃಷ್ಣ ಪಾರಿಜಾತ ಕಿರ್ಲೋಸ್ಕರರ ಮೇಲೆ ಪ್ರಭಾವ ಬೀರದೇ ಇರಲಿಲ್ಲ. ಮರಾಠಿ ಭಾಷೆಯಲ್ಲಿ "ಶ್ರೀ ಕೃಷ್ಣ ಪಾರಿಜಾತಕ" ವನ್ನು ಬರೆಯಲು ಕನ್ನಡ ಕೃಷ್ಣ ಪಾರಿಜಾತವೇ ಕಾರಣವಾಗಿದೆ. ಮರಾಠಿ ಭಾಷೆಯಲ್ಲಿ ಶ್ರೀ ಕೃಷ್ಣ ಪಾರಿಜಾತಕವನ್ನು ಬರೆದು ಅಣ್ಣಾ ಕಿರ್ಲೋಸ್ಕರರು ಅದರ ರಂಗ ಪ್ರದರ್ಶನವನ್ನು 'ಸಾಂಗಲೀಕರ ನಾಟಕ ಕಂಪನಿ'ಯ ವತಿಯಿಂದ ಕೈಕೊಂಡರು. ಕನ್ನಡ ಶ್ರೀ ಕೃಷ್ಣ ಪಾರಿಜಾತದಂತೆ ಮರಾಠಿ ಶ್ರೀಕೃಷ್ಣ ಪಾರಿಜಾತಕದಲ್ಲಿಯೂ ಸಾಕಷ್ಟು ಪದಗಳನ್ನು ಪಾತ್ರಗಳೇ ಹಾಡುತ್ತವೆ. "ನಾಟಕದಲ್ಲಿ ಸಂಗೀತವನ್ನು ಜೋಡಿಸುವ ಹೊಸ ಉಪಕ್ರಮವನ್ನು ಅಣ್ಣಾ ಕಿರ್ಲೋಸ್ಕರ್ ಮೊಟ್ಟ ಮೊದಲು ಮರಾಠಿ ಶ್ರೀ ಕೃಷ್ಣ ಪಾರಿಜಾತಕದಲ್ಲಿ ಪ್ರಯೋಗಿಸಿದನು" ಎಂದು ಪ್ರೊ. ನಾ. ಶಿ. ಫಡಕೆ ತಮ್ಮ 'ಕಿರ್ಲೋಸ್ಕರ್ ದೇವಲ ಗಡಕರಿ ಯಾಂಚಿ ನಾಟ್ಯ ಕೃತೀಚೆ ಮೂಲ್ಯ ಮಾಪನ ಆಣಿ ರಸಗ್ರಹಣ' ಎಂಬ ಪುಸ್ತಕದಲ್ಲಿ ಹೇಳಿದ್ದಾರೆ. ಅಣ್ಣಾ ಕಿರ್ಲೋಸ್ಕರ್ ಮತ್ತು ಚುರಮುರಿಯವರು ಸಮಕಾಲೀನರು. ಉತ್ತರ ಕರ್ನಾಟಕದ ಆನಂದೋತ್ಸವಗಳಲ್ಲಿ ಚುರಮುರಿಯವರ ಶಾಕುಂತಲ ನಾಟಕದೊಳಗಿನ ಪದಗಳನ್ನು ಹೇಳುವುದನ್ನು ಕೇಳಿ ಮತ್ತು [illegible] ನಾಟ್ಯರಂಗ[illegible]. ಇದೇ ಸುಮಾರಿಗೆ ಅಣ್ಣಾ[illegible] ಬಂದಿತು. ಅಲ್ಲಿ ಮರಾಠಿ ರಂಗಭೂಮಿಯ ಮೇಲೆ [illegible]

ದನು. ಈ ಹಿನ್ನೆಲೆಯಲ್ಲಿಯ ಕಾರಣದಿಂದ ಅಣ್ಣಾ ಸಿಗೂ ಮರಾಠಿ ಭಾಷೆಯಲ್ಲಿ ಶಾಕುಂತಲ ನಾಟಕವನ್ನು ರಚಿಸಲು ಸ್ಫೂರ್ತಿ ದೊರೆಯಿತು.

ಶ್ರೀಪುರೋಹಿತರಾಯರು ಪಬ್ಲಿಕ್ ವರ್ಕ್ಸ್ ಡಿಪಾರ್ಟ್‌ಮೆಂಟಿನಲ್ಲಿ ಓವರ್‌ಸೀಯರ ಎಂದು ಕೆಲಸ ಮಾಡುತ್ತಿದ್ದರೆಂದು ಈ ಮೊದಲೇ ಹೇಳಿದೆ. ಮುಂಬೈಯಿಂದ ಇವರ ವರ್ಗ ಸಿಂಧ ಪ್ರಾಂತಕ್ಕೆ ಆಯಿತು. ಕೆಲವು ಕಾಲ ಕೆಲಸ ಮಾಡಿದ ಬಳಿಕ ಧಾರವಾಡಕ್ಕೆ ವರ್ಗವಾಯಿತು. ಹಿರೇಕೆರೂರು ತಾಲೂಕಿನಲ್ಲಿಯ ಮದಗ ಮಾಸೂರ ಕೆರೆಯ ಜೀರ್ಣೋದ್ಧಾರವನ್ನು ಇದೇ ಕಾಲದಲ್ಲಿ ಕೈಕೊಂಡರು. ನಿವೃತ್ತಿ ಪಡೆದು ಒಬ್ಬರೇ ಮೊದಲು ಧಾರವಾಡದಲ್ಲಿಯ ದೇಸಾಯಿ ಓಣಿಯಲ್ಲಿ ಒಬ್ಬ ಅಡಿಗೆಯವನನ್ನು ಇಟ್ಟುಕೊಂಡು ಇರುತ್ತಿದ್ದರು. ಬಳಿಕ ಊರ ಹೊರಗಿನ ಕೋರ್ಟಿನ ಹತ್ತಿರ ಇದ್ದ ಒಂದು ಮನೆಯಲ್ಲಿ ಇರತೊಡಗಿದರು. ಸಿಂಧ ಪ್ರಾಂತದಲ್ಲಿದ್ದ ಕಾಲದಲ್ಲಿ ಬೇನೆಯಿಂದ ಅಸ್ವಸ್ಥರಾಗಿ ಮಲಗಿರಲು ಬೇರೆ ಜಾತಿಯವರು ಇವರ ಆರೈಕೆ ಮಾಡಿದುದರಿಂದ ತಾವು ಜಾತಿಭ್ರಷ್ಟರಾಗಿರುವೆವೆಂಬ ಕಲ್ಪನೆಯಿಂದ ಈ ಕ್ರಮವನ್ನು ಇಟ್ಟುಕೊಂಡಿದ್ದರು. ಸರಕಾರಿ ಕೆಲಸದಿಂದ ನಿವೃತ್ತರಾದ ಶ್ರೀಪುರೋಹಿತರಾಯರು ವಾಙ್ಮಯ ಸೇವೆ ಮತ್ತು ವಿಜ್ಞಾನ ಪ್ರಯೋಗಗಳಿಂದ ನಿವೃತ್ತರಾಗಲಿಲ್ಲ. ಇದೆಲ್ಲ ನಿರಂತರವಾಗಿಯೇ ಸಾಗಿತ್ತು. ತಾರೀಖು ೨-೬-೧೮೮೨ ರಂದು ಕಾಜು ಕರಗಿಸಿ ಮಸಿಕುಡಿಕೆಯನ್ನು ಮಾಡುವುದಕ್ಕೆ ಎರಕ ಹೊಯ್ಯುವ ಕೆಲಸ ಮಾಡುತ್ತಿದ್ದಾಗ ಮೂಗಿನೊಳಗಿಂದ ಹೊರಟ ಸಾಯನದ ಹೊಗೆ ಹೊಟ್ಟೆಯೊಳಗೆ ಹೊಕ್ಕು ಆಕಸ್ಮಿಕ ನಿಧನವಾಯಿತು. ಆಗ ಇವರ 'ಮೃಚ್ಛಕಟಿಕ' ನಾಟಕದ ಕನ್ನಡ ಅನುವಾದ 'ಬೆಳಗಾಂವ ಸಮಾಚಾರ' ಪತ್ರಿಕೆಯ ಛಾಪಖಾನೆಯಲ್ಲಿ ಮುದ್ರಣವಾಗಿ ಕೇವಲ ಮುಖಪುಟದ ಮುದ್ರಣವಾಗುವುದೊಂದೇ ಉಳಿದಿತ್ತು. ಹೀಗಾಗಿ ಈ ನಾಟಕದ ಪ್ರಕಾಶನ ಅಷ್ಟಕ್ಕೇ ಉಳಿದುಹೋಯಿತು.

ಶ್ರೀಪುರೋಹಿತರಾಯರು ತಮ್ಮ ಶಾಕುಂತಲ ನಾಟಕದಲ್ಲಿ, "ಬೆಡಗುಬ್ಯಾಡೋ ಮದನ ಸುಂದರಾ, ಆ

ಸವಿಯ ಭೆಯದಿ ಬಿಡರ ಸ್ವಾಮೀ ಪ್ರಿಯಾ ಚದುರೆಯ ಕಡೆಯುವರು ಎನ್ನ। ಸದನ ಕಡೆ ಸುಳಿಯುದಿಲ್ಲ। ಮದನ ಕದನದೊಳು ಮನವಿ" (ಅಂಕ ೩)

"ದಯಮಾಡಲೋಲ್ಯಾ ದಯೂಸಿಧೆ ದಯ ಮಾಡಲೋಲ್ಯಾ ನಿ। ನ್ನಯ ಸೇವೆ ಜನರ ಸ। ಪಾಲ್ಗಯಿಸಿ ನಿ। ಭರ್ಯದಿ ಚರಿಸುವಂತೆ (ಅಂಕ ೫) ಬೆಳಗಾಗ ಬಂತು ಬಿಡೆನ್ನಾ। ನಾಳೆ ತಡೆಯದೆ ಬರುವೆನೂ ಕೇಳೋ ಮೋಹನ್ನಾ (ಅಂಕ ೪) ಈ ಪದಗಳನ್ನು ಧಾಟಿಯಾಗಿ ಬಳಸಿದ್ದಾರೆ. ಅಣ್ಣಾ ಕಿರ್ಲೋಸ್ಕರ್ ಇವುಗಳನ್ನೇ ತಮ್ಮ ಶಾಕುಂತಲ ಸೌಭದ್ರ ರಾಮರಾಜ್ಯವಿಯೋಗ ಮತ್ತು ಶ್ರೀಕೃಷ್ಣ ಪಾರಿಜಾತಕನಾಟಕಗಳಲ್ಲಿ ಧಾಟಿಯಾಗಿ ಬಳಸಿದ್ದಾರೆ. ಕಿರ್ಲೋಸ್ಕರರ ನಂತರದ ಪ್ರಸಿದ್ಧ ಮರಾಠಿ ನಾಟಕಕಾರರೆಂದರೆ ಗೋವಿಂದ ಬಲ್ಲಾಲ ದೇವಲರು. ಇವರು ತಮ್ಮ ವಿಕ್ರಮೋರ್ವಶೀಯ ಮತ್ತು ಶಾರದಾ ನಾಟಕಗಳಲ್ಲಿ, ಕೃಷ್ಣಾಜಿ ಪ್ರಭಾಕರ ಖಾಡಿಲಕರರು ತಮ್ಮ ಮಾನಾಪಮಾನ ನಾಟಕದಲ್ಲಿ, ಕೋಲ್ಹಟಕರು ತಮ್ಮ ಮತಿವಿಕಾರ, ಮೂಕನಾಯಕ, ಗುಪ್ತಮಂಜೂಷ ನಾಟಕಗಳಲ್ಲಿ ಕನ್ನಡ ಪದಗಳ ಧಾಟಿ ಮಟ್ಟುಗಳನ್ನು ಬಳಸಿದುದು ಕಂಡುಬರುತ್ತದೆ.

ಇತ್ತೀಚೆಗೆ ಮಹಾರಾಷ್ಟ್ರದ ಹಿರಿಯ ಸಾಹಿತಿ ಮತ್ತು ನಾಟ್ಯ ಮೀಮಾಂಸಕರಾದ ಶ್ರೀ ಕೃ. ಬಾ. ಮರಾಠೆ ಅವರು 'ಮರಾಠಿ ರಂಗಭೂಮೀಚಾ ಪೂರ್ವರಂಗ' ಎಂಬ ಗ್ರಂಥವನ್ನು ಬರೆದಿದ್ದಾರೆ. ಇದರ ಪ್ರಕಟಣೆ ಶ್ರೀವಿದ್ಯಾಪ್ರಕಾಶನ, ಪುಣೆ ಇವರ ವತಿಯಿಂದ ಸೆಪ್ಟೆಂಬರ್ ೧೯೭೯ರಲ್ಲಿ ಕೈಕೊಳ್ಳಲಾಗಿದೆ. ಈ ಗ್ರಂಥದ ಹದಿನೈದನೆಯ ಅಧ್ಯಾಯದಲ್ಲಿ ಶ್ರೀ ಮರಾಠೆ, 'ಸಂಗೀತ ಶಾಕುಂತಲ ರಂಗಭೂಮೀ ವರೀಲ ಕ್ರಾಂತಿ' ಎಂಬ ಲೇಖನದಲ್ಲಿ ಈ ಬಗ್ಗೆ ತಮ್ಮ ವಿಚಾರಗಳನ್ನು ವ್ಯಕ್ತಪಡಿಸಿದ್ದಾರೆ. ಶ್ರೀ ಮರಾಠೆ ಅವರ ಗ್ರಂಥದ ಕೆಲವು ಅವತರಣಿಕೆಗಳನ್ನು ಅವರ ಮನೋಗತವು ಕನ್ನಡ ನಾಟ್ಯ ಸಂಶೋಧಕರಿಗೆ ಸುಲಭವಾಗಲಿ ಎಂಬ ಉದ್ದೇಶದಿಂದ ಕೆಳಗೆ ತೋರಿಸಲಾಗಿದೆ ಇದರಲ್ಲಿ ಸ್ವಲ್ಪ ಅನುವಾದ ಕೈಕೊಳ್ಳಲು ಪ್ರಯತ್ನಿಸಲಾಗಿದೆ.

ಹದಿನೈದನೆಯ ಅಧ್ಯಾಯದ ಪುಟ ಸಂಖ್ಯೆ ೧೪೯–೧೫೦ ರಲ್ಲಿ, ಸಂಗೀತ ಶಾಕುಂತಲಾಚಾ ಸ್ಫೂರ್ತಿಚೀ ಮಿಥ್ಯಾಮಿಕಾ' ಎಂಬ ವಿಷಯದ ಬಗ್ಗೆ ಮೊದಲು ಚರ್ಚೆ ಕೈಕೊಂಡಿದ್ದಾರೆ. ಡಾ. ವ. ದಿ. ಕುಲಕರ್ಣಿ ಎಂಬ ಹಿರಿಯ ಮರಾಠಿ ಸಾಹಿತಿಗಳು ತಮ್ಮ ಸಂಶೋಧನಾಪರ ಗ್ರಂಥ 'ಸಂಗೀತ ನಾಟ್ಯ ಘಟನಾ ಆಣಿ ಸ್ವರೂಪ'ದ ಪುಟ ೭೩–೭೭ ರಲ್ಲಿ, ಡಾ. ಎಚ್. ಕೆ. ರಂಗನಾಥ ಅವರು 'ಕರ್ನಾಟಕ ರಂಗಭೂಮಿ' ಎಂಬ ಸಂಶೋಧನಪರ ಗ್ರಂಥದಲ್ಲಿ ವ್ಯಕ್ತಪಡಿಸಿದ ವಿಚಾರಗಳನ್ನೇ ಉಲ್ಲೇಖ ಮಾಡಿದ್ದಾರೆ. ಮರಾಠೆಯವರ ಇದೆಲ್ಲವನ್ನು ಮೊದಲು ಹೇಳಿದ್ದಾರೆ. ಆ ಬಳಿಕ ಕೆಳಗಿನಂತೆ ತಮ್ಮ ವಿಚಾರಗಳನ್ನು ವ್ಯಕ್ತಪಡಿಸಿರುವರು:

"ಇದೆಲ್ಲದಕ್ಕೂ ಸಂಪೂರ್ಣ ಅಸತ್ಯವೇ ಹಿನ್ನೆಲೆಯಾಗಿದೆ. ಕಿರ್ಲೋಸ್ಕರನು ಜನ್ಮತಃ ಕನ್ನಡಿಗನೆಂದೂ ಸಂಬೋಧಿಸುವುದು ಅನುಚಿತ. ಆತನ ಜನ್ಮಸ್ಥಳ ಸದ್ಯದ ಕರ್ನಾಟಕದಲ್ಲಿದ್ದರೂ ಮೊದಲು ಮುಂಬೈ ಇಲಾಖೆಯಲ್ಲಿತ್ತು. ಮತ್ತು ಕಿರ್ಲೋಸ್ಕರನ ಕಾಲದಲ್ಲಿ ಗುರ್ಲಹೊಸೂರು ಗ್ರಾಮವು ಸಾಂಗಲೀ ಸಂಸ್ಥಾನದ ಅಧೀನದಲ್ಲಿ ಬರುತ್ತಿತ್ತು. ಅಣ್ಣಾ ಕಿರ್ಲೋಸ್ಕರನ ಪ್ರಾಥಮಿಕ ಶಿಕ್ಷಣವು ಮರಾಠಿ ಮಾಧ್ಯಮದಲ್ಲಿಯೇ ಉಂಟಾಗಿದೆ. ಇದಲ್ಲದೆ ತುರಮರಿ (ಚುರಮರಿ) ಇವರೂ ರಾಮದುರ್ಗದ ಭಾವೇ ಅಧಿಪತಿಗಳ ಪ್ರಜಾಜನರಿದ್ದು ಅವರ ಮೊದಲಿನ ಅಡ್ಡಹೆಸರು ಚುರಮರಿಯಾಗಿರದೇ "ಮುಡಕವಿ" ಎಂದಿದ್ದುದರ ಬಗ್ಗೆ ಹೇಳುತ್ತಾರೆ. ತುರಮರಿ ಎಂಬ ಅಡ್ಡಹೆಸರು ಆ ಬಳಿಕ ಅಂಟಿಕೊಂಡಿದ್ದಾಗಿದೆ. ಏಕೆಂದರೆ ಚೆನ್ನಬಸಪ್ಪಾ ತುರಮರಿ ಎಂಬ ಹೆಸರಿನ ಕ್ರಿಸ್ತೀ ಮತಾಂತರನಾದ ಲಿಂಗಾಯತ. ಆಶ್ರಿತನಾಗಿ ತಮ್ಮ ಸೇವಾನಿವೃತ್ತಿ ನಂತರ ಧಾರವಾಡಕ್ಕೆ ಬಂದು ವಾಸಿಸತೊಡಗಿದರು. (ತುರಮರಿ) ಇವರು ಹಲಸಿ ಗ್ರಾಮದವರಿದ್ದು ಹಲಸಿಕರ ನಾಟಕ ಕಂಪನಿಯು ಇವರ ಕನ್ನಡ ಶಾಕುಂತಲ ನಾಟಕವನ್ನು ಪ್ರಯೋಗಿಸುತ್ತಿತ್ತು.

ಕೆಲವು ಕನ್ನಡಿಗರು ಬೇರೊಂದು ಪ್ರಚಾರವನ್ನೇ ಕೈಕೊಂಡಿದ್ದಾರೆ. ಬೆಳಗಾಂವಿಯಲ್ಲಿ ಒತ್ತಾಯದ ಸೇವಾ ನಿವೃತ್ತಿ ಪಡೆದ ಬಳಿಕ ಕೆಲವು ವರುಷಗಳ ನಂತರ ಮುಂಬೈಯ ಬ್ಯಾಕ್‌ಬೇ ರಿಕ್ಲಮೇಷನ್ ಆಫೀಸಿನಲ್ಲಿ ಪುನಃ ಕೆಲಸಕ್ಕೆ ಸೇರಿ ಅಲ್ಲಿ ನಿವೃತ್ತರಾದ ಬಳಿಕ ಧಾರವಾಡಕ್ಕೆ ಬಂದ ಮೇಲೆ ಉಲ್ಲೇಖಿಸಿದ ಚೆನ್ನಬಸಪ್ಪ ತುರಮರಿ ಎಂಬವರ ಆಶ್ರಿತರಾದರು. ಕಾರಣ ಇವರೂ ಕ್ರಿಸ್ತ ಧರ್ಮ ಸ್ವೀಕರಿಸಿರಬಹುದು. ಪರಿಣಾಮ ಇವರನ್ನು ಯಾರೂ ವಿಚಾರಿಸುತ್ತಿರಲಿಲ್ಲ. ಮೃತ್ಯು ನಂತರ ಇವರ ಮೃತ ದೇಹದ ಅಂತ್ಯಕ್ರಿಯೆಗೂ ಯಾರೂ ಮುಂದೆ ಬರಲಿಲ್ಲ. ಎಂದು ಬೆಳಗಾಂವ ಸಮಾಚಾರಕಾರನು ದುಃಖ ವ್ಯಕ್ತಪಡಿಸಿದ್ದಾನೆ.

ಪುಟ ನಂಬರ್ ೧೯೧ ರಿಂದ ೧೯೪ರ ವರೆಗೆ ಮರಾಠೆ ಅವರು 'ಕನ್ನಡ ಶಾಕುಂತಲಾವರ ಮರಾಠಿಚಾ ಪ್ರಭಾವ' ಎಂಬ ಶೀರ್ಷಿಕೆಯಲ್ಲಿ ತಮ್ಮ ವಿಚಾರಗಳನ್ನು ಕೆಳಗಿನಂತೆ ಹೇಳಿದ್ದಾರೆ:

"ಈ ಎಲ್ಲ ಅಸತ್ಯ ಸಂಗತಿಗಳ ಬಗ್ಗೆ (ಚುರಮರಿ) ಇವರ ಮೃತ್ಯು ಲೇಖನ ಆಧಾರ ಇಂದಿನ ಕನ್ನಡ ವಾಚನಾಲಯಗಳಲ್ಲಿ ಕಾಣುವ ಕನ್ನಡ ಶಾಕುಂತಲ ನಾಟಕದಲ್ಲಿ ಆವೃತ್ತಿಕಾರರು ಸಾಕಷ್ಟು ಕೈಚಳಕ ಮಾಡಿದ್ದಾರೆ. ಮೂಲ ಕನ್ನಡ ಶಾಕುಂತಲ ನಾಟಕವನ್ನು ಬಿಟ್ಟಿದ್ದಾರೆ. ಸಾಕಷ್ಟು ಸ್ಥಳಗಳಲ್ಲಿ ಅವರ ಪ್ರಕ್ಷೇಪವನ್ನು ಕೈಕೊಂಡಿದ್ದಾರೆ. ಇದನ್ನು ನಿಶ್ಚಿತವಾಗಿ ಹೇಳಲು ಬರುವದು. ಆದರೆ ಆ ಸ್ವತಂತ್ರ ವಿಷಯ ನನ್ನದಾಗಿರದೇ ಕನ್ನಡಿಗರದಾಗಿದೆ. ನಾನು ಕೇವಲ ಕನ್ನಡ ಮತ್ತು ಮರಾಠಿ ಸಂಗೀತ ಶಾಕುಂತಲ ನಾಟಕಗಳ ಬಗ್ಗೆ ವಿಚಾರ ಕೈಕೊಂಡು ಮೂಲ ಕನ್ನಡ ಶಾಕುಂತಲದ ಆವೃತ್ತಿಯಲ್ಲಿಯ ಸಂಭಾಷಣೆಗಳ ಸ್ಥಳ ಉಲ್ಲೇಖನವನ್ನು ನಿದರ್ಶನಕ್ಕೆ ತಂದು ಕೊಡುವೆನು. ಈ ಮೂಲ ಆವೃತ್ತಿಯನ್ನು ನಾನು ಮೂರು ಮೂರು ಬಾರಿ ನೋಡಿದ್ದೇನೆ."

"ಶ್ರೀ ಶೇಷೋ ರಾಮಚಂದ್ರ (ತುರಮರಿ) ಈ ವಿದ್ವಾನ್ ಗೃಹಸ್ಥನು ಕೈಃ ಬಲವಂತ ಪಾಂಡುರಂಗ ಕಿರ್ಲೋಸ್ಕರನ ಸಮಕಾಲೀನ. ಕಿರ್ಲೋಸ್ಕರನಿಗಿಂತ ಮೂರು ವರುಷ ಮೊದಲು ತೀರಿಕೊಂಡನು (ಚುರಮರಿ). ಆತನ ಕನ್ನಡ ನಾಟಕ ಅಣ್ಣಾ ಕಿರ್ಲೋಸ್ಕರನ 'ಬುಕಿಶ್' ನಾಟಕದ ನಂತರ ಅಣ್ಣನ ಜೀವಿತಕಾಲದಲ್ಲಿ ಎಂದಾದರೂ ರಚಿಸಿ ಮೃತ್ಯುಪೂರ್ವ ೧೮೮೨ರ ಮೊದಲು ಪ್ರಕಾಶಿತವಾಗಿರಲು ಸಾಕು' ಎಂಬುದನ್ನು ಬಹಿರಂಗವಾಗಿ ಹೇಳಲು ಬರುವುದು. ಈ (ಕನ್ನಡ ಶಾಕುಂತಲ) 'ಬುಕಿಶ್' ನಾಟಕದ ತಂತ್ರ ಮರಾಠಿ ನಾಟಕದಿಂದಲೇ ಕನ್ನಡಿಗರು ಎತ್ತಿಕೊಂಡಿದ್ದಾರೆ. ಅಣ್ಣಾ ಕಿರ್ಲೋಸ್ಕರನ ಪ್ರಪ್ರಥಮ ಬುಕಿಶ್ ನಾಟಕ ಶಂಕರ ದಿಗ್ವಿಜಯ ೧೮೭೩ರಲ್ಲಿ ಪ್ರಕಾಶಿತವಾಗಿದೆ. ಈ ಹಿನ್ನೆಲೆಯಲ್ಲಿ ಎಂದಾದರೂ ಶೇಷೋ ರಾಮಚಂದ್ರ ಈತನು ಮೃಚ್ಛಕಟಿಕ ನಾಟಕದ ಪೂರ್ವ ಕನ್ನಡ ಶಾಕುಂತಲ ಪ್ರಸಿದ್ಧವಾಗಿದೆ. ಮೃಚ್ಛಕಟಿಕ ಆತನ ಮೃತ್ಯುಕಾಲದಲ್ಲಿ ಬೆಳಗಾಂವ ಸಮಾಚಾರ ಮುದ್ರಣಾಲಯದಲ್ಲಿ ಮುದ್ರಿತವಾಗುತ್ತಿತ್ತು ಎಂಬ ವಿಷಯ ಆತನ ಬಗ್ಗೆ ಬರೆಯಲಾದ ಮೃತ್ಯು ಲೇಖನದಿಂದಲೇ ತಿಳಿದುಬರುತ್ತದೆ. ಇದೆಲ್ಲದರ ತಾತ್ಪರ್ಯ. ಕನ್ನಡ ಶಾಕುಂತಲ ನಾಟಕ ಕ್ರಿಸ್ತಶಕ ೧೮೮೦ರ ಹಿಂದು ಮುಂದೆ ಎಂದಾದರೂ ಪ್ರಕಾಶಿತವಾಗಿರಲು ಸಾಕು ಎಂಬುದು ಸ್ಪಷ್ಟವಾಗುತ್ತದೆ."

"ಅಣ್ಣಾ ಕಿರ್ಲೋಸ್ಕರ ಮತ್ತು ಶೇಷೋ ರಾಮಚಂದ್ರ ಇವರಿಬ್ಬರ ಸ್ನೇಹ ಸಂಬಂಧ ಉಂಟಾಗಿ ಅವರಿಬ್ಬರೂ ತಮ್ಮ ತಮ್ಮ ಈ ನಾಟಕಗಳ ಹಸ್ತಪ್ರತಿಗಳನ್ನು ಪರಸ್ಪರರಿಗೆ ತೋರಿಸಿ ಅವುಗಳ ಬಗ್ಗೆ ಚರ್ಚೆ ಕೈಕೊಂಡಿರಬಹುದೆಂಬುದರ ಬಗ್ಗೆ ಮರಾಠಿ ಭಾಷೆಯ ಈ ನಾಟಕಕಾರರ ಚರಿತ್ರ ಲೇಖಕರು ಉಲ್ಲೇಖ ಕೈಕೊಂಡಿರುವದಿಲ್ಲ…ಅಣ್ಣಾನಿಗೆ ಕನ್ನಡ ಭಾಷೆ ಅವಗತವಾಗಿದ್ದರೂ ಆತ ಕನ್ನಡ ಶಾಕುಂತಲ ನಾಟಕವನ್ನು ಪರಿಶೀಲಿಸಿದ ಬಗ್ಗೆ ನೋಂದಣಿ ಟಿಪ್ಪಣಿಗಳಿರುವದಿಲ್ಲ. ಅಣ್ಣಾ ಶಾಕುಂತಲ ನಾಟಕವನ್ನು ಶೇಷಗಿರಿರಾಯನಿಂದ ಓದುವದಕ್ಕಾಗಿ ತೆಗೆದುಕೊಂಡ ಬಗ್ಗೆ ಆಧಾರ [illegible] ಕಾಣುವದಿಲ್ಲ…ಈ ರೀತಿಯ [illegible]
[illegible]

ಮರಾಠಿ ಭಾಷೆಯಲ್ಲಿ ಶಾಕುಂತಲ ನಾಟಕ ರಚಿಸಲು ಪ್ರೇರಣೆ ಪಡೆದನು ಎಂದು ಹೇಳುವುದರ ಬದಲು ಶೇಷಗಿರಿರಾಯನೆ ಅಣ್ಣಾನ ಸಂಗೀತ ಶಾಕುಂತಲದ ಪ್ರಯೋಗವನ್ನು ನೋಡಿರಬಹುದು ಎಂದು ನಿಶ್ಚಯವಾಗಿ ಹೇಳಲು ಬರುವುದು. ಅಲ್ಲದೆ ಆ ಬಗ್ಗೆ ಸವಿಸ್ತಾರವಾಗಿ ವಿಚಾರ ಮಾಡಲೂ ಬರುವುದು."

"ಕಿರ್ಲೋಸ್ಕರ ಕ್ರಿಸ್ತ ೧೮೬೬ರಲ್ಲಿ ಸುಮಾರು ಬೆಳಗಾಂವಿಗೆ ಮರಳಿ ಶಾಲೆಯಲ್ಲಿ ಮಾಸಿಕ ವೇತನ ೨೫ ರೂಪಾಯಿಯ ಮೇಲೆ ಶಿಕ್ಷಕನ ಕೆಲಸವನ್ನು ಸ್ವೀಕರಿಸಿದನು. ಆ ಕಾಲದಲ್ಲಿ ಶೇಷಗಿರಿರಾವ್ ಹುರಮುರಿ ಬೆಳಗಾಂವದಲ್ಲಿ ವಾಸಿಸುತ್ತಿರಬಹುದು. ಆದರೆ ಆತನ ಮನಸ್ಸು ಅಣ್ಣಾನ ಕಡೆಗೆ ಕೇಂದ್ರೀಕೃತವಾಗಿರಲಿಲ್ಲ ಎಂಬುದು ನಿಶ್ಚಿತ. ಅಣ್ಣಾ ೪-೫ ವರುಷ ಶಿಕ್ಷಕನೆಂದು ಕೆಲಸ ಮಾಡಿದರೂ ಆತನ ಸಂಬಳದಲ್ಲಿ ಹೆಚ್ಚಳವಾಗಲಿಲ್ಲ. ಕೆಲವು ಕಾಲದ ವರೆಗೆ ಅಣ್ಣಾ ಮುನಸೀಫ ಕಚೇರಿಯಲ್ಲಿ 'ಅಸೇಸರ್' ಎಂಬ ಜವಾಬ್ದಾರಿ ಸಹ ವಹಿಸಿದ್ದನು. ಅವನ ಈ ಹುದ್ದೆಯ ಎದುರು 'ಅಸಿಸ್ಟಂಟ್ ಶಿಕ್ಷಕ' ಎಂಬ ಉಲ್ಲೇಖವೂ ಸರಕಾರೀ ದಫ್ತರಗಳ ಟಿಪ್ಪಣೆಗಳಲ್ಲಿ ಕೈಕೊಂಡಿದನ್ನು ನೋಡಲು ದೊರೆಯುತ್ತದೆ. ತನ್ನ ಸಂಬಳದಲ್ಲಿ ಹೆಚ್ಚಳವಿಲ್ಲ ಎಂಬ ವಿಚಾರವು ಆತನ (ಅಣ್ಣಾನ) ಮನಸ್ಸಿನಲ್ಲಿ ಮನೆಮಾಡಿಕೊಂಡಿತ್ತು. ಆದ ಕಾರಣ ಶಿಕ್ಷಕ ಕೆಲಸವನ್ನು ಬಿಟ್ಟುಕೊಟ್ಟು ನಾಟಕದಲ್ಲಿ ಆಸ್ಥೆ ವಹಿಸತೊಡಗಿದನು. 'ಸಾಂಗಲೀಕರ ನಾಟಕ ಕಂಪನಿ'ಗೆ ವಿಷ್ಣುಪಂತ ಭಾವೇನ ನಾಟಕಗಳ ಮಾದರಿಯ ಪದರಚನೆಗಳನ್ನೂ ಆಖ್ಯಾನಗಳನ್ನೂ ರಚಿಸಿಕೊಡುತ್ತಿದ್ದನು. ಭರತ ನಾಟ್ಯ ಶಾಸ್ತ್ರೋತ್ತೇಜಕ ನಾಟಕ ಕಂಪನಿಯನ್ನು ಸ್ಥಾಪಿಸಿದನು. ಈ ಎಲ್ಲ ಸಂಗತಿಗಳು ಬಹುಶ್ರುತವಾಗಿವೆ. ಕಿರ್ಲೋಸ್ಕರ ಕೆಲಸಕ್ಕೆ ರಾಜೀನಾಮೆ ಕೊಟ್ಟ ಬಳಿಕ ಶೇಷೋ ರಾಮಚಂದ್ರ ಹುರಮುರಿ ಅಣ್ಣಾನ ಹಿತಚಿಂತನೆ ಮಾಡಲಿಲ್ಲ. ಬೇರೊಂದು ಕೆಲಸ ಒದಗಿಸಿ ಕೊಡುವ ಕಷ್ಟ ಸಹ ವಹಿಸಲಿಲ್ಲ. ಬೆಳಗಾಂವದ ಪೋಲೀಸ್ ಖಾತೆ

ಯಲ್ಲಿ ಫೌಜುದಾರ ಕೆಲಸ ಮಾಡುತ್ತಿದ್ದ ಅಣ್ಣಾನ ಮಿತ್ರ ರಾವಜೀ ಗಂಗಾಧರ ಖೋತ ತಮ್ಮ ಖಾತೆಯಲ್ಲಿ ಅಣ್ಣಾನಿಗೆ ಜಮಾದಾರ ಎಂದು ನೇಮಿಸಿಕೊಂಡನು.…ಮರಾಠಿ ಶಾಕುಂತಲದ ಎರಡು ಪ್ರಯೋಗಗಳು ಬೆಳಗಾಂವದ ಕೋರೆಗಲ್ಲಿಯಲ್ಲಿ ಮಂಟಪವನ್ನು ಹಾಕಿ ಕ್ರಿಸ್ತಶಕ ೧೮೭೪ ರಲ್ಲಿ ಕೈಕೊಂಡ ಸಂಗತಿ ದತ್ತೋಪಂತ ಪಲ್ಯಾಳಕರ ಎಂಬ ಗಾಯಕ ನಟರ ಚರಿತ್ರೆಯಿಂದ ತಿಳಿದು ಬರುವುದು…ಈ ಘಟನೆಯ ನಂತರ ಅಣ್ಣಾನ ಅನುಕರಣೆಯಾಗಿ ಶ್ರೀ ತುರಮುರಿ ಈತನು ಭರತಶಾಸ್ತ್ರಕಲೋತ್ತೇಜಕ ನಾಟಕ ಕಂಪನಿಯನ್ನು ಧಾರವಾಡದಲ್ಲಿ ಸ್ಥಾಪಿಸುವುದರಲ್ಲಿ ತೊಡಗಿದನು."

"ತುರುಮುರಿ ಅಣ್ಣಾನ ಶಾಕುಂತಲ ನಾಟಕವನ್ನು ನೋಡಿರಲಿಕ್ಕೂ ಇಲ್ಲ. ಬೆಳಗಾಂವದಲ್ಲಿ ನೌಕರಿ ಮಾಡುವ ಸಮಯ ಮಳೆಗಾಲದಲ್ಲಿ ನಾಕಷ್ಟು ಶ್ರಮವಹಿಸಿ, ಚಾಂದ್ರಾಯಿಣ ವ್ರತವನ್ನು ಆಚರಿಸಿ, ಶಾಕುಂತಲ ನಾಟಕ ಕನ್ನಡ ಅನುವಾದವನ್ನು ಕೈಕೊಂಡನೆಂಬ ಆಖ್ಯಾಯಿಕೆಯೂ ಇರುವುದು. ಹೀಗಾಗಿ ಈತನು ಈ ಗ್ರಂಥ ರಚನೆ ಪೂರ್ಣವಾಗಲು ನಾಕಷ್ಟು ವರುಷಗಳ ಅವಧಿ ಉಂಟಾಯಿತು. ಈ ನಾಟ್ಯ ಗ್ರಂಥದ ಪ್ರಸ್ತಾವನೆಯಲ್ಲಿ 'ಹರಿನಾಟ್ಯಂ' ಎಂದೂ ಸಂಬೋಧಿಸಿದ್ದಾನೆ. ಇದು ಭಾಗವತ ನಾಟಕವೆಂದು ಅರ್ಥವಾಗುವುದು. ಮೂಲ ಸಂಸ್ಕೃತ ನಾಟಕದಲ್ಲಿಯ ಶಂಕರನ ವರ್ಣನೆಯನ್ನು ಕನ್ನಡದ ನಾಂದಿ ಶ್ಲೋಕದಲ್ಲಿ ಹಾಗೆಯೇ ತೋರಿಸಲಾಗಿದೆ. ಪ್ರಾರಂಭದ ಕೆಲವು ಅಂಕಗಳಲ್ಲಿಯ ಮೂಲ ಪದ್ಯಗಳ ಕನ್ನಡ ಅನುವಾದಗಳಲ್ಲಿ ವೃತ್ತಗಳ ಮಟ್ಟೀಗಾತ್ರಾಶ್ವ ಘಾಟಿ, 'ಶಾರ್ದೂಲ' ವಿಕ್ರೀಡಿತ, ಹರಿಣಿ, ವಿಭುದಪ್ರಿಯಾ ಇತ್ಯಾದಿಗಳನ್ನು ಲಕ್ಷಣ ಸಹಿತ ತೋರಿಸಲಾಗಿದೆ. ಇವಲ್ಲದೆ ಶಯನಾಘರ ಪಾನಾದಿಗಳನ್ನು ಸಂಸ್ಕೃತ ನಾಟ್ಯಶಾಸ್ತ್ರದಲ್ಲಿ ವರ್ಜ್ಯವಾಗಿ ಕಂಡ ಶ್ಲೋಕಗಳನ್ನು ಅಡಿಟಿಪ್ಪಣಿಗಳಲ್ಲಿ ತೋರಿಸಿದುದೂ ಕಾಣುವುದು. ಕೆಲವೇ ಬಾರಿ ರಾಗಗಳ ಸರಗಮಗಳನ್ನು ಸೂಚಿಸಿದುದೂ ಕಾಣುವುದು. ಇಂತಹ ಅಂಶಗಳನ್ನು ಮರಾಠಿ ಅನುವಾದದಲ್ಲಿ ತೋರಿಸಲು ಕಿರ್ಲೋಸ್ಕರನಿಗೆ ಯೋಗ್ಯವೆನಿಸಲಿಲ್ಲ. ಸಂಸ್ಕೃತದ ಗದ್ಯದ ಸ್ಥಾನದಲ್ಲಿ ಪದ್ಯ ಮತ್ತು ಪದ್ಯದ ಬದಲು ಗದ್ಯ ಸೇರಿಸಿ ಅಣ್ಣಾ ತನ್ನ ಸಂಗೀತ ಶಾಕುಂತಲ ನಾಟಕವನ್ನು ಪ್ರಯೋಗಕ್ಕೆ ಅನುವು ಆಗುವಂತೆ ಕೈಕೊಂಡಿದ್ದಾನೆ."

"ಕನ್ನಡ ಶಾಕುಂತಲ ನಾಟಕದಲ್ಲಿ ಹಿಂದೀ ಗೀತೆಗಳ ಧಾಟಿಯನ್ನು ಬಳಸಲಾಗಿದೆ. ಮರಾಠಿ ಸಂಗೀತ ಶಾಕುಂತಲ ನಾಟಕದಲ್ಲೂ ಬಳಸಲಾಗಿದೆ. 'ಇಸ ತನ ಧನಕೀ ಕೌನ ಬಢಾಯಿ' ಈ ಧಾಟಿಯನ್ನು ಸೂಚಿಸಿ ಪದ ರಚನೆಯನ್ನು ಎರಡೂ ಭಾಷೆಯ ಭಾಷಾಂತರಕಾರರು ಕೈಕೊಂಡಿರುತ್ತಾರೆ. ಮರಾಠಿ ಅನುವಾದದಲ್ಲಿ ನಾಂಥಿಯ ಸಂವಾದ ಹಿಂದುಸ್ತಾನೀ ಭಾಷೆಯಲ್ಲಿ ಕೋಳಿಕೈದಿ (ಮೀನುಗಾರ ಕೈದಿ) ಪ್ರವೇಶದಲ್ಲಿ 'ಕುಣಬಾವು' ಭಾಷೆಯನ್ನು ಬಳಸಲಾಗಿದೆ. ಕನ್ನಡ ಶಾಕುಂತದಲ್ಲಿ ಎಲ್ಲ ಕಡೆಗೂ ಪ್ರೌಢ ಹಳೆಗನ್ನಡ ಭಾಷೆಯನ್ನು ಬಳಸಲಾಗಿರುವುದು. ಇನ್ನೊಂದು ಗಮನದಲ್ಲಿಡುವುದೇನೆಂದರೆ ಮರಾಠಿ ಕೃತಿಯಲ್ಲಿ ಸಾಕೀ ದಿಂಡೀ, ಓವಿಸವಾಯಿಕಟಾವ, ಮತ್ತು ಲಾವಣಿ ಇತ್ಯಾದಿ ಶುದ್ಧ ಮರಾಠಿ ಜಾತಿ ರಚನೆಗಳನ್ನು ಛಂದಸ್ಸುಗಳನ್ನೂ ಬಳಸಲಾಗಿದೆ. ಕನ್ನಡ ಭಾಷಾಂತರದಲ್ಲಿ ಷಟ್‌ಪದಿ ಇತ್ಯಾದಿ ಮಾದರಿಯ ಕನ್ನಡ ಪದರಚನೆಗಳು ಮೊದಲಿನ ನಾಲ್ಕು ಅಂಕುಗಳಲ್ಲಿ ಕಾಣುವುದಿಲ್ಲ. ಮೊದಲು ಬಾರಿ ಕನ್ನಡ ಷಟ್‌ಪದಿ ಐದನೆಯ ಅಂಕದಲ್ಲಿ ಕಂಡುಬರುವುದು. ಆ ಬಳಿಕ ಐದೇಳು ಬಾರಿ ಪ್ರಯೋಗಿಸಲಾಗಿದೆ. ಇತರ ಲೋಕಪ್ರಿಯ ಜಾನಪದ ಗೀತೆಗಳು ಕಾಣುವುದಿಲ್ಲ. ಇದೊಂದು ಆಶ್ಚರ್ಯವೇ ಸರಿ."

"ಎಲ್ಲಕ್ಕೂ ಮಿಕ್ಕಿನ ವಿಸ್ಮಯಕಾರಕ ಅಂಶ ಕನ್ನಡ ಶಾಕುಂತಲದಲ್ಲಿ ಕೆಲವು ಮರಾಠಿ ಪದಗಳನ್ನು ಧಾಟಿಯಾಗಿ ಬಳಸಲಾಗಿದೆ. ಮರಾಠಿ ಪದಗಳನ್ನು ಕನ್ನಡ ಲಿಪಿಯಲ್ಲಿ ಉದ್ಧೃತ [illegible] [illegible]. ಈ ಸತ್ಯ ಸಂಗತಿಯನ್ನು ಕನ್ನಡ ಭಾಷೆಯ [illegible] ಅಭಿಮಾನದ [illegible] [illegible] ಆವೃತ್ತಿಯ ಸಂಪಾದಕನು ಈ ಸಂದರ್ಭದಲ್ಲಿ

ತೆಗೆದು ಹಾಕಿದ್ದಾನೆ, ಮಾತ್ರವಲ್ಲ, ಕನ್ನಡ ಶಾಕುಂತಲದ ಪ್ರಭಾವದಿಂದ ಮರಾಠಿ ಭಾಷೆಯಲ್ಲಿ ಅಣ್ಣಾ ಕಿರ್ಲೋಸ್ಕರರು ಜಾನಪದ ಸಂಗೀತವನ್ನು ಬಳಸಿದರೆಂದು ಪ್ರತಿ ಸಂಶೋಧಕ [illegible] ಯುವರು. ಸಂಪೂರ್ಣ ಅಧ್ಯಯನ ಮಾಡದೇ ಮರಾಠಿ ನಾಟ್ಯ ಮೀಮಾಂಸಕರು ಸಮಾನುಭೂತಿ-ಯ ಬಸರಿನಲ್ಲಿ ಒಂದೇ ಭಾಗದ ಸಂಗತಿಗಳ ಮೇಲೆ ವಿಶ್ವಾಸವಿಟ್ಟು ಅದನ್ನೇ ಸ್ವೀಕರಿಸಿ ರಮ್ಯ ಸ್ವಾಭಿಮಾನವನ್ನೇ ಕಳೆದುಕೊಂಡಿದ್ದಾರೆ. ಈ ಮಹತ್ತ್ವ ಮೀಮಾಂಸಕರಿಗಾಗಿ ಕನ್ನಡ ಶಾಕುಂತಲದ ಮೊದಲಿನ ಆವೃತ್ತಿಯ ಕೆಲವು ಭಾಗಗಳನ್ನು ನಿದರ್ಶನಕ್ಕೆ ತಂದುಕೊಡಲಾಗಿದೆ. ಅದನ್ನು ಪರಿಶೀಲಿಸಿದ ಬಳಿಕ ಮರಾಠಿ ರಂಗಭೂಮಿಯ ಇತಿಹಾಸಕಾರರ ಮತ್ತು ಅಧ್ಯಯನ ಮಾಡುವ ಸಂಶೋಧಕರ ಭ್ರಮನಿರಸನವುಂಟಾಗುವದೆಂಬ ಆಶೆಯಿದೆ."

"ಕನ್ನಡ ಶಾಕುಂತಲದ ಐದನೆಯ ಅಂಕಿನಲ್ಲಿ ಶಾರ್ಙ್ಗರವನು 'ತಾವು ಅವರ ಕನ್ಯೆಯೊಡನೆ ಪರಸ್ಪರ ಸಂಕೇತದಿಂದ ಗಾಂಧರ್ವವಿವಾಹವಾಗಿ ಅವಳನ್ನು ಸ್ವೀಕರಿಸಿದ್ದು ಅವರ ಮನಸ್ಸಿಗೆ ಬಹು ಆನಂದಕರವಾಗಿ ಅವರು ಹೇಳಿದ್ದೇನೆಂದರೆ' ಎಂಬ ಸಂಭಾಷಣೆಯ ನಂತರ ಶಾರ್ಙ್ಗರವನು ಒಂದು ಪದ ಹೇಳುತ್ತಾನೆ. ಅದಕ್ಕೆ 'ರಾಮಚಂದ್ರ ನಾಹೀ ಘರೀ ಕಾಯ ಹೀ ಕರಣ' ಈ ಮರಾಠಿ ಪದ್ಯವನ್ನು ಕನ್ನಡ ಲಿಪಿಯಲ್ಲಿ ಬರೆದು ಧಾಟಿಯಾಗಿ ಸೂಚಿಸಿ ಈ ಮಹಾರಾಷ್ಟ್ರದ ಪದದಂತೆ ಅಥವಾ 'ಕೋಮಲಾಂಗಿನಿ, ನಿನಗೆ ತಕ್ಕ ಮೋಹನಾಂಗಿಯು' ಈ ಕನ್ನಡ ಪದದಂತೆ ಎಂದು ಹೇಳಲಾಗಿದೆ. ಶಕುಂತಲೆಯು ದುಷ್ಯಂತ ರಾಜನು ಕೊಟ್ಟ ಉಂಗುರವನ್ನು ಕಳೆದುಕೊಂಡಿದ್ದಾಳೆ. ಇದನ್ನು ಅರಿತ ದುಷ್ಯಂತರಾಜ ಸ್ವಗತ ನುಡಿಯುತ್ತಾನೆ: 'ಇವಳ ಮನಸ್ಸಿನಲ್ಲಿ ಏನೂ ಕಪಟ

ಹೇಳುವುದು ತೋರಿಬರುವುದಿಲ್ಲ. ಆದ್ದರಿಂದ ನನಗೆ ಸಂದೇಹ ಉತ್ಪನ್ನವಾಗುತ್ತದೆ.' ಈ ಮಾತಿನ ಬಳಿಕ ಒಂದು ಕನ್ನಡ ಪದವಿದೆ: 'ಸಾಕೀ ಈ ಮಹಾರಾಷ್ಟ್ರ ವೃತ್ತಾಂತ' ಎಂಬ ಈ ಕನ್ನಡ ಪದಕ್ಕೆ ಸ್ಪಷ್ಟವಾಗಿ ಧಾಟಿ ಸೂಚಿಸಲಾಗಿದೆ. ಆರನೆಯ ಅಂಕಿನಲ್ಲಿ ಎಲ್ಲದಕ್ಕೂ ಹೆಚ್ಚಿನ ಪುರಾವೆ ಇದೆ. ಅಲ್ಲಿ ಮರಾಠಿ ಲಾವಣಿಯ ಸಂಪೂರ್ಣ ಪಲ್ಲವನ್ನು ಕನ್ನಡ ಲಿಪಿಯಲ್ಲಿ ಧಾಟಿಯಾಗಿ ಉದ್ಧೃತ ಮಾಡಿ ಕನ್ನಡ ಲಾವಣಿಯನ್ನು ಓರ್ವ ದಾಸಿಯ ಮುಖಾಂತರ ನುಡಿಸಲಾಗಿದೆ."

"ತಾತ್ಪರ್ಯ, ಕನ್ನಡ ಶಾಕುಂತಲದ ರಚೈತ ಮರಾಠಿ ಸ್ತ್ರೀಗೀತ ಲಾವಣಿ ಮತ್ತು ಸಾಕೀ ಪ್ರಯೋಗವನ್ನೇಕೆ ಕೈಕೊಂಡರು ? ಇದೆಲ್ಲದರ ಊಹಾಪೋಹ ಕೈಕೊಳ್ಳದೇ ಕನ್ನಡ ರಂಗ ಭೂಮಿಯ ಅಧ್ಯಯನಕಾರರು ಮತ್ತು ಕನ್ನಡ ಶಾಕುಂತಲ ನಾಟಕದ ಆವೃತ್ತಿಯನ್ನು ಪ್ರಕಾಶಿಸಿದ ಇತ್ತೀಚಿಗಿನ ಕಟಿ ಮನಸ್ಸಿನ ಕನ್ನಡಿಗರು ಯಾವ ಜವಾಬ್ದಾರಿಕೆಯಿಲ್ಲದೇ ತುರಮುರಿಯ ರಚಿಸಿದ ಕನ್ನಡ ಶಾಕುಂತಲ ನಾಟಕದ ಪ್ರಭಾವ ಮರಾಠಿ ಸಂಗೀತ ಶಾಕುಂತಲದ ಮೇಲೆ ಸಾಕಷ್ಟು ಬೀರಿದೆ ಎಂದು ಹೇಳುತ್ತಿದ್ದಾರೆ. ಇಲ್ಲಿಯವರೆಗೆ ಕೈಕೊಂಡ ವಿವೇಚನೆ ಮತ್ತು ಮಾಹಿತಿಗಳ ಆಧಾರಗಳಿಂದ ತಿಳಿದವರು ಯೋಗ್ಯ ರೀತಿಯಿಂದ ವಿಚಾರಿಸಿ ತಮ್ಮ ಅನುಮತಿ ಕೈಕೊಳ್ಳಬೇಕು ಎಂಬುದೇ ನನ್ನ ನಮ್ರ ವಿನಂತಿ."

ಶ್ರೀ ಮರಾಠೆಯವರ 'ಮರಾಠಿ ರಂಗಭೂಮಿ ಚಾ ಪೂರ್ವರಂಗ' ಗ್ರಂಥದ ಪರೀಕ್ಷಣೆಯನ್ನು ಶ್ರೀ ಯಶವಂತ ಜೋಶಿ ಕೈಕೊಂಡರು. 'ಮಹಾರಾಷ್ಟ್ರ ಟಾಯಿಮ್ಸ್' ತಮ್ಮ ೨೦-೧-೮೦ರ ಸಂಚಿಕೆಯಲ್ಲಿ ಪ್ರಕಟಿಸಿದರು. ಶ್ರೀ ಜೋಶಿಯವರು ತುರುಮುರಿಯ ಕನ್ನಡ ಶಾಕುಂತಲ ನಾಟಕದ ಪ್ರಭಾವ ಮರಾಠಿ ಶಾಕುಂತಲದ ಮೇಲೆ ಸಾಕಷ್ಟು ಉಂಟಾಗಿದೆ ಎಂಬ ಕನ್ನಡ ಟೀಕಾಕಾರರ ವಿಧಾನವನ್ನು ಶ್ರೀ ಮರಾಠೆ ಸಾಧಾರ ಸಪ್ರಮಾಣ ಆಧಾರಗಳ ಮೇಲೆ ಸಿದ್ಧಪಡಿಸಿ ಹಿಂದೆಹಾಕಿದ್ದಾರೆ ಎಂದು ತಮ್ಮ ಪರೀಕ್ಷಣೆಯಲ್ಲಿ ಹೇಳಿದ್ದಾರೆ.

ನಾನೊಂದು ಲೇಖನವನ್ನು ಮರಾಠಿ ಭಾಷೆಯಲ್ಲಿ ಈ ಸಂದರ್ಭದಲ್ಲಿ ಬರೆದೆನು. 'ಮಹಾರಾಷ್ಟ್ರ ಟಾಯಿಮ್ಸ್' ನನ್ನ ಈ ಲೇಖನವನ್ನು ೮-೩-೮೦ ರ ಸಂಚಿಕೆಯಲ್ಲಿ 'ನಾಟ್ಯ ಸೃಷ್ಟಿಯಲ್ಲಿ ಹೊಸ ವಾದ ವಿಷಯ: ಕಿರ್ಲೋಸ್ಕರ ಮತ್ತು ಚುರಮುರಿ' ಎಂಬ ಶೀರ್ಷಿಕೆಯಲ್ಲಿ ಪ್ರಕಾಶನ ಮಾಡಿದರು. ನನ್ನ ಮರಾಠಿ ಲೇಖದಲ್ಲಿ ಕೈಕೊಂಡ ನಿಷ್ಕರ್ಷೆ ಕೆಳಗಿನಂತೆ ಇರುವುದು:

(೧) ಶ್ರೀ ಮರಾಠೆ ಮತ್ತು ಶ್ರೀ ಯಶವಂತ ಜೋಶಿ ಇವರಿಬ್ಬರಿಗೂ ಶೇಷೋ ರಾಮಚಂದ್ರ ಚುರಮುರಿ ಇವರ ಅಡ್ಡ ಹೆಸರು ಚುರಮುರಿಯೋ ತುರಮುರಿಯೋ ಎಂಬುದು ನಿಶ್ಚಿತವಾಗಿ ಗೊತ್ತಿರುವದಿಲ್ಲ.

(೨) ಕನ್ನಡ ಶಾಕುಂತಲದ ಮೂಲ ಆವೃತ್ತಿಯನ್ನು ಮೂರು ಮೂರು ಬಾರಿ ಓದಿದ್ದೇನೆ ಎಂದು ಹೇಳಿದ ಮರಾಠೆ ಅವರಿಗೆ ಕನ್ನಡ ಭಾಷೆಯ ಜ್ಞಾನವಿದೆ. ಆದರೆ ಅವರಿಗೆ ಕನ್ನಡ ನಾಟ್ಯ ಸಾಹಿತ್ಯದ ಇತಿಹಾಸದ ಅ-ಬ-ಕ ದ ಗಂಧವಿಲ್ಲ. ಮೂಲ ಆವೃತ್ತಿಯ ಮುಖಪುಟದ ಮೇಲೆ ಶೇಷೋ ರಾಮಚಂದ್ರ ಚುರಮುರಿ ಎಂದು ಬರೆದುದನ್ನು ನೋಡಲು ದೊರಕಿರಲೂ ಇಲ್ಲ. ಕುಂ. ಸೌ. ಪುಷ್ಪಾ ಭಾವೆ ಇವರು 'ವಿವಿಧ ಜ್ಞಾನ ವಿಸ್ತಾರ' ಮರಾಠಿ ಪತ್ರಿಕೆಯ ಮೇಲೆ ತಯಾರಿಸಿದ ಗ್ರಂಥಸೂಚಿಯಲ್ಲಿ ಚುರಮುರಿಯವರ ಲೇಖನಗಳ ಉಲ್ಲೇಖವಿದೆ ಮಾತ್ರವಲ್ಲ, ಚುರಮುರಿ ಎಂಬುದೇ ಇವರ ನಿಶ್ಚಿತ ಅಡ್ಡಹೆಸರು ಎಂದು ಸಿದ್ಧಮಾಡಲು ಸಬಲ ಆಧಾರಗಳಿವೆ.

(೩) ಮೂಲ ಕನ್ನಡ ಆವೃತ್ತಿಯನ್ನು ಬಚ್ಚಿಟ್ಟಿದ್ದಾರೆ. ಕನ್ನಡ ಶಾಕುಂತಲ ೧೮೮೦ರ ಒಳ ಹೊರಗೆ ಬರೆದಿರಬಹುದು ಎಂದು ಮರಾಠೆ ತಮ್ಮ ಪುಸ್ತಕದಲ್ಲಿ ಹೇಳಿದ್ದಾರೆ. ನನ್ನ ಹತ್ತಿರ ಪ್ರಪಂಚದ ಎಲ್ಲ ಭಾಷೆಗಳಲ್ಲಿ ಯಾವ ಪಂಡಿತರು ಯಾವ ವರುಷ, ಯಾವ ಭಾಷೆಯಲ್ಲಿ, ಯಾವ ದೇಶದಲ್ಲಿ, ಮಹಾಕವಿ ಕಾಲಿದಾಸನ ಶಾಕುಂತಲ ನಾಟಕವನ್ನು ಅನುವಾದಿಸಿದರು, ರೂಪಾಂತರಿಸಿದರು ಮತ್ತು ಪ್ರಕಾಶಿತವಾದ ವರುಷ ಇತ್ಯಾದಿಗಳ ಸಂಗ್ರಹವಿದೆ. ಅದರಲ್ಲಿ ಚುರಮುರಿಯ...

ಶಾಕುಂತಲ ನಾಟಕದ ಮೊದಲನೆಯ ಆವೃತ್ತಿ ಇಂಡಿಯಾ ಆಫೀಸ್ ಲಾಯಬ್ರರಿ ಆ್ಯಂಡ್ ರೆಕಾರ್ಡ್ಸ್ ಫೋರೇನ್ ಆ್ಯಂಡ್ ಕಾಮನ್‌ವೆಲ್ತ ಆಫೀಸ ಲಂಡನ್ನಿನಲ್ಲಿ ಉಪಲಬ್ಧವಿದ್ದ ಬಗ್ಗೆ ಮಾಹಿತಿ ದೊರೆಯುವುದು. ಈ ಆಧಾರದ ಮೇಲಿಂದ ಮೊದಲಿನ ಆವೃತ್ತಿಯ ಮುಖಪುಟ ಮತ್ತು ಕೊನೆಯ ಪುಟ ಲಂಡನ್ನಿನಿಂದ ದೊರಕಿಸಿ ನನ್ನ ಮರಾಠಿ ಲೇಖನಕ್ಕೆ ಪುರಾವೆಯಾಗಿ ಸೇರಿಸಿದೆ. ಮುಖಪುಟದ ಮೇಲೆ ಹಿಂದೂ ಪಂಚಾಂಗದ ಪ್ರಕಾರ ೧೭೯೧, ಕ್ರೈಸ್ತ ಕ್ಯಾಲೆಂಡರ್ ಪ್ರಕಾರ ೧೮೭೦ ಎಂದು ತೋರಿಸಿದೆ. ಕೊನೆಯ ಪುಟ (೧೩೯) ಚುರಮುರಿಯವರು ಶಾಕುಂತಲ ನಾಟಕವನ್ನು ಕನ್ನಡಿಸುವುದನ್ನು ಕೊನೆಗಾಣಿಸಿದ ದಿನದ ಬಗ್ಗೆ ಸೂಚಿಸುವ ಒಗಟು ಪದ್ಯದಲ್ಲಿದೆ. ಇದೇ ಪುಟದ ಕೆಳಭಾಗದಲ್ಲಿ ಇಂಗ್ಲೀಷಿನಲ್ಲಿ ಈ ನಾಟಕ ಮುದ್ರಿತವಾದ ಸ್ಥಳ ನಿರ್ದೇಶನವೂ ಇದೆ. ಇಂದಿನ ವರೆಗೆ ಹೊರಟ ಚುರಮುರಿಯವರ ಶಾಕುಂತಲದ ನಾಲ್ಕು ಆವೃತ್ತಿಗಳ ಬಗ್ಗೆ ಉಲ್ಲೇಖ ಕೈಕೊಂಡೆ. ಈ ಎಲ್ಲ ಸಬಲ ಆಧಾರಗಳ ಹಿನ್ನೆಲೆಯಲ್ಲಿ ಶ್ರೀ ಮರಾಠೆ ತಮ್ಮ 'ಮರಾಠಿ ರಂಗಭೂಮಿಚಾ ಪೂರ್ವರಂಗ' ಗ್ರಂಥದಲ್ಲಿ ಹೇಳಿದ ಸಂಗತಿಗಳಿಗೆ ಯಾವ ಆಧಾರವೂ ಇರುವುದಿಲ್ಲ. ಅವರು ಕೈಕೊಂಡ ನಿಷ್ಕರ್ಷೆ ಮತ್ತು ವಿಚಾರಗಳು ಸರಿಯಾಗಿರುವದಿಲ್ಲವಲ್ಲದೇ ಮರಾಠೆಯವರು ವಾಚಕರನ್ನು ಸಂಶೋಧಕರನ್ನೂ misguide (ದಿಗ್ಭ್ರಮೆ) ಮಾಡುತ್ತಿದ್ದಾರೆ. ಒಂದು ವೇಳೆ ಮರಾಠೆಯವರ ಹತ್ತಿರ ಚುರಮುರಿಯವರು ಕನ್ನಡ ಶಾಕುಂತಲ ನಾಟಕವನ್ನು ೧೮೮೦ರ ಹಿಂದು ಮುಂದು ಬರೆದಿದ್ದಾರೆ ಎಂಬುದರ ಬಗ್ಗೆ ಆಧಾರಗಳಿದ್ದರೆ, ಧೈರ್ಯವಿದ್ದರೆ ಮುಂದೆ ಬರಬೇಕು, ಸಿದ್ಧಮಾಡಬೇಕು ಎಂಬ ಆಹ್ವಾನವನ್ನು (ಪುರಾವಾ ಅಸೇಲ ತರ ಪುಢೆ ಆಣಾ) ಕೊಟ್ಟೆನು. ಇಂದಿನ ವರೆಗೆ ಯಾವ ಮರಾಠಿ ಟೀಕಾಕಾರರಾಗಲಿ ಸಂಶೋಧಕರಾಗಲೀ ನನ್ನ ಆಹ್ವಾನವನ್ನು ಸ್ವೀಕರಿಸಿರುವದಿಲ್ಲ.

ಶ್ರೀ ಮರಾಠೆ ತಮ್ಮ ಗ್ರಂಥದಲ್ಲಿ ಹೇಳಿದ ಸಂಗತಿಗಳ ಬಗ್ಗೆ ನನ್ನ ವಿಚಾರಗಳನ್ನು ಕೂಲಂಕಷವಾಗಿ ಹೇಳಬಯಸುವೆನು.

(೧) ಕಿರ್ಲೋಸ್ಕರರ ಜನ್ಮಗ್ರಾಮ ಈಗ ಕರ್ನಾಟಕದಲ್ಲಿದ್ದರೂ ಈ ಮೊದಲು ಮುಂಬೈ ಇಲಾಖೆಯಲ್ಲಿತ್ತು. ಅಲ್ಲದೆ ಗುರ್ಲಹೊಸೂರು ಕಿರ್ಲೋಸ್ಕರರ ಕಾಲದಲ್ಲಿ ಸಾಂಗಲೀ ಸಂಸ್ಥಾನದಲ್ಲಿ ಬರುತ್ತಿತ್ತು ಎಂದು ಮರಾಠೆ ಹೇಳಿದ್ದಾರೆ.

ಮರಾಠೆ ಅವರ ಈ ಇತಿಹಾಸದ ಜ್ಞಾನ ಸ್ತುತ್ಯವಿದೆ. ಉತ್ತರ ಕರ್ನಾಟಕದ ನಾಲ್ಕು ಜಿಲ್ಲೆಗಳಾದ ವಿಜಾಪುರ, ಧಾರವಾಡ, ಬೆಳಗಾಂವ, ಕಾರವಾರ ಇವು ಕೂಡ ಮುಂಬೈ ಇಲಾಖೆಗೆ ಸೇರಿದ್ದವು. ಮುಂಬೈ ಇಲಾಖೆಯಲ್ಲಿ ಸಿಂಧ ಪ್ರಾಂತ (ಸದ್ಯದ ಪಾಕಿಸ್ತಾನ) ಗುಜರಾಥ ಕೂಡ ಇದ್ದುದನ್ನು ಮರಾಠೆ ಇವರು ಮರೆತಿದ್ದಾರೆ! ಮುಂಬೈ ವಿಶ್ವವಿದ್ಯಾಲಯದ ಪರಿಘದಲ್ಲಿ ಸಿಂಧ ಪ್ರಾಂತ ಉತ್ತರ ಕರ್ನಾಟಕದ ನಾಲ್ಕು ಜಿಲ್ಲೆ, ಗುಜರಾಥ ಇವುಗಳ ಸಮಾವೇಶವೂ ಇದ್ದುದು ಮರಾಠೆ ಇವರಿಗೆ ಜ್ಞಾಪಕವಿರಬಹುದು. ಆದರೆ ಅವರು ಈ ಎಲ್ಲ ಸತ್ಯ ಸಂಗತಿಗಳನ್ನು ಬಚ್ಚಿಟ್ಟಿದ್ದಾರೆ. ಇದು ಶೋಚನೀಯವಾಗಿದೆ. ಸಾಂಗಲಿ ಊರಲ್ಲಿ ಒಂದು ಪುರಾತನ ದೇವಾಲಯವಿದೆ. ಅದು ಬಹುಶಃ ಗ್ರಾಮದೇವಿಯದು. ಹೆಸರು ಕಂಗಣ್ಣೇಶ್ವರಿ ಎಂದಿದೆ. ಸಂಶೋಧಕರು ಇದನ್ನು ಮನಗಾಣಬಹುದು.

ಕ್ರಿಸ್ತಪೂರ್ವ ೧೦೦ ರಿಂದ ಕ್ರಿಸ್ತ ಶಕ ೧೨೨೫ರ ವರೆಗೆ ಆಂಧ್ರಭೃತ್ಯ ಚಾಲುಕ್ಯ ರಾಷ್ಟ್ರಕೂಟರೂ ಕ್ರಿಸ್ತ ಶಕ ೧೨೦೮ ರಿಂದ ಕ್ರಿಸ್ತ ಶಕ ೧೬೭೪ ರ ವರೆಗೆ ಮುಸಲ್ಮಾನರ ಸತ್ತೆ ಮಹಾರಾಷ್ಟ್ರದ ಮೇಲೆ ಉಂಟಾಗಿತ್ತು. ಶಿವಾಜಿ ಮಹಾರಾಜನು ಕ್ರಿಸ್ತಶಕ ೧೬೪೬ರಲ್ಲಿ ತೋರಣ ಕೋಟೆಯನ್ನು ಕೈವಶ ಮಾಡಿಕೊಂಡ ಬಳಿಕ ಮಹಾರಾಷ್ಟ್ರಕ್ಕೆ ಸ್ವತಂತ್ರ ಅಸ್ತಿತ್ವ ಉಂಟಾಯಿತು. ಇದಲ್ಲದೆ ಕ್ರಿಸ್ತ ಪೂರ್ವ ೩-೪ ಲಕ್ಷ ಸಮ್ರಾಟ ಅಶೋಕ ಚಕ್ರವರ್ತಿ ಬೌದ್ಧ ಧರ್ಮದ ಪ್ರಚಾರಕ್ಕಾಗಿ ಭಿಕ್ಷುಗಳನ್ನು ಉತ್ತರ ಮತ್ತು ದಕ್ಷಿಣ ಕೊಂಕಣಕ್ಕೆ ಕಳುಹಿದನು. ಕ್ರಿಸ್ತಶಕ ೧೮ಕ್ಕೆ ಆಂಧ್ರಭೃತ್ಯರ ರಾಜ್ಯ ಪ್ರಾರಂಭವಾಯಿತು. ಶಾತವಾಹನರು ಕರ್ನಾಟಕ, ದಕ್ಷಿಣ ಕೊಂಕಣ (ಗೋವಾ)ಗಳ ಮೇಲೆ

ಪ್ರಭುತ್ವ ಸ್ಥಾಪಿಸಿದವರಲ್ಲಿ ಮೊದಲಿಗರು. ಬಳಿಕ ಕದಂಬ, ಚಾಲುಕ್ಯ, ರಾಷ್ಟ್ರಕೂಟ ವಂಶಜರು ದಕ್ಷಿಣ ಕೊಂಕಣದಲ್ಲಿ ರಾಜ್ಯಸತ್ತೆ ಸ್ಥಾಪಿಸಿದರು. ಚಾಲುಕ್ಯ ರಾಷ್ಟ್ರಕೂಟ ಶಿಲಾಹಾರ ರಾಜರ ಆಕ್ರಮಣದಿಂದ ಕದಂಬ ರಾಜ್ಯ ಕ್ರಿಸ್ತ ಶಕ ೧೧೦ರಲ್ಲಿ ನಷ್ಟವಾಗಿ ಪುನಃ ೩೦ ವರುಷಗಳ ನಂತರ ಕದಂಬರು ತಮ್ಮ ಸತ್ತೆಯನ್ನು ಸ್ಥಾಪಿಸಿದರು. ದೇವಗಿರಿ ಯಾದವರ ಸತ್ತೆ ಕ್ರಿಸ್ತ ಶಕ ೧೩–೩೩ರ ವರೆಗೆ ಗೋವೆಯ ಮೇಲೆ ಇತ್ತು. ಮಧ್ಯ ಮಹಾರಾಷ್ಟ್ರದ ಭಾಗಗಳಾದ ಸಾಂಗಲಿ ಮತ್ತು ಮಿರಜಗಳ ಮೇಲೆ ಕರ್ನಾಟಕದ ಸಂಬಂಧ ಉಂಟಾಗುವ ಮೊದಲು ಕ್ರಿಸ್ತ ಶಕ ೧೩೩೭ ರಿಂದ ಕ್ರಿಶ್ತ ಶಕ ೧೪೩೮ ರ ವರೆಗೆ ವಿಜಯನಗರದ ರಾಜರ ಅಧಿಕಾರ ಗೋವೆಯ ಮೇಲೆ ಇತ್ತು. ಶ್ರೀ ಶ್ಯಾಮಜಿ ನಾಯಿಕ ಕಾಳೆ ಎಂಬ ಶಾಂಡಿಲ್ಯ ಗೋತ್ರದ ಬ್ರಾಹ್ಮಣ ಮೌಜೆ ಆಡಿವರೆ ನಿವಾಸಿ. ಈತನು ಕರ್ನಾಟಕದಲ್ಲಿ ಕ್ರಿಸ್ತ ಶಕ ೧೭೭೮೮ರಲ್ಲಿ ಪ್ರಸಿದ್ಧ ಕೀರ್ತನಕಾರನಾಗಿದ್ದ. ಮರಳಿ ತನ್ನ ಗ್ರಾಮಕ್ಕೆ ಬರುವಾಗ್ಗೆ ಕರ್ನಾಟಕದ ದಶಾವತಾರ ಆಟದ ಕಲೆಯನ್ನು ಆತ್ಮಗತ ಮಾಡಿಕೊಂಡು ತನ್ನ ಗ್ರಾಮ ನಿವಾಸಿಗಳೆದುರು ಪ್ರಯೋಗ ಕೈಕೊಂಡನು. ಈ ಕಲೆ ಇನ್ನುವರೆಗೂ ಮಹಾರಾಷ್ಟ್ರದಲ್ಲಿದೆ. ಕರ್ನಾಟಕದಲ್ಲಿಯ ಶಾಲೆಗಳಲ್ಲಿ ಹೋದ ಶತಮಾನದಲ್ಲಿ ಕನ್ನಡದ ಬದಲು ಮರಾಠಿ ಭಾಷೆಯನ್ನೇ ಕಲಿಸುತ್ತಿದ್ದರು. ವಿಜಾಪುರ ಜಿಲ್ಲೆಯ ಕಲಾದಗಿಯಿಂದ ಹೊರಟ ಮೊದಲಿನ ವೃತ್ತಪತ್ರ 'ಬಿತೋಚ್ಛು' ಹೊರಟದ್ದು ಮರಾಠಿ ಭಾಷೆಯಲ್ಲಿ.

ಮರಾಠೆ ಅವರು ಈ ಎಲ್ಲ ಸಂಗತಿಗಳನ್ನೂ ಬಿಚ್ಚಿಟ್ಟಿದ್ದಾರೆ.

(೨) ಚೆನ್ನಬಸಪ್ಪಾ ತುರುಮರಿ ಎಂಬ ಕ್ರಿಸ್ತೀ ಮತಾಂತರನಾದ ಲಿಂಗಾಯತನ ಆಶ್ರಿತನಾಗಿ ತಮ್ಮ ಸೇವಾನಿವೃತ್ತಿ ನಂತರ ಧಾರವಾಡಕ್ಕೆ ಚುರಮುರಿ ಅವರು ಕಾಲಕಳೆಯತೊಡಗಿದರು ಎಂದು ಮರಾಠೆ ಹೇಳಿದ್ದಾರೆ.

ಶ್ರೀ ಚುರಮುರಿ ಶೇಷಗಿರಿರಾಯರು ಯಾರ ದ್ದುಲ್ತರಾಗಿದ್ದಿಲ್ಲ. ಏಕಾಕೀ ಜೀವನವನ್ನು ಸ್ವೀಕರಿಸಿ [illegible] ದೇಸಾಯಿ ಓಣಿಯಲ್ಲಿ, ಬಳಿಕ ಊರ ಹೊರಗಿನ ಕೋರ್ಟಿನ ಬಳಿ ಇದ್ದರು. ಮರಣದ ನಂತರ ಇವರ ಪುಸ್ತಕ ಭಂಡಾರದ ಬೆಲೆ ಮೂರು ಸಾವಿರದ ವರೆಗೆ ಇತ್ತೆಂಬ ಸಂಗತಿಯನ್ನು ಮುದವೀಡು ಕೃಷ್ಣರಾಯರು ಕನ್ನಡ ಶಾಕುಂತಲ ನಾಟಕದ ನಾಲ್ಕನೆಯ ಆವೃತ್ತಿಯಲ್ಲಿ ಹೇಳಿದ್ದಾರೆ.

(೩) ಚುರಮುರಿಯವರು ಹಲಸಿ ಗ್ರಾಮದವರು. ಹಲಸಿಕರ ನಾಟಕ ಕಂಪನಿ ಇವರ ಶಾಕುಂತಲ ನಾಟಕವನ್ನು ಪ್ರದರ್ಶಿಸುತ್ತಿದ್ದರು ಎಂದು ಮರಾಠೆ ಅವರು ಅನುಮಾನಪಟ್ಟಿದ್ದಾರೆ. ಡಾ. ಎಚ್. ಕೆ. ರಂಗನಾಥರು, ಹಲಸಿಗಿ ಮಂಡಳಿ ತನ್ನ ಪರಿಣತ ಕಲಾವೃಂದ ಹಾಗೂ ಪ್ರದರ್ಶನ ಕೌಶಲದಿಂದಾಗಿ ಪ್ರಸಿದ್ಧಿ ಪಡೆದುದು ನಿಜ; ಅದು ಹುಟ್ಟಿದುದು ೧೮೭೮–೭೯ರಲ್ಲಿ. ಮೊದಲ ನಾಟಕಗಳಾಡಿದ ಬಳಿಕ ಅದು ಸ್ವಲ್ಪ ಕಾಲ ಸ್ಥಗಿತವಾಯಿತು; ಮತ್ತೆ ೧೮೮೨ ರಲ್ಲಿ ಮೈಗೂಡಿಸಿಕೊಂಡು ಪ್ರವಾಸದಲ್ಲಿದ್ದಾಗ ಮುದವೀಡು ಕೃಷ್ಣರಾಯರು ಶಿರಸಿಯಲ್ಲಿ ಅದರ ಸೊಗಸಾದ ಪ್ರದರ್ಶನಗಳನ್ನು ನೋಡಿದರು ಎಂದು ಹೇಳಿದ್ದಾರೆ. ಚುರಮುರಿಯವರ 'ಶಾಕುಂತಲ' ನಾಟಕವನ್ನು ರಂಗಭೂಮಿಯ ಮೇಲೆ ಹಲಸಗಿ ನಾಟಕ ಕಂಪನಿ ಪ್ರದರ್ಶಿಸಿದರೆಂದೂ ಚುರಮುರಿಯವರು ಹಲಸಗಿಯವರೆಂದೂ ಹೇಳಲು ಯಾವ ಸಬಲ ಆಧಾರ ಕಾಣುವುದಿಲ್ಲ.

(೪) ಚುರಮುರಿಯವರು ಬೆಳಗಾವಿಯಲ್ಲಿ ಪಿ. ಡಬ್ಲ್ಯು. ಡಿ. ಖಾತೆಯಲ್ಲಿ ಕೆಲಸ ಮಾಡುತ್ತಿದ್ದರು ಇತ್ಯಾದಿ ಉಲ್ಲೇಖಿದೊಡನೆ ಪಿ.ಡಬ್ಲ್ಯು.ಡಿ ಖಾತೆಯಲ್ಲಿ ಕೆಲಸ ಮಾಡುತ್ತಿದ್ದಾಗ ಶಾಕುಂತಲ ನಾಟಕವನ್ನು ಕನ್ನಡದಲ್ಲಿ ಅನುವಾದಿಸಿ ಪ್ರಕಟಿಸಿದರು. ಸೇವಾನಿವೃತ್ತಿಯ ನಂತರ ಧಾರವಾಡದಲ್ಲಿ ವಾಸಿಸುತ್ತಿದ್ದರು. ಮರಣ ಸಮಯ ವಯಸ್ಸು ನಾಲ್ವತ್ತರ ಒಳ ಹೊರಗೆ ಇರಬಹುದು. ಪಿತ್ತಾರಿ ವಾಯು ಹೊಟ್ಟೆಯೊಳಗೆ ಹೋಗಿ ಆಕಸ್ಮಿಕ ನಿಧನವಾಯಿತು. ಮೃತದೇಹದ ಅಂತ್ಯಕ್ರಿಯೆಗೆ ಯಾರೂ ಮುಂದೆ ಬರಲಿಲ್ಲ ಎಂದು 'ಬೆಳಗಾಂವ ಸಮಾಚಾರ' ಪತ್ರಿಕೆಯಲ್ಲಿ ಪ್ರಕಟವಾದ ಚುರಮುರಿ ಇವರ [illegible] ಮೃತ್ಯುಲೇಖನದ ಆಧಾರವನ್ನು ಮರಾಠೆಯವರು ಪ್ರಮಾಣವಾಗಿ ತೆಗೆದುಕೊಂಡಿದ್ದಾರೆ.

ಆದರೆ ಬೆಳಗಾವಿಯ ಪಿ.ಡಬ್ಲ್ಯು.ಡಿ. ಖಾತೆಯಲ್ಲಿ ಯಾವ ವರುಷ ಕೆಲಸಕ್ಕೆ ಇದ್ದರೆಂಬುದನ್ನು ಹೇಳಿಲ್ಲ. ಪಿ.ಡಬ್ಲ್ಯು.ಡಿ. ಖಾತೆಯಲ್ಲಿ ಕೆಲಸ ಮಾಡುತ್ತಿದ್ದಾಗ ಶಾಕುಂತಲ ನಾಟಕವನ್ನು ಕನ್ನಡಿಸಿ ಪ್ರಕಟಿಸಿದರು. ಇದು ನಿಜ. ಶಾಕುಂತಲ ನಾಟಕ ಬರೆದ ಕಾಲ ೧೮೬೯-೭೦. ಚುರಮುರಿಯವರು ೧೮೬೩ ರಿಂದ ೧೮೭೦ರ ಕೊನೆಯವರೆಗೆ ಮುಂಬೈ ಶಹರದಲ್ಲಿ ಇದ್ದರೆಂದು ಹೇಳಲು 'ವಿವಿಧ ಜ್ಞಾನವಿಸ್ತಾರ' ಪತ್ರಿಕೆಯಲ್ಲಿ ಪ್ರಕಾಶಿತವಾದ ಜಂಬಾದಾರರ ಪಟ್ಟಿಯಲ್ಲಿ ಬರೆದ ವಿಳಾಸದ ಮೇಲಿಂದ ತಿಳಿದುಬರುವದು. ೧೮೬೯-೭೦ರಲ್ಲೂ ಮುಂಬೈಯಲ್ಲಿದ್ದರು ಎಂಬುದಕ್ಕೆ ಶಾಕುಂತಲ ನಾಟಕದ ಮುಖಪುಟವೇ ಸಾಕ್ಷಿಯಾಗಿದೆ. ಆದುದರಿಂದ 'ಬೆಳಗಾಂವ ಸಮಾಚಾರ'ದಲ್ಲಿ ಹೇಳಿದ ಸಂಗತಿ ಸಂದಿಗ್ಧವಾಗಿದೆ. ನಿವೃತ್ತಿಯ ವಯಸ್ಸು ಹೋದ ಶತಮಾನದಲ್ಲಿಯೂ ಐವತ್ತು ವರ್ಷದ ನಂತರವೇ ಸಾಗುತ್ತಿತ್ತಲ್ಲದೇ ಇನ್ನೂ ಬೇರೆ ನಿಯಮಗಳಿದ್ದವು. ಅಂದ ಬಳಿಕ ಮರಣ ಸಮಯಕ್ಕೆ ಇವರ ವಯಸ್ಸು ನಾಲ್ವತ್ತರ ಒಳ ಹೊರಗೆ ಎಂದು ಹೇಳಿದ ಬೆಳಗಾಂವ ಸಮಾಚಾರಕಾರನಿಗೆ ಇವರ ಮರಣ ಸಮಯದ ವಯಸ್ಸು ಗೊತ್ತಿರಲಿಕ್ಕಿಲ್ಲವೆಂದೇ ಹೇಳಬೇಕಾಗುವದು. ವಿಷಾರಿ ಹಾವು ಹೊಟ್ಟೆಯೊಳಗೆ ಹೋಗಿ ನಿಧನವಾಯಿತೆಂಬುದು ಸತ್ಯ. ಮೃತದೇಹದ ಸಂಸ್ಕಾರಕ್ಕೆ ಯಾರೂ ಮುಂದೆ ಬರಲಿಲ್ಲ. ವಿಷಾರಿ ಹಾವು ಹೊಟ್ಟೆಯೊಳಗೆ ಹೋದುದರಿಂದ ಮರಣ ಉಂಟಾಗಿದೆ ಎಂದು ತಿಳಿದ ಜನರು ಹೋದ ಶತಮಾನದಲ್ಲಾಗಲಿ ಈ ಶತಮಾನದಲ್ಲಾಗಲಿ ಹೀಗೆ ಧೈರ್ಯ ಮಾಡಲಾರರು. ಅದೂ ಕೂಡ ಚುರಮುರಿಯವರು ಆಗಿನ ಕಾಲದ ಧಾರವಾಡದ ಊರ ಹೊರಗೆ ವಾಸಿಸುತ್ತಿದ್ದರು. ಆಗಿನ ಕಾಲದವರ ಆಚಾರ ವಿಚಾರ ಸಾಮಾಜಿಕ ಪರಿಸ್ಥಿತಿ ಮುಂತಾದವುಗಳನ್ನು ಬೆಳಗಾಂವ ಸಮಾಚಾರಕಾರನು ಗಮನದಲ್ಲಿ ತೆಂದುಕೊಂಡಂತೆ ತೋರದು. ಹೀಗಾಗಿ ಬೆಳಗಾಂವ ಸಮಾಚಾರ ಪತ್ರಿಕೆಯಲ್ಲಿಯ ಸಂಗತಿ ಸಂಪೂರ್ಣ ಆಧಾರವಾಗಿರಲಾರದು.

(೫) ಬೆಳಗಾವಿಯಲ್ಲಿ ನೌಕರಿಗಿದ್ದು ತುರ

ಕಾಲಹರಣ ಮಾಡುತ್ತಿದ್ದಾರೆಂಬುದಕ್ಕೆ ಮರಾಠಿಯವರು ಇನ್ನಾವ ಆಧಾರವನ್ನೂ ಕೊಟ್ಟಿಲ್ಲ. ಶೇಷಗಿರಿರಾಯರು ಏಕಾಕೀ ಜೀವನವನ್ನು ಅನುಸರಿಸುತ್ತಿದ್ದರು.

(೬) ಆವೃತ್ತಿಕಾರರು ಕೈಚಳಕ ಮಾಡಿದ್ದಾರೆ ಎಂದೂ ಮರಾಠಿ ಹೇಳಿದ್ದಾರೆ.

ಎರಡನೆಯ ಆವೃತ್ತಿಯು ಚುರಮುರಿಯವರ ಮರಣಪೂರ್ವ ಪ್ರಕಾಶಿತವಾಯಿತು. ಮೊದಲಿನ ಆವೃತ್ತಿಯಲ್ಲಿ ದೊರೆಯುವ ಕೆಳಗಿನ ಪದ್ಯಗಳನ್ನು ಎರಡನೆಯ ಆವೃತ್ತಿಯಲ್ಲಿ ಲೇಖಕರೇ ತೆಗೆದು ಹಾಕಿದ್ದಾರೆ:

ಅಂಕು ೧: ಪಂದು ಕಂಡು ಬೆವರ್ವಾಶ್ರಮದೊಳ್ ಎಂಬ ಪದಕ್ಕಿಂತ ಮೊದಲು

ಮದಿರಾ ವೃತ್ತ:

ತುಂಗಮೃಗಂಗಳ ಸಂಗದ ಸಂಗರ ಸಂಗತಿಂಗೆ ತುರುಗಂಗಳಿನಾವೇ। ಪಂಗೊಡೆ ಜತ್ತಿ ನೊಳೊತ್ತರಿಸುತ್ತರೆ ಕತ್ತಲೆತ್ತಲುರೆ ಮುತ್ತಿತು ಕಿಂಧೂ॥ ಕೀಂಗತಿ ಜಟೆಗಳಿಟ್ಟಿಹ ದಟ್ಟ ನೊಲೊಟ್ಟ ಬಟ್ಟೆಗಳು ಕಟ್ಟವವೀಮ್ಮ। ಘಾಂಗಗಳಿಂಗೆ ತೊಡಂಗಿಹವಂ ಮುಡಿಯಾಗಿ ತಿಂಗಡಿಮುನ್ನೆಗೆಡ ಬನ್ನಿ॥

ಅಂಕು ೨: ನನ್ನ ಸುತ್ತ ಒಳ್ಳೆ ಪೀಕಲಾಟ ಬಂತು ಎಂಬ ಅರಸನ ಸಂಭಾಷಣೆಯ ನಂತರ,

ಸ್ರುತ ವಿಲಂಬಿತ:

ಬಿಸಿಲಿನೊಳಿರೆ ಪರ್ವತ ನೀಗದೆ। ನದಿಯು
ಹಾರಿಯ ನಿಕ್ಕಿದಿ ಮಾಣ್ದಿದೊಂ
ಪದರ ಓಲ್ಮನಸಾಗಿದೆ ಎನ್ನದಿ। ಗೊದಗೆ
ಜೀರಿಪಕಾರ್ಯಗಳೇಸಿದು॥

ಅಂಕು ೩: ಕೇಳತಕ್ಕದ್ದೇ ಕೇಳಿದೆ ಎಂಬ ಅರಸನ ಮಾತಿನ ಬಳಿಕ

ಶಾರ್ದೂಲ ವಿಕ್ರೀಡಿತ:

ದಾಹಂ ತೋರ್ಪನು ಮೇಘದುಂಬಿರೆ ಮಹಾಲ
ಮಧ್ಯಾಹ್ನದೊಳ್ ಭಾಸ್ಕರಂ। ದೇಹಂ ಶಾಂತಿ
ಸುತಿರ್ಪ ಸಂಜೆಯಲಿ ತಾಂಪರ್ಜನ್ಯದಿಂದಾ ತೆರಂ।
ಈ ಹೂ ಬಾಣನು ಬಾಧೆಯಂ ಬಡಿಸುವಂತಾಸೇ
ಪದುಂ ತಾಸ್ಯೆ ಅಹಾ ಎನ್ನಯ ತಾಪನೊಂದಿತು
ಕಣಾ ಕೇಳತಕ್ಕದ್ದೇ ಕೇಳಿದೆ.॥ (೧)

ತಮ್ಮ ತಪ್ಪನ್ನು ಕನ್ನಡ-ಮರಾಠಿ ಬಲ್ಲವರು ಕಂಡುಹಿಡಿಯುವರು ಎಂಬುದನ್ನು ಮರಾಠೆಯವರು ಮನಗಂಡಿರಬಹುದು. ಆದುದರಿಂದ ಆ ಸ್ವತಂತ್ರ ವಿಷಯ ಸಣ್ಣದಾಗಿರದೇ ಕನ್ನಡಿಗರದ್ದಾಗಿದೆ, ಎಂದು ಹೇಳಿ ಪಾರಾಗಲು ಪ್ರಯತ್ನಿಸಿದ್ದಾರೆ. ಮೊದಲಿನ ಆವೃತ್ತಿಯನ್ನು ಮೂರು ಮೂರು ಬಾರಿ ನೋಡಿದ ಮರಾಠೆಯವರಿಗೆ ಮುಖಪುಟವನ್ನು ನೋಡಲು ದೊರೆತಿರಲಿಕ್ಕಿಲ್ಲ. ನನ್ನ ಅಜ್ಜಿ ನಾನು ಚಿಕ್ಕವನಿದ್ದಾಗ ಒಂದು ಕಥೆ ಹೇಳುತ್ತಿದ್ದಳು. ಒಂದು ಹುಂಜಕ್ಕೆ ಗರ್ವ ಬಂತಂತೆ. ನಾನು ಕೂಗುವೆ; ಅದರಿಂದಲೇ ಸೂರ್ಯ ಎಚ್ಚರವಾಗುವ ಎಂದು ಆ ಹುಂಜ ನಂಬಿತ್ತು. ಒಂದು ದಿನ ಕೂಗಲಿಲ್ಲ. ತನ್ನ ಗೂಡಿನಲ್ಲಿಯೇ ಕುಳಿತಿತು. ಆದರೆ ಸೂರ್ಯೋದಯ ಆಗುವಂತೆಯೇ ಆಯಿತು. ಚುರಮುರಿಯವರ ಮೂಲ ಆವೃತ್ತಿಯನ್ನು ಯಾರೂ ಬಚ್ಚಿಟ್ಟಿಲ್ಲ; ಅದು ಸೂರ್ಯದೇವನಂತೆ ಸ್ವಯಂಪ್ರಭೆಯಿಂದ ತನ್ನ ಕಾರ್ಯವನ್ನು ತಾನು ಮಾಡುತ್ತಲಿದೆಯೆಂಬ ಸತ್ಯ ಸಂಗತಿಯನ್ನೇ ಬಚ್ಚಿಡಲು ಪ್ರಯತ್ನಿಸಿದ ಮರಾಠೆಯವರ ಪರಿಸ್ಥಿತಿ ನನ್ನ ಅಜ್ಜಿಯು ಹೇಳುತ್ತಿದ್ದ ಕಥೆಯಲ್ಲಿಯ ಹುಂಜದಂತಾಗಿದೆ.

(೭) ಚುರಮುರಿಯವರ ಕನ್ನಡ ಶಾಕುಂತಲದ ಮೇಲೆ ಅಣ್ಣಾ ಕಿರ್ಲೋಸ್ಕರ 'ಬುಕಿಶ್' ನಾಟಕ ಶಂಕರ ದಿಗ್ವಿಜಯದ (೧೮೭೩) ಪ್ರಭಾವ ಉಂಟಾಗಿದೆ. ಕನ್ನಡ ಶಾಕುಂತಲದಲ್ಲಿ ಮರಾಠಿ ಶಂಕರ ದಿಗ್ವಿಜಯದ ತಂತ್ರವನ್ನೇ ಬಳಸಿದ್ದಾರೆ ಎಂದು ಮರಾಠೆ ಬರೆದಿದ್ದಾರೆ.

ನಾನು ಕನ್ನಡ ಶಾಕುಂತಲ ಮೊದಲಿನ ಆವೃತ್ತಿಯ ಮುಖಪುಟ ಮತ್ತು ಕೊನೆಯ ಪುಟದ ರೇಖಾಪ್ರತಿಯನ್ನು ಈ ಲೇಖನದ ಕೊನೆಗೆ ಸೇರಿಸಿದ್ದೇನೆ. ಇದು ಅತಿ ಪ್ರಮುಖವಾದ ಆಧಾರವಾಗಿದೆ. ಕನ್ನಡ ಶಾಕುಂತಲದ ಮೇಲೆ ಎಷ್ಟರ ಮಟ್ಟಿಗೆ ಮರಾಠೆಯವರ ಪ್ರಕಾರ ಅಣ್ಣಾ ಕಿರ್ಲೋಸ್ಕರರ ಶಂಕರ ದಿಗ್ವಿಜಯ ಪ್ರಭಾವ ಬೀರಿದೆ ಎಂಬ ವಿಚಾರವನ್ನು ಪರೀಕ್ಷಿಸಬೇಕು. ಮರಾಠೆಯವರು ಕಲ್ಪಿತ ಸಾಮ್ರಾಜ್ಯದಲ್ಲಿದ್ದು ತಮ್ಮ 'ಮರಾಠಿ ರಂಗಭೂಮಿ ಚಾ ಪೂರ್ವರಂಗ' ಗ್ರಂಥವನ್ನು ಬರೆದಿರಬಹುದೇ ? ಸಂಶೋಧಕರಿಗೆ ಇದರಿಂದ ಸಮರ್ಪಕವಾಗಿ ಹಾದು ಮಾರ್ಗದರ್ಶನವಾಗದೇ ಇರದು. ಮರಾಠೆ ತಮ್ಮ ಗ್ರಂಥದಲ್ಲಿ ಹೊಸ ನಾಟ್ಯ ಸಾಹಿತ್ಯ ಇತಿಹಾಸವನ್ನೇ ಬರೆದು ಹೊರಟಿದ್ದಾರೆ. ಮಾತ್ರವಲ್ಲ, ಐತಿಹಾಸಿಕ ಸತ್ಯ ಘಟನೆಗಳಿಗೆ ಇರುವ ಹಿನ್ನೆಲೆಗಳನ್ನು ಹಿಂದೆ ಮುಂದೆ ಮಾಡಲು ಬಯಸಿದ್ದಾರೆ. ಇಂತಹರಿಗೆ 'ಮಹಾನ್ ಸಂಶೋಧಕ'ರೆನ್ನದೇ ಬೇರಿನ್ನಾವ ಬಿರುದು ಕೊಡಬೇಕು ?

(೮) ಅಣ್ಣಾ ಕಿರ್ಲೋಸ್ಕರ ಮತ್ತು ಶೇಷೋ ರಾಮಚಂದ್ರ ಇವರಿಬ್ಬರೂ ತಮ್ಮ ತಮ್ಮ ನಾಟಕಗಳ ಹಸ್ತಪ್ರತಿಗಳನ್ನು ಪರಸ್ಪರರಿಗೆ ತೋರಿಸಿ ಚರ್ಚೆ ಕೈಕೊಳ್ಳುವ ಪ್ರಸಂಗ ಉದ್ಭವಿಸುವದಿಲ್ಲ ಎಂದು ಮರಾಠೆ ಹೇಳಿದ್ದಾರೆ.

ಶೇಷೋ ರಾಮಚಂದ್ರ ಚುರಮುರಿಯವರು ಕ್ರಿಸ್ತ ಶಕ ೧೮೬೯-೭೦ರಲ್ಲಿ ಕನ್ನಡ ಶಾಕುಂತಲ ಬರೆದು ಮುದ್ರಿಸಿ ಪ್ರಕಟಗೊಳಿಸಿದರು. ಕಿರ್ಲೋಸ್ಕರರು ಕ್ರಿಸ್ತ ಶಕ ೧೮೬೬ರಲ್ಲಿ ಬೆಳಗಾಂವಿಗೆ ಮರಳಿದನು. ಆ ಕಾಲದಲ್ಲಿ ಚುರಮುರಿಯವರು ಮುಂಚೂಣಿಯಲ್ಲಿದ್ದರು. ಹೀಗಾಗಿ ಅಣ್ಣಾನ ಕ್ಷೇಮ ಸಮಾಚಾರ, ಹಿತ ಚಿಂತನೆ ಕೈಕೊಳ್ಳಲಿಲ್ಲ ಎಂದು ಹೇಳಿದ ಮರಾಠೆಯವರಿಗೆ ಇದಾವ ಸಂಗತಿಯೂ ಗೊತ್ತಿರಲಿಕ್ಕಿಲ್ಲ.

(೯) ಕ್ರಿಸ್ತ ಶಕ ೧೮೭೪ರಲ್ಲಿ ಬೆಳಗಾಂವಿಯ ಕೋರ ಗಲ್ಲಿಯಲ್ಲಿ ಮಂಟಪವನ್ನು ಹಾಕಿ ಅಣ್ಣಾನ ಸಂಗೀತ ಶಾಕುಂತಲವನ್ನು ಪ್ರಯೋಗಿಸಿದರು ಎಂದು ದತ್ತೋಪಂತ ಹಲ್ಯಾಳಕರ ಎಂಬ ಗಾಯಕ ನಟರ ಆತ್ಮಚರಿತ್ರೆಯ ಉಲ್ಲೇಖವನ್ನು ಮರಾಠೆ ಮಾಡಿದ್ದಾರೆ.

ಕನ್ನಡ ಶಾಕುಂತಲದ ಪ್ರಭಾವ ಅಣ್ಣಾ ಕಿರ್ಲೋಸ್ಕರರ ಮೇಲೆ ಎಷ್ಟು [illegible] ಎಂಬುದನ್ನು ಇದರಿಂದ ಹೇಳಬಹುದು. ಚುರಮುರಿಯವರು ಬಳಸಿದ ನಾಟ್ಯ ತಂತ್ರ, ಪದರಚನೆ ಇತ್ಯಾದಿ [illegible] ಎಂಬುದನ್ನು ಅಣ್ಣಾ ಕಿರ್ಲೋಸ್ಕರ [illegible] ಹೇಳಲು [illegible] ಶ್ರೇಯಸ್ಸು ಚುರಮುರಿಯವರಿಗೆ ಮೊದಲು ಸೇರುವದು.

(೧೦) ಕನ್ನಡ ಶಾಕುಂತಲಕಾರ ಭಾಷಾಂತರದಲ್ಲಿ ಷಟ್‌ಪದಿ ಬಳಸಿಲ್ಲ ನಿಜ. ಆದರೆ ಹೊಸ ತಂತ್ರವನ್ನೇ ಬಳಸಿದ್ದಾನೆ. ಇದೂ ಅಷ್ಟೇ ಸತ್ಯ. ಲೋಕಪ್ರಿಯ ಜಾನಪದ ಗೀತೆಗಳು ಕಾಣುವದಿಲ್ಲ ಎಂದೂ ಮರಾಠೆ ಹೇಳಿದ್ದಾರೆ. ಇದಕ್ಕೆ, "ನಾಟಕದ ಹಾಡು ಜನಪ್ರಿಯವಾದವು. ನಾಟಕದಲ್ಲಿನ ಗೀತೆಗಳನ್ನು ಪ್ರಚಲಿತವಾಗಿದ್ದ ಜಾನಪದ ಗೀತೆಗಳ ಧಾಟಿಯಲ್ಲಿ ಕರ್ನಾಟಕ ಸಂಗೀತದ ಹೆಸರಾಂತ ಕೀರ್ತನೆಗಳ ಧಾಟಿಯಲ್ಲಿ ದಾಸರ ಪದಗಳ ಧಾಟಿಗಳಲ್ಲಿ ಅಳವಡಿಸಲಾಗಿದ್ದಿತು. ಶೇಷಗಿರಿರಾಯರ ಪರಿವರ್ತನ ಪರಿಣತಿ, ಕನ್ನಡ ಅನುವಾದದ ಪ್ರಭಾವಪೂರ್ಣ ರಂಗವಿಧಾನ, ಆದುಮಾತಿನ ಬಳಕೆ, ಹಾಡುಗಳ ಆಕರ್ಷಕ ಧಾಟಿ ಈ ಎಲ್ಲ ಅವರ ಗೆಳೆಯರಾಗಿದ್ದ ಗುರ್ಲಹೊಸೂರಿನ ಅಣ್ಣಾಸಾಹೇಬರನ್ನು ಸೆರೆಹಿಡಿದವು ಎಂಬ ಡಾ. ಎಚ್. ಕೆ. ರಂಗನಾಥರ ಹೇಳಿಕೆ ಆಧಾರವಾಗಿದೆ. ಮರಾಠೆಯವರು ಇನ್ನೊಮ್ಮೆ ಕನ್ನಡ ಶಾಕುಂತಲದ ಮೂಲ ಆವೃತ್ತಿಯನ್ನು ನೋಡಬೇಕು. ಏಕೆಂದರೆ ಈಗಾಗಲೇ ಮೂಲ ಆವೃತ್ತಿಯನ್ನು ಮೂರು ಮೂರು ಬಾರಿ ನೋಡಿದ್ದೇನೆ ಎಂದು ಅವರು ಆತ್ಮವಿಶ್ವಾಸದಿಂದ ಹೇಳಿದ್ದಾರೆ.

(೧೧) ಕನ್ನಡ ಶಾಕುಂತಲದಲ್ಲಿ ಮರಾಠಿ ಪದಗಳನ್ನು ಧಾಟಿಯಾಗಿ ಬಳಿಸಿದುದನ್ನು ಮರಾಠೆ ಹೇಳಿದ್ದಾರೆ.

ಚುರಮುರಿಯವರು ಮರಾಠಿ ಸಾಹಿತ್ಯದಲ್ಲಿ ಕೃಷಿ ಮಾಡಿದುದನ್ನು ಈಗಾಗಲೇ ಕಂಡಿರುವೆವಲ್ಲ? ಉತ್ತರ ಕರ್ನಾಟಕದಲ್ಲಿ ರೇಲ್ವೆ ಸೌಕರ್ಯ ಉಂಟಾದ ಬಳಿಕ ಮರಾಠಿ ಭಾಷೆಯ ಪ್ರಭಾವ ಎಷ್ಟು ಬೇರೂರಿತೆಂಬುದಕ್ಕೆ 'ಪ್ರಭಾತ' (ಮಾರ್ಚ್ ೧೯೧೯) ದಲ್ಲಿ ಪ್ರಕಟವಾದ ಶಾಂತಕವಿಗಳ ಪದ್ಯವೇ ಸಾಕ್ಷಿಯಾಗಿದೆ:

ಎಲ್ಲಿ ನೋಡಲು ಮರಾಠಿಯರ ನಾಟಕ ಕೀರ್ತಿ
ಎಲ್ಲಿ ನೋಡಲು ಮರಾಠಿಯರ ನಾಟಕ ದರ್ಥಿ
ಎಲ್ಲಿ ನೋಡಲು ಮರಾಠಿಯರ ನಾಟಕ
[illegible] ಸಂಚಾರವು॥
ಎಲ್ಲಿ ನೋಡಲು ಮರಾಠಿಯರ ನಾಟಕದಾಟ
ಎಲ್ಲಿ ನೋಡಲು ಮರಾಠಿಯರ [ನಾಟಕದೂಟ
ಎಲ್ಲಿ ನೋಡಲು ಮರಾಠಿಯವರ
ನಾಟಕಮಯಂ ತಾನಾಯ್ತು ಕರ್ನಾಟಕಂ ॥

ಕನ್ನಡ ಭಾಷೆ ಬಲ್ಲ ಮರಾಠೆ ಇದೆಲ್ಲವನ್ನೂ ಗಮನಕ್ಕೆ ತಂದುಕೊಂಡಿಲ್ಲ ಎಂಬುದು ಸಿದ್ಧವಾಗುತ್ತದೆ.

(೧೨) ಶ್ರೀ ಚುರಮುರಿಯವರು 'ಭರತಶಾಸ್ತ್ರ ಕಲೋತ್ತೇಜಕ ನಾಟಕ ಕಂಪನಿ'ಯನ್ನು ಧಾರವಾಡದಲ್ಲಿ ಸ್ಥಾಪಿಸುವುದರಲ್ಲಿ ತೊಡಗಿದರು ಎಂದು ಮರಾಠೆ ಹೇಳಿದ್ದಾರೆ.

ಡಾ. ಎಚ್. ಕೆ. ರಂಗನಾಥರು 'ಭರತಶಾಸ್ತ್ರ ಕಲೋತ್ತೇಜಕ ನಾಟಕ ಮಂಡಳಿ'ಯ ಬಗ್ಗೆ ಕೆಳಗಿನಂತೆ ಹೇಳಿದ್ದಾರೆ: "ಕನ್ನಡ ನಾಡಿನಲ್ಲಿ ಮರಾಠಿ ನಾಟಕಗಳ ಇದರಿಂದಾಗಿ ಹೆಚ್ಚು ಜನಪ್ರಿಯವಾಗಹತ್ತಿವು. ಕನ್ನಡ ಜನ, ತಮ್ಮ ನುಡಿಯ ನಾಟಕವನ್ನು ನಿರ್ಲಕ್ಷಿಸಿದರು. ಕನ್ನಡ ಕಲಾವಿದರು ಕನ್ನಡ ನೆಲದಲ್ಲಿ ಮರಾಠಿ ನಾಟಕವನ್ನಾಡಿ ಹಿಗ್ಗುವಂತಾಯಿತೇ ಎಂದು ಅನೇಕ ವಿಚಾರವಂತ ಕನ್ನಡಿಗರು ಕುಗ್ಗಿಹೋದರು. ಕನ್ನಡ ರಂಗಭೂಮಿಯ ಸಂಘಟನೆಗೆ ಮತ್ತೆ ಪ್ರಯತ್ನ ನಡೆಯಿತು. ಈ ಪ್ರಯತ್ನದ ಮುಂದಾಳುತನವನ್ನು ಧಾರವಾಡ ತಾಲೂಕಿನ ಮದಿಹಾಳ ಗ್ರಾಮ ವಹಿಸಿಕೊಂಡಿತು. ೧೮೯೬ರಿಂದಲೂ ಅಲ್ಲಿ ವರ್ಷಂಪ್ರತಿ ಒಂದು ಕನ್ನಡ ನಾಟಕವನ್ನು ಅಭಿನಯಿಸುತ್ತಿದ್ದ 'ಪ್ರಾಚ್ಯ ಕ್ರೀಡಾ ಸಂವರ್ಧಕ ಮಂಡಳಿ'ಯು ತನ್ನ ಮುಂದಿನ ಧ್ಯೇಯ ಧೋರಣೆಗಳನ್ನು ಬದಲಿಸಿ, 'ಭರತ ಕಲೋತ್ತೇಜಕ ಸಂಗೀತ ಸಮಾಜ' ಎಂಬ ಹೆಸರನ್ನು ಧರಿಸಿತು.

ಶ್ರೀ ಮುದವೀಡು ಕೃಷ್ಣರಾಯರು ಚುರಮುರಿಯವರ ಕನ್ನಡ ಶಾಕುಂತಲದ ನಾಲ್ಕನೆಯ ಆವೃತ್ತಿಗೆ ಪ್ರಸ್ತಾವನೆಯನ್ನು ಬರೆದಿದ್ದಾರೆ. ತಮ್ಮ ಪ್ರಸ್ತಾವನೆಯಲ್ಲಿ ಭರತ ಕಲೋತ್ತೇಜಕ ಸಂಗೀತ ಸಮಾಜದ ಬಗ್ಗೆ ಹೀಗೆ ಹೇಳಿದ್ದಾರೆ. "ಧಾರವಾಡದ ಈ 'ಭರತ ಕಲೋತ್ತೇಜಕ ಸಂಗೀತ ಸಮಾಜ'ವು ಹುಟ್ಟುವ ನಾಲ್ಕಾರು ವರ್ಷ ಮೊದಲು ಹಾದಾಮಿಯ ಕೆಲವು ಜನ ಸಂಗೀತ

ಶಿವಪೂತುರದಿ (ಅಂಕು ೬) 'ನಿನ್ನೊಳೇನುಂಟು ದೋಷವು' (ಅಂಕು೩) ಈ ಸಂದರ್ಭದಲ್ಲಿ ಮೂಲ ಪದ್ಯಾನುವಾದದಲ್ಲಿ ಅಖಂಡವಾಗಿ ಪ್ರಸ್ಫುರಿತವಾಗಿ ಪ್ರವಾಹಗೊಂಡ ಸ್ವ. ಶೇಷಗಿರಿರಾಯರ ಕವಿತ್ವಸ್ಫೂರ್ತಿಯು ಮೂಲದಲ್ಲಿದ್ದ ಎಷ್ಟೋ ಗದ್ಯಗಳನ್ನು ಪದ್ಯರೂಪವಾಗಿ ಮಾರ್ಪಡಿಸಿರುವುದು ನಿದರ್ಶನಕ್ಕೆ ಬರುತ್ತದೆ. ಶೇಷಗಿರಿರಾಯರ ಪ್ರತಿಭೆಯು ಅವಿಚ್ಛಿನ್ನವಾಗಿ ಪ್ರಕಟವಾಗಿರುವುದು ಎಂದು ಹೇಳಿದ ಮುದವೀಡು ಕೃಷ್ಣರಾಯರ ವಿಚಾರಗಳು ಯೋಗ್ಯವಾಗಿವೆ.

(೧೫) 'ಇಸ ತನ ಧನಕೀ ಕೌನ ಭಡಾಯಿ' ಈ ಧಾಟಿಯನ್ನು ಸೂಚಿಸಿದ ಪದರಚನೆಯನ್ನೂ ಬರವೂ ಭಾಷೆಯು ಭಾಷಾಂತರಕಾರರು ಕೈಕೊಂಡಿರುತ್ತಾರೆ. ಮರಾಠಿ ಅನುವಾದದಲ್ಲಿ ಸಾರಥಿಯ ಸಂವಾದ ಹಿಂದುಸ್ತಾನಿ ಭಾಷೆಯಲ್ಲಿ ಕೋಳಿ ಕೈದಿ (ಮೀನುಗಾರ ಕೈದಿ) ಪ್ರವೇಶದಲ್ಲಿ ಕುಣಬಾವೂ ಜನರು ಆಡುಭಾಷೆಯನ್ನು ಬಳಸಲಾಗಿದೆ. ಕನ್ನಡ ಭಾಷಾಂತರದಲ್ಲಿ ಸಮಗ ಈ ರೀತಿಯಾಗಿ ಇದ್ದುದು ಕಾಣುವದಿಲ್ಲ. ಕನ್ನಡ ಶಾಕುಂತಲದಲ್ಲಿ ಎಲ್ಲ ಕಡೆಗೂ ಪ್ರೌಢ ಹಳೆಗನ್ನಡ ಭಾಷೆಯನ್ನು ಪ್ರಯೋಗಿಸಲಾಗಿದೆ ಎಂದು ಮರಾಠೆಯವರು ಹೇಳಿದ್ದಾರೆ.

ಚುರಮುರಿಯವರು ತಮ್ಮ ಶಾಕುಂತಲವನ್ನು ಕ್ರಿಸ್ತಶಕ ೧೮೭೦ರಲ್ಲಿ ಪ್ರಕಟಿಸಿದರು. ಅಣ್ಣಾ ಕಿರ್ಲೋಸ್ಕರನ 'ಸಂಗೀತ ಶಾಕುಂತಲ' ಆಮೇಲೆ ಹೊರಬಂದಿತು. ಚುರಮುರಿಯವರ 'ಇಸ ತನ ಧನಕೀ ಕೌನ ಬಢಾಯಿ' ಈ ಹಿಂದೀ ಗೀತೆಯನ್ನು ಧಾಟಿಯಾಗಿ ಬಳಿಸಿದವರಲ್ಲಿ ಮೊದಲಿಗರು. ಅಂದ ಬಳಿಕ ಈ ಹಿಂದಿ ಗೀತೆಯ ಪ್ರಭಾವ ಅಣ್ಣಾ ಕಿರ್ಲೋಸ್ಕರನ ಮೇಲೆ ಉಂಟಾಗಿರುವದು ಎಂದು ಹೇಳಬರುವುದು. ಕನ್ನಡ ಶಾಕುಂತಲದಲ್ಲಿ ಸಾರಥಿಯ ಸಂವಾದ ಆಡುಗನ್ನಡದಲ್ಲಿದೆ. ಮೀನುಗಾರ ಕೊತವಾಲನ ಸಂವಾದವಂತೂ ಹಳ್ಳಿಗನ ಆಡುಭಾಷೆಯಲ್ಲಿದೆ. ಇದಕ್ಕೆ ಹಳೆಗನ್ನಡವೆಂದು ಆಕ್ಷೇಪ ಮಾಡಿದ ಮರಾಠೆ ಇವರಿಗೆ ಚುರಮುರಿಯವರ ಕನ್ನಡ ಶಾಕುಂತಲವನ್ನು ಪುನಃ ಓದಲು ಸೂಚಿಸುವೆನು.

ಕಾರವಾರ ತಾಲೂಕಿನಿಂದ ೧೨-೧೫ ಮೈಲಿನ ಅಂತರದ ಮೇಲಿರುವ ಸಹ್ಯ ಪರ್ವತದ ಪ್ರಾಂತ ಮತ್ತು ಕಾಳೀನದಿಯ ದಂಡೆಯ ಮೇಲೆ ಇರುವ ಸೂಪಾ, ಕುಂಬಾರವಾಡಾ, ಆವಾಶೀ, ಕದ್ರಾ, ಕುಕರಾ, ಕಾರೇಲಿ, ಪಾಂಜೇಲಿ, ಸಿರೂರ, ತೇಲ್ರಾಲಿ, ಘೋಯ, ಧೋಕರಪಾ, ಕುಂಡರಾ, ಡಿಗ್ಗಿ, ಇತ್ಯಾದಿ ಗ್ರಾಮಗಳಲ್ಲಿ ಕುಣಬಿ ಜನರು ಇರುವರು. ಇವರು ಮೂಲತಃ ಗೋವಾ ನಿವಾಸಿಗಳು. ೧೬ನೆಯ ಶತಮಾನದಲ್ಲಿ ಗೋವೆಯಿಂದ ವಲಸೆ ಹೊರಟ ಬ್ರಾಹ್ಮಣರೊಡನೆ ಬಂದವರು. ಮರಾಠೆಯವರು ಐತಿಹಾಸಿಕ ಸತ್ಯವನ್ನು ಪರೀಕ್ಷಿಸುವದನ್ನು ಮರೆತಂತೆ ತೋರುತ್ತದೆ.

ಡಾ. ಶ್ರೀನಿವಾಸ ಹಾವನೂರರು ತಮ್ಮ 'ಹೊಸಗನ್ನಡ ಸಾಹಿತ್ಯದ ಅರುಣೋದಯ' ಎಂಬ ಸಂಶೋಧನಪರ ಗ್ರಂಥದಲ್ಲಿ ಚುರಮುರಿ ಶೇಷಗಿರಿರಾಯರ ಬಗ್ಗೆ ಹೀಗೆ ಹೇಳಿದ್ದಾರೆ: "ಶೇಷಗಿರಿರಾಯನು ಕಲಾಭಿಜ್ಞ ಮನೆತನದಲ್ಲಿ ಜನಿಸಿದನು. ತಂದೆ ರಾಮಚಂದ್ರರಾಯನು ಆಗಿನ ಕಾಲದ ಪ್ರಸಿದ್ಧ ಗವಯಿಯಾಗಿದ್ದರಿಂದ ಮನೆಯಲ್ಲಿ ಸಂಗೀತ ಧಾರೆ ಕೇಳಿ ಬರುತ್ತಿತ್ತು. ಶೇಷಗಿರಿರಾಯನು ಸಂಗೀತ ಪ್ರೇಮ ಹಾಗೂ ಅಬಕಾರಿ ಇಲಾಖೆಯಲ್ಲಿ ತಂದೆಯಂತೆ ಒಂದು ಹುದ್ದೆಯನ್ನು ಗಿಟ್ಟಿಸಿಕೊಂಡಿದ್ದನು. ತನ್ನ ನೌಕರಿಯ ಮಹತ್ತರ ವರ್ಷಗಳನ್ನು ಮುಂಬೈಯಲ್ಲಿ ಕಳೆದು ಅಲ್ಲಿ ಇದ್ದಾಗಲೇ ಗ್ರಂಥ ರಚನೆ ಮಾಡಿದ್ದನಾದ್ದರಿಂದ ಮುಂಬೈಯ ಆದ್ಯ ಕನ್ನಡ ಸಾಹಿತಿಯೆಂದು ನಾವು ಇವನನ್ನೇ ಗಣಿಸತಕ್ಕದ್ದು. ಹೊಸಗನ್ನಡದ ಪ್ರಪ್ರಥಮ ನಾಟಕವೆಂಬ ಹೆಗ್ಗಳಿಕೆ ಇದಕ್ಕೇನೇ ಸಲ್ಲತಕ್ಕದ್ದು. ಅದು ಮೂಲದಲ್ಲಿಯ ದೃಶ್ಯಕ್ಕೆ ಗದ್ಯ, ಪದ್ಯ ಪದ್ಯಕ್ಕೆಪೆಂಬ ರೀತಿಯಲ್ಲಿ ಅನುವಾದಗೊಳ್ಳದೇ ಆಗಿನ ಕಾಲದಲ್ಲಿ ಉತ್ತರ ಕರ್ನಾಟಕದೊಳಗೆ ಪ್ರಚಲಿತವಿದ್ದ ದೇಸಿ ಹಾಡಿನ ಪರಂಪರೆಗೆ ಗ್ರಂಥ ಸ್ವರೂಪ ಕೊಡಲಾಯಿತು. ಕಾಲಿದಾಸನ ಗದ್ಯ ಸಂಭಾಷಣೆಗಳನ್ನು ಕೂಡ ಅಲ್ಲಲ್ಲಿ ಹಾಡುಗಳನ್ನಾಗಿ ಪರಿವರ್ತಿಸಿದ್ದು ಮೂಲಕ ಜನತೆಯ ಸಂಗೀತ ಒಲವಿಗೆ ಕನ್ನಡಿ ಹಿಡಿದಿದ್ದಾನೆ. ಜೊತೆಗೆ ಆ ಹಾಡುಗಳು ಬೋಧ

# ನಿಮಗೆ ಗೆಲವಿನ ಆಹ್ಲಾದ




ಪೂರ್ತಿಯಾಗಿ ಹೊಸತು ಲಿರಿಲ್. ಹಸಿರಿನ ತರಂಗವಿದೆ. ನಿಂಬೆಯ ಲವಲವಿಕೆಯ ಆಹ್ಲಾದವಿದೆ. ಪುಲಕಿತಗೊಳಿಸುವ ಲಿರಿಲ್ ನಿಮ್ಮನ್ನು ಆಹ್ಲಾದಕರ ನವಕನ್ಯೆಯನ್ನಾಗಿ ಇರಿಸುತ್ತದೆ.

**ಲಿರಿಲ್**
ಆಹ್ಲಾದಕರ ಸಾಬೂನು

**ನಿಂಬೆಯ ಲವಲವಿಕೆಯ ಉಲ್ಲಾಸಯುಕ್ತ**

ಹಿಂದುಸ್ತಾನ್ ಲೀವರ್ ಅವರ ಉತ್ಕೃಷ್ಟ ತಯಾರಿಕೆ

ಲಿಂಟಾಸ್-LL-21-1710 KN

ಪೂರ್ಣವೂ ಸರಳವೂ ಆದ್ದುದರಿಂದ ವಿವಾಹ ಮುಂತಾದ ಪ್ರಸಂಗಗಳಲ್ಲಿ ಬಿದಿ ಬಿದಿಯಾ ಹಾಡುವಷ್ಟು ಅವು ಜನಪ್ರಿಯತೆಯನ್ನು ಪಡೆದವು. ಅದರಲ್ಲಿಯ ರಾಗಧಾಟಿಗಳನ್ನು ಕೆಲ ಮಟ್ಟಿಗೆ ಸ್ವೀಕರಿಸಿದ್ದು ಕಿರ್ಲೋಸ್ಕರ ಅಣ್ಣಾಸಾಹೇಬರ ಮರಾಠಿ ಶಾಕುಂತಲವು ಅಲ್ಲಿಯ ರಂಗಭೂಮಿಯ ಮೇಲೆ ಸುವಿಖ್ಯಾತವಾಯ್ತು."

ಡಾ. ರಾ. ಯ. ಧಾರವಾಡಕರ ಇವರು ತಮ್ಮ "ಹೊಸಗನ್ನಡ ಸಾಹಿತ್ಯದ ಉದಯಕಾಲ" ಎಂಬ ಸಂಶೋಧನಪರ ಗ್ರಂಥದಲ್ಲಿ ಚುರಮುರಿ ಶೇಷಗಿರಿ ರಾಯರ ಕಾಲ ಕ್ರಿಸ್ತ ಶಕ ೧೮೨೩-೧೮೮೪ ಎಂದು ಹೇಳಿ ಜೈಮಿನಿ ಭಾರತದ ಮರಾಠಿ ಅನುವಾದ ಕ್ರಿಸ್ತ ಶಕ ೧೮೯೬ ಎಂದೂ ವ್ಯಕ್ತಪಡಿಸಿದ್ದಾರೆ. ಈ ಸಂದರ್ಭದಲ್ಲಿ ನಾನು ಹೇಳಬಯಸುವುದೇನೆಂದರೆ ಚುರಮುರಿ ಶೇಷಗಿರಿರಾಯರು ಸ್ವರ್ಗಸ್ಥರಾದುದು ೨-೬-೮೨ರಲ್ಲಿ. 'ಜೈಮಿನಿ ಭಾರತ'ದ ಪೀಠಿಕಾಸಂಧಿ ಮರಾಠಿ 'ವಿವಿಧಜ್ಞಾನ ವಿಸ್ತಾರ'ದಲ್ಲಿ ಪ್ರಕಟವಾದ ಕಾಲ ಜನವರಿ ೧೮೬೮, ಅಂಕ ೨ ಪುಸ್ತಕ ೧. ದಯವಿಟ್ಟು ಗ್ರಂಥಕರ್ತರು ಈ ಮುದ್ರಣದೋಷಗಳನ್ನು ಸರಿಪಡಿಸಿಕೊಳ್ಳಲು ನನ್ನ ನಮ್ರ ವಿನಂತಿ.

ಡಾ. ಎಚ್. ಕೆ. ರಂಗನಾಥರು ತಮ್ಮ "ಕರ್ನಾಟಕ ರಂಗಭೂಮಿ" ಪುಟ ಸಂಖ್ಯೆ ೨೯೩ರಲ್ಲಿ "೧೮೭೮-೭೯ರಲ್ಲಿ ಬೆಳಗಾಂವಿಯ ಗುರ್ಲಹೊಸೂರಿನ ಅಣ್ಣಾಸಾಹೇಬ ಕಿರ್ಲೋಸ್ಕರ ಅವರು ಕಾಳಿದಾಸನ ಶಾಕುಂತಲವನ್ನು ಮರಾಠಿ ಭಾಷೆಗೆ ಪರಿವರ್ತಿಸಿದರು. ಇದಕ್ಕೆ ಹತ್ತು ವರ್ಷಗಳ ಹಿಂದೆಯೇ ೧೮೬೯ರಲ್ಲಿ ಅವರ ಮಿತ್ರರೂ ಅದೇ ಊರಿನವರೂ ಆದ ಚುರಮುರಿ ಶೇಷಗಿರಿರಾಯರು ಶಾಕುಂತಲವನ್ನು ಕನ್ನಡಕ್ಕೆ ಅನುವಾದ ಮಾಡಿ ಪ್ರಸಿದ್ಧಿ ಪಡೆದಿದ್ದರು," ಎಂದು ಹೇಳಿದ್ದಾರೆ. ಚುರಮುರಿ ಶೇಷಗಿರಿರಾಯರ ಶಾಕುಂತಲ ನಾಟಕವು ಪ್ರಸಿದ್ಧವಾದದ್ದು ೧೮೭೦ರಲ್ಲಿ. ಇದೂ ಕೂಡ ಮುದ್ರಣದೋಷವೆಂದು ನನ್ನ ಗ್ರಹಿಕೆ.

ಈ ಈರ್ವರೂ ಹಿರಿಯ ಕನ್ನಡ ಸಾಹಿತಿಗಳು ನನ್ನ ಗುರುಗಳು. ಮುದ್ರಣದೋಷವನ್ನು ತೋರಿಸಿ ಕೊಟ್ಟಿದ್ದಕ್ಕೆ ನನ್ನನ್ನು ಕ್ಷಮಿಸುವರು ಎಂಬ ಆಸೆಯಿದೆ.

ಕೊನೆಯದಾಗಿ ಚುರಮುರಿ ಶೇಷಗಿರಿರಾಯರು ನಾಟ್ಯಾಚಾರ್ಯರು. ಹುಟ್ಟು ಕವಿಗಳು. ಕಾವ್ಯದ ಮರ್ಮವನ್ನರಿತ ಪ್ರತಿಭಾವಂತರು. ರಸಪರಿಪುಷ್ಟವಾದ ಕಾವ್ಯವು ಹೇಗಿರಬೇಕೆಂಬ ತಿಳಿದ ನಾಟಕಕಾರರು ಎಂದು ಹೇಳಬಹುದು. "ಉಗುರೆಳೆಗೆಂಪುವಣ್ಣೊಡೆದ ದ್ರಾಕ್ಷದ ಗೊಂಚಲುಗಳಿಂದ ಪರಿಶುದ್ಧವಾದ ಅಭಿನವ ರಸವನ್ನು ತೆಗೆದು ಅದರೊಳಗೆ ತಮ್ಮ ಸವಿನುಡಿಯ ಸಕ್ಕರೆಯ ಮಸಾಲೆಯನ್ನು ಬೆರೆಸಿ ಅತ್ಯಂತ ಜಾಣ್ಮೆಯಿಂದ ರುಚಿಕಟ್ಟಾದ ಪಾಕವನ್ನು ಮಾಡಿ ಕನ್ನಡ ಜನಾಂಗಕ್ಕೆ ಬಡಿಸಿರುವರು," ಎಂದು ಹೇಳಿದ ಮುದವೀಡು ಕೃಷ್ಣರಾಯರ ಹೇಳಿಕೆಯಲ್ಲಿ ಅತಿಶಯೋಕ್ತಿ ಇರುವದಿಲ್ಲ. ಚುರಮುರಿಯವರ ಶಾಕುಂತಲ ನಾಟಕವು ರಂಗಭೂಮಿಯ ಮೇಲೆ ಪ್ರದರ್ಶಿತವಾಗುವ ಮೊದಲೇ ಮೂರು ಆವೃತ್ತಿಯನ್ನು ಕಂಡಿತು. ಜಗತ್ತಿನ ನಾಟ್ಯ ಇತಿಹಾಸದಲ್ಲಿ ನಾಟಕವು ರಂಗಪ್ರದರ್ಶನಗೊಳ್ಳುವ ಪೂರ್ವವೇ ಆವೃತ್ತಿ ಪಡೆದ ಘಟನೆಗಳು ತೀರ ವಿರಳ. ಕನ್ನಡ ಶಾಕುಂತಲ ನಾಟಕವು ಆ ಮಾಲಿಕೆಯಲ್ಲಿ ಸೇರುತ್ತದೆ. ✿



Edited, printed & published by M. N. Mahishi on behalf of the Administrator, Loka Shikshana Trust, Samyukta Karnataka Press, Koppikar Road, Hubli-580 020. Rept: Bombay: V. Satyamurthy Phone: 522412. Calcutta: H. Majumdar Phone: 46-4233; Madras, K.A. Subramanian Phone: 842201; New Delhi: P. R. Chopra Phone: 714130.

KASTURI PRICE: 2-50 Regd. No. KRNG 43
*Registered with the Registrar of News papers for India under No. 3533/57*